

ಪ್ರತಿ ತಿಂಗಳ ೧೫ನೇ ತಾರೀಖಿಗೆ ಪ್ರಕಟವಾಗುವದು.

ವಾರ್ಷಿಕ ಚಂದಾ ಅಂಚೆವೆಚ್ಚಸಹಿತ ರೂ. ... ೪—೦ ವ್ಹಿ. ಪಿ. ಖರ್ಚು ೦—೪—೦

ಸಂಪುಟ ೧೦ ] ಅಕ್ಟೋಬರ ೧೯೪೫. [ ಸಂಚಿಕೆ ೧

## ವಿಷಯಾನುಕ್ರಮಣಿಕೆ.

# ಶಿವಾನುಭವ

ವರ್ಷ ೨೦ | ಅಕ್ಟೋಬರ ೧೯೪೫. | ಸಂಚಿಕೆ ೧

## ಚನ್ನಬಸವೇಶ್ವರ ವಚನ ವಿಶೇಷಗಳು.

(ಲೇಃ— ಶ್ರೀ. ಜ. ಪ. ಚನ್ನಬಸವರಾಜದೇಶಿಕೇಂದ್ರ ಸ್ವಾಮಿಗಳವರು,
ಜಗದ್ಗುರು ಶ್ರೀಮನ್ನಿಡುಮಾಮಿಡಿ ಶ್ರೀಶೈಲ ಸಂಸ್ಥಾನ.)

### ಇಷ್ಟಲಿಂಗವಿರಲು ಸೃಷ್ಟಿಲಿಂಗಕ್ಕೆಳಸಬಾರದು.

ಅಮೃತವಿರಲು ಹುಳಿಗಾಗಿ ಹವಣಿಸುವುದು, ಹಾಲಕಡಲಲ್ಲಿದ್ದು ಹಸುವನ್ನು ಹುಡುಕುವುದು, ಹೇಗೋ ತನ್ನಲ್ಲಿ ಶಿವಲಿಂಗವಿದ್ದು ಅನ್ಯ ಸ್ಥಾವರಲಿಂಗಕ್ಕೆಳಸುವುದು ಹಾಗೆ.

"ಅಂಗದ ಮೇಲೆ ಪರಶಿವಲಿಂಗವಿರ್ದು ಸ್ಥಾವರ ಲಿಂಗಕ್ಕೆ ಶರಣೆನಲಾಗದು. ತನ್ನಲ್ಲಿ ಲಿಂಗವಿರ್ದಂತೆ ಅನ್ಯಲಿಂಗದ ದರ್ಶನಸ್ಪರ್ಶನವ ಮಾಡುವ ಕುನ್ನಿಗಳನೇನೆಂಬೆನಯ್ಯಾ? ತನ್ನಂಗದ ಲಿಂಗವು ರಂಗದ ಕಲ್ಲು ತಾಗಿದಡೆ, ಆವುದು ಹಿರಿದು,—ಆವುದು ಕಿರಿದು ಎಂಬೆಪಯ್ಯಾ, ತಾಳಸಂಪುಟಕ್ಕೆ ಬಾರದ ಘನವು? ಸಾಕ್ಷಿಃ— 'ಪ್ರಾಣಲಿಂಗಂ ಪರಿತ್ಯಜ್ಯ ಅನ್ಯಲಿಂಗ ಮುಪಸ್ಥಿತಂ। ಶ್ವಾನಯೋನಿಶತಂಗತ್ವಾ ಚಂಡಾಲಗೃಹಮಾಚರೇತ್' ॥ ಎಂದುದಾಗಿ...ಹಂತಿಲಿದ್ದ ಲಿಂಗವ ಕಿರಿದು ಮಾಡಿ ದೂರದಲ್ಲಿದ್ದ ಸ್ಥಾವರವ ಹಿರಿದು ಮಾಡುವ ಅನಾಚಾರಿ ವ್ರತಭ್ರಷ್ಟರ ಎನಗೊಮ್ಮೆ ತೋರದಿರಯ್ಯಾ ಕೂ. ಚ. ಸಂ. ದೇವಾ!"

ಪರಮ ಪತಿವ್ರತೆಗೆ ಹೇಗೆ ಪತಿಯೊಬ್ಬನೋ ಹಾಗೆ ಶರಣ ಸತಿಗೆ. ತನ್ನ ಲಿಂಗಪತಿಯೊಬ್ಬನೇ ಶರಣ್ಯ, ಸಂದರ್ಶನೀಯ; ಸಂಸ್ಪರ್ಶನೀಯ.

ಪತಿವ್ರತೆಗೆ ಉಳಿದವರಲ್ಲಿ ಯಾವ ಭಾವವಿರಬೇಕೋ ಶರಣನಿಗೆ ಅನ್ಯ ದೇವರಲ್ಲಿ ಆ ಭಾವವಿರಬೇಕು. ಸತಿಯು ಪತಿಗೆ ಸಲ್ಲಿಸುವ ಎಲ್ಲ ಉಪಚಾರಗಳನ್ನೂ ಪರರಿಗೆ ಮಾಡಲು ಸಾಧ್ಯವಿಲ್ಲ. ಮಾಡಿದಲ್ಲಿ ಸತೀತ್ವಕ್ಕೆ ಭಂಗ. (ಪತಿವ್ರತಿಯಾದರೆ ಅನ್ಯಪುರುಷನ ಸಂಗವೇತಕಯ್ಯ?) ಎಂದು ಕೇಳುತ್ತಾನೆ ಚನ್ನಬಸವಣ್ಣ! ಸಾಲದ್ದಕ್ಕೆ 'ಒಬ್ಬನ ಕೈವಿಡಿದು, ಒಬ್ಬಗೆ ಮಾತುಕೊಟ್ಟು, ಮತ್ತೊಬ್ಬರಿಗೆ ಸನ್ನೆಯ ಮಾಡುವ ಬೋಸರಗಿತ್ತಿಯಂತೆ' ಎಂದೆನ್ನುತ್ತಾನೆ. ಆದ್ದರಿಂದ ಶರಣನು ತನ್ನ ಪ್ರಾಣಲಿಂಗವಿದ್ದು ಸ್ಥಾವರ ಲಿಂಗಕ್ಕೆ ಶರಣೆಂದು ಹರಸಿಕೊಂಡು ಹೋಗಿ ಹೋರಾಟಗೊಳ್ಳಬಾರದು. ಹಸಗೆಡಬಾರದು. ಗೊಂಡರೆ ಆತ ಅಚಾರಬಾಹಿರ, ವ್ರತಭ್ರಷ್ಟ, ಅಪಸ್ಮಾರಿ.

ಮೇಲ್ಕಂಡ ವಚನದಲ್ಲಿ ಪ್ರಾಣಲಿಂಗದ ಪ್ರಾಮುಖ್ಯತೆಯನ್ನು ಪ್ರತಿಪಾದಿಸುವ ಅಗಮಶ್ಲೋಕವನ್ನು ಸಾಕ್ಷಿಯಾಗಿ ಸ್ವೀಕರಿಸಲಾಗಿದೆ. ಇದರಿಂದ ಪ್ರಾಣಲಿಂಗ ನೆಲೆ ಕಲೆಗಳನ್ನು ಸಂಸ್ಥಾಪಿಸಿದ ಮತ ಮೊದಲಿತ್ತೆಂದು ವ್ಯಕ್ತವಾಗುವದಿಲ್ಲವೆ?

## ತ್ರಿವಿಧಾರ್ಪಿತ.

ತ್ರಿವಿಧಾರ್ಪಣ ವಿಧಾನವು ವೀರಶೈವರ ವೈಶಿಷ್ಟ್ಯದಲ್ಲೊಂದು. ಪ್ರತಿ ಪದಾರ್ಥದಲ್ಲಿರುವ ರೂಪು, ರುಚಿ, ತೃಪ್ತಿಗಳ ರಹಸ್ಯ ಭೇದವನ್ನರಿತು ಅರ್ಪಿಸುವ ವಿಧಾನವು ಇತರ ಮತಗಳಲ್ಲಿ ಕಾಣಬರುವದಿಲ್ಲ. ಇದು ಎಂದು ಹುಟ್ಟಿ ಬಂದಿದೆಯೋ ಅಂದೇ ವೀರಶೈವದ ಅಸ್ತಿತ್ವವೆಂದೇ ಹೇಳಬೇಕು. ಈ ತ್ರಿವಿಧಾರ್ಪಣವನ್ನು ಪ್ರತಿಪಾದಿಸಿದ ಆಗಮಶ್ಲೋಕ ಪ್ರಮಾಣವನ್ನಂಗೀಕರಿಸಿದೆ ಈ ವಚನ.

" ರೂಪಾಗಿ ಬಂದುದ ಕಾಯದ ಕೈಯ್ಯಲ್ಲಿ ಕೊಡುವುದು. ರುಚಿಯಾಗಿ ಬಂದುದ ಮನದ ಕೈಯ್ಯಲ್ಲಿ ಕೊಡುವುದು. ತೃಪ್ತಿಯಾಗಿ ಬಂದುದ ಭಾವದ ಕೈಯ್ಯಲ್ಲಿ ಕೊಡುವುದು ಅರ್ಪಿಸುವ ತೆರನಿದು. ರೂಪು, ರುಚಿ, ತೃಪ್ತಿಯು ಅನುವರಿದೊಡೆ ಪ್ರಸಾದಿಯಯ್ಯ. ಸಾಕ್ಷಿ. 'ಇಷ್ಟಾರ್ಪಿತಂಚ ರೂಪಿಣಾಂ ಪ್ರಾಣಾರ್ಪಿತಂಚ ರುಚಿಸ್ತಥಾ। ತೃಪ್ತ್ಯರ್ಪಿತಂಚ ಸುಜ್ಞಾನಂ ಅರ್ಪಿತಂ ತ್ರಿವಿಧಾತ್ಮಕಮ್'॥ ಇಂತೆಂದುದಾಗಿ ರೂಪು, ರುಚಿ, ತೃಪ್ತಿಯ ಕೊಡಬಲ್ಲಡೆ ಭಕ್ತನಯ್ಯ ಕೂ. ಚ. ಸಂ. ದೇವರಲ್ಲಿ. "

## ಕಾಲಜ್ಞಾನ, ಶಿವಜ್ಞಾನ.

" ಬ್ರಹ್ಮೋಪದೇಶವಾಯಿತ್ತೆಂದು ಬ್ರಹ್ಮದೊಡನೆ ಧಿಕ್ಕರಿಸಬೇಡ. ಕಾಲಜ್ಞಾನವಾಯಿತ್ತೆಂದು ಕರ್ಮವ ಹಳಿಯಬೇಡ. ಶಿವಜ್ಞಾನದೀಪ್ತಿ ತಲೆದೋರಿತ್ತೆಂದು ಶಿವಶರಣರೊಡನೆ ಧಿಕ್ಕರಿಸಬೇಡ. ಈ ತ್ರಿವಿಧದುತ್ಪತ್ತಿ ಸಲ್ಲದು. ಈ ವೇಶಿಯ ಮಕ್ಕಳಿಗೆ ನಾನೇನೆಂಬೆಯ್ಯಾ ಕೂ. ಚ. ಸಂ. ದೇವಾ? "

ಅಹಂಕಾರದ ಅರಿವು ಅಡಿಕೆಗೂ ತರವಲ್ಲ. ಶಿವಶರಣರನ್ನು ಧಿಕ್ಕರಿಸಿದ ಶಿವಜ್ಞಾನವು, ಕರ್ಮವ ಹಳಿದ ಕಾಲಜ್ಞಾನವು, ಬ್ರಹ್ಮವ ತಿರಸ್ಕರಿಸಿದ ಬ್ರಹ್ಮೋಪದೇಶವು—ನಿರರ್ಥಕವಾದವು. ಧಿಕ್ಕಾರವು ಅಹಂಕಾರದ ಮೊಳಕೆ. ಅಹಂಕಾರವು ಅಧಃಪತನಕ್ಕೆ ಬೀಜ. ಇಂತಹ ಕಾಲಜ್ಞಾನವಾಗಲಿ, ಶಿವಜ್ಞಾನವಾಗಲಿ ಇದ್ದೇನು, ಇಲ್ಲದಿದ್ದರೇನು ?

ವಚನಕಾರರ ಕಾಲವು ಶಿವಜ್ಞಾನಿಗಳ ಕಾಲವಾಗಿದ್ದಂತೆ ಕಾಲಜ್ಞಾನಿಗಳ ಕಾಲವೂ ಆಗಿತ್ತು. ಅನೇಕ ಶಿವಶರಣರು ಕಾಲಜ್ಞಾನದ ವಚನಗಳನ್ನು ರಚಿಸಿದ್ದಾರೆ. ಇತರ ವಿಚಾರಗಳಂತೆ ಕಾಲಜ್ಞಾನವನ್ನು ಅವರು ಕಡೆಗಣ್ಣಿನಿಂದ ನೋಡುತ್ತಿರಲಿಲ್ಲ. ಶಿವಜ್ಞಾನಿಗೆ ಶಿವಶರಣರು ಹೇಗೆ ಮಾನ್ಯರೋ, ಕಾಲಜ್ಞಾನಿಗೆ ಕರ್ಮವೂ, ಬ್ರಹ್ಮೋಪದೇಶಿಗೆ ಬ್ರಹ್ಮವೂ ಅಷ್ಟೇ ಮಾನ್ಯವಾದವುಗಳು.

## ಲಿಂಗಧಾರಣೆ ಯಾವಾಗ?

ಪ್ರತಿಯೊಬ್ಬ ವೀರಶೈವನಿಗೂ ಲಿಂಗಧಾರಣ, ಶಿವದೀಕ್ಷೆ ಎಂಬ ಎರಡು ಸಂಸ್ಕಾರಗಳುಂಟು. ಇವುಗಳಲ್ಲಿ ಶಿವದೀಕ್ಷೆಯನ್ನು ಎಂಟು ವರುಷಗಳ ಮೇಲೆ ಹದಿನಾರು ವರುಷಗಳೊಳಗೆ ಯಾವಾಗಲಾದರೂ ಮಾಡಬಹುದು. ಲಿಂಗಧಾರಣೆಯನ್ನು ಮಾತ್ರ ಹುಟ್ಟಿದೊಡನೆಯೇ ಮಾಡಬೇಕು. ಹೀಗೆ ಮಾಡುವದರಿಂದ ಮಗುವಿಗೆ ಯಾವ ದೋಷಗಳಿದ್ದರೂ ಪರಿಹಾರವಾಗುತ್ತದೆ. ಇದೇ ವೀರಶೈವ ಮಾರ್ಗ. ಇದನ್ನು ಮೀರಿ ಮತ್ತೊಂದು ದೇವರಿಗೆ ಹರಕೆ ಹೊತ್ತು ಮಂತ್ರ ಯಂತ್ರಗಳನ್ನು ಕಟ್ಟಿಸಿದಲ್ಲಿ ಅವರು ಅಷ್ಟಾವರಣಕ್ಕೆ ಹೊರಗು. ಅದ್ವಿತೀಯಾನಂದಕ್ಕೆ ಸಲ್ಲರು. ಅಂಥವರನ್ನು ಶಿವಶರಣರು ಮೆಚ್ಚರು.

“ ಶಿವಭಕ್ತರಲ್ಲಿ ಗರ್ಭೋತ್ಪತ್ತ್ಯವಾದ ಶಿಶುವಿಂಗೆ ಪಾದೋದಕದಿಂದೆ ಜಳಕವ ಮಾಡಿಸುವುದು. ವಿಭೂತಿಯ ಪಟ್ಟವಂ ಕಟ್ಟಿ ಕೊರಳಲ್ಲಿ ಲಿಂಗ ಸಾಹಿತ್ಯವಂ ಮಾಡಿ ಪ್ರಸಾದದ ಎಣ್ಣೆ ಬೆಣ್ಣೆ ಹಾಲು ತುಪ್ಪವನೆರೆದು ಸಲಹುವುದೇ ಆಚಾರ......” (ಪುಟ-೨೪, ವ-೧೩.)

## ಒಡೆಯರು ಬಂದರೆ ಒಕ್ಕುದೇ ಪದಾರ್ಥ.

‘‘...ಲಿಂಗಾರ್ಚನೆಯಾದ ಮೇಲೆ ಲಿಂಗಾರ್ಪಿತದ ಮಾಡುತ್ತಿರಲು, ಆ ಸದ್ಭಕ್ತನಲ್ಲಿ ಪದಾರ್ಥ ಹೆಚ್ಚಿರಲು, ಅಲ್ಲಿ ಸಹಜ ಮುಗಿವುತ್ತಿರಲು, ಆ ಸಮಯದಲ್ಲಿ ನೀಡಿ ಮಾಡುವರಿಲ್ಲದಿರಲು, ಅಲ್ಲಿ ಪದಾರ್ಥವೆ ಇಲ್ಲದಿರಲು, ಆ ಸಮಯದಲ್ಲಿ ಒಡೆಯರು ಬಿಜಯಂಗೈಯಲು, ಆ ಭಕ್ತನು ಆ ವಿವರವನರಿದು ತಾಕೊಂಡುದೇ ಪ್ರಸಾದ, ನಿಂದುದೇ ಪದಾರ್ಥವಾಗಿ ನೀಡಬಹುದಯ್ಯ...ನೀಡಬಹುದೋ ನೀಡಬಾರದೋ ಎಂದು ಸಂದೇಹವ ತಾಳಲಾಗದು. ಈರ್ವರಿಂದ ಸಂದೇಹವ ತಾಳಿದೊಡೆ, ಲಿಂಗಕ್ಕೆ ದೂರ, ಜಂಗಮಕ್ಕೆ ದೂರ, ಪ್ರಸಾದಕ್ಕೆ ಸಲ್ಲರು. ಅವ ಸದ್ಭಕ್ತನಲ್ಲ. ಅವ ದೇವರಲ್ಲ. ಶುದ್ಧ ಸಿದ್ಧ ಪ್ರಸಿದ್ಧವನೊಡಗೂಡಿ, ಭಕ್ತಿ ಪದಾರ್ಥವಾಗಿ, ಸುಶಬ್ದಮುಖದಿಂದೆ ಬಂದು, ಪ್ರಸಿದ್ಧಮುಖಕ್ಕೆ ನೀಡಬಹುದಯ್ಯ. ಸಂದೇಹ ತಾಳಲಾಗದು. ಇದು ಭಕ್ತಮಹೇಶ್ವರರಿಗೊಂದೆ ನಿರ್ಣಯವು. . . . ”

ಈ ಸಂಭವ ಒದಗುವುವು ಅಪೂರ್ವ. ಆದರೂ ಅಂತಹ ಸನ್ನಿವೇಶದ ಸಂದಿಗ್ಧವನ್ನೂ ಪರಿಹರಿಸಿದೆ ಈ ವಚನ-

ಪ್ರತಿಯೊಬ್ಬ ಪ್ರಸಾದಿಯು ಗುರು-ಲಿಂಗ-ಜಂಗಮರ ವಿಷಯದಲ್ಲಿ ಬಲು ಎಚ್ಚರದಿಂದ ಆಚರಿಸಬೇಕು. ಎಳ್ಳು ಮೊನೆಯಷ್ಟು ತಪ್ಪಿದಲ್ಲಿ ದ್ರೋಹಕ್ಕೆ ಎಡೆಯುಂಟು. ಆ ದ್ರೋಹಗಳನ್ನು ಹೀಗೆ ವಿವರಿಸಿದೆ.

| ಗುರುದ್ರೋಹಪಂಚಕ. | ಲಿಂಗದ್ರೋಹಪಂಚಕ. | ಜಂಗಮದ್ರೋಹಪಂಚಕ. |
|---|---|---|
| ೧ ಅಹಂಕಾರ | ೧ ಅಪ್ರೀತಿ | ೧ ಅಸ್ಥಿರಬುದ್ಧಿ |
| ೨ ಭಯವಿಲ್ಲದಿರುವಿಕೆ | ೨ ಅಪ್ರೇಮ | ೨ ಅನೃತವಾಕ್ಯ |
| [illegible] ಸಮಪಂಕ್ತಿಯಲ್ಲಿ ಕುಳ್ಳಿರುವಿಕೆ | ೩ ಅಸ್ನೇಹ | ೩ ಪಂಕ್ತಿಭೇದ |

೪ ಸಂಭಾಷಣೆಯು ೪ ನಿರ್ವ್ಯೋಹ ೪ ಉದಾಸೀನ
ಮಾಡುವಿಕೆ
೫ ಕೈಯೊಡ್ಡಿ ೫ ಅವಿಶ್ವಾಸ ೫ ನಿರ್ದಯ
ಬೇಡುವಿಕೆ

ಇವು ಒದಗದಂತೆ ಆಚರಿಸುವುದೆ ಗುರುಲಿಂಗ ಜಂಗಮದ ನಿರ್ಣಯ. ಇದೇ ನಿರಾಮಯ. (ಪುಟ-೩೩, ವ-೨)

## ಭಕ್ತನು ಭವಿಪಾಕವನ್ನು ನೀಡಕೂಡದು.

ಇದು ವೀರಶೈವತ್ವಕ್ಕೆ ವಿರೋಧವಾದುದು. ಆದರೂ ಹಲಕೆಲವರು ತಮಗೆ ಭವಿಪಾಕವೆಂದು ತಿಳಿದಿದ್ದರೂ ಬಂದ ಜಂಗಮರಿಗೆ ತಿಳಿಸದೆ ಅಂಧಶ್ರದ್ಧೆಯಿಂದ ಆಚಾರವಿರೋಧವಾಗಿ ಭವಿಪಾಕ (ಹಪ್ಪಳ, ಬಿಸ್ಕತ್ತು ಮೊದಲಾದ) ವನ್ನು ತಂದು ನೀಡುವರು. ಇದು ಉಭಯತರಿಗೂ ಸಲ್ಲದು ಈ ಪದ್ಧತಿಯು ಈಗ ಅಲ್ಲಲ್ಲಿ ಇರುವಂತೆ ಆಗಲೂ ಇತ್ತೆಂದು ಈ ವಚನದಿಂದ ತಿಳಿಯುತ್ತದೆ.

"ಭೃತ್ಯಾಚಾರಿಗಲ್ಲದೆ ಭಕ್ತ್ಯಾಚಾರವಳವಡದು- ವೇದಶಾಸ್ತ್ರ ಪುರಾಣಾಗಮವನರಿದ ಸಂಬಂಧಿಗಲ್ಲದೆ ಆಚಾರವಳವಡದು ಅದೇನು ಕಾರಣವೆಂದೊಡೆ, ಅರಿದರಿದು ಭವಿಪಾಕವೆಂದು ಕಳೆದ ಬಳಿಕ ಜಂಗಮಕ್ಕೆ ನೀಡಿದಡೆ ಅದೆ ಪಾಕವಯ್ಯ. ಅದೆಂತೆಂದೊಡೆ, ತನ್ನ ಲಿಂಗಕ್ಕೆ ಸಲ್ಲದಾಗಿ, ಜಂಗಮಕ್ಕೆ ಸಲ್ಲದು.........ಇದುಕಾರಣ ಕೂ. ಚ. ಸಂಗಯ್ಯ ಇಂತಪ್ಪ ದುರಾಚಾರಿಯ ಮುಖವನೆನಗೆ ತೋರದಿರಯ್ಯ."

ಭವಿಪಾಕವನ್ನು ಎಡೆಬಡಿಸುವವನು ಭಕ್ತನಲ್ಲ; ಭೃತ್ಯಾಚಾರಿಯಲ್ಲ. ಅತನಿಗೆ ಆಚಾರ ಮೊದಲವೆ ಇಲ್ಲ. ಆಚಾರವಳವಡಬೇಕಾದರೆ ವೇದಶಾಸ್ತ್ರ ಪುರಾಣಾಗಮಗಳನರಿದ ಸಂಬಂಧಿಗಲ್ಲದೆ ಸಾಧ್ಯವಿಲ್ಲ. ಅರಿವಿಲ್ಲದ ಆಚಾರದಲ್ಲಿ ಪ್ರಮಾದದಿಂದಲಾದರೂ ದೋಷ ತಾಕುವದುಂಟು; ತಗಲುವದುಂಟು.

## ತನಗಾಗದ್ದು ಪ್ರಸಾದವಲ್ಲ.

"ತನ್ನ ಲಿಂಗಕ್ಕೆ ಬಾರದ ರುಚಿಯ ಜಂಗಮಕ್ಕೆ ಸಲ್ಲಿಸಿ ಕೈಯೊಡ್ಡಿ ಪ್ರಸಾದವನಿಕ್ಕು. ಎಂಬುವಂಗೆ ಅದು ಪ್ರಸಾದವಲ್ಲ. ಸಿಂಗಿಕಾಳಕೂಟ

ವಿಷ ಕಾಣಿರಣ್ಣಾ! ಆ ಪ್ರಸಾದಕ್ಕೆ ವ್ರತಿಗಳೆಂಬವರು...(?) ಅದು ವ್ರತ ವಲ್ಲ. ಬಿಡದ ಕರ್ಮ. ಅದು ಪ್ರಸಾದವಲ್ಲ. ಕಿಲ್ಬಿಷವಯ್ಯಾ ಕೂ. ಚ. ಸಂ. ದೇವಾ!"

ಈ ಪ್ರಸಕ್ತಿಯು ಒಮ್ಮೊಮ್ಮೆ ಒದಗುತ್ತದೆ. ಅನಿವಾರ್ಯವೆಂದು ಅಂಗೀಕರಿಸುತ್ತಾರೆ. ಅದರದು ಪ್ರಸಾದವಲ್ಲ ಕಾಳಕೂಟ ವಿಷ; ಕಿಲ್ಬಿಷ ಎಂದು ಹೇಳುತ್ತಾನೆ. ಅದು ವ್ರತವಲ್ಲವೆಂದು ಅಲ್ಲಗಳೆಯುತ್ತಾನೆ. ಕೊಡುವ—ಕೊಂಬುವ ಪ್ರಸಾದಿಗಳು ಇದನರಿಯಬೇಕು.

## ಪ್ರಸಾದಕ್ಕೆ ಠಾವಿನ ಗೊತ್ತು.

"ತನ್ನ ಲಿಂಗಕ್ಕೆ ಕೊಡಬಾರದ ಠಾವಿನಲ್ಲಿ ಪ್ರಸಾದವಕೊಂಡು, ತುಡುಗುಣಿ ನಾಯಂತೆ ತಿಂಬುವರನೇನೆಂಬೆನಯ್ಯ? ಅದು ತನ್ನ ಒಡಲ ಹೊರೆವುದಲ್ಲದೆ, ಹಿಡಿದ ಕುಳಕ್ಕೆ ಸಲ್ಲದು. ಸಾಕ್ಷಿ। 'ದ್ರವ್ಯಂಧಾತು ಶುಭಂ ಭವೇತ್' ಎಂದುದಾಗಿ ಇದುಕಾರಣ ಕೂ. ಚ. ಸಂಗಯ್ಯನಲ್ಲಿ ಅದು ತಾ ಬೇಸರವಾದ ವ್ರತಗೇಡಿ ಮೂಳರನೆನಗೆ ತೋರದಿರಯ್ಯ."

ಪೂಜಾಗ್ರಹ, ಪ್ರಸಾದಗ್ರಹಗಳ ಹೊರತು ಬೇರೆ ಸಿಕ್ಕಸಿಕ್ಕಲ್ಲಿ ಪ್ರಸಾದವ ಕೊಳ್ಳಬಾರದು. ಕೊಂಡರೆ ವ್ರತಹಾನಿ. ಅಲ್ಲಿಗೆ ಹಿಡಿದ ಕುಳ ಕಡೆ. ಇದು ಸಾತ್ವಿಕ ಗುಣ ವಿನಾಶಿ. ಆದರಿಂದ ಧಾತು ಕೆಟ್ಟು ದೇಹ ಕೆಡುವುದು. ಆಗ ದೇವನಿಗದು ಬೇಸರ. ಆತ ಶರಣದೃಷ್ಟಿಗೆ ದೂರ. ಇಂದಿನ ಕೆಲ ಪ್ರಸಾದಿಗಳು ಈ ವಿಷಯದಲ್ಲಿ ಸ್ವಚ್ಛಂದವಾಗಿ ವರ್ತಿಸುತ್ತಾರೆ. ಪ್ರಸಾದ ಮುಗಿದ ಮೇಲೆ ಮಹಡಿಯನೇರಿ ಹೋಗಿ ಹಣ್ಣು ತಿನ್ನುವ ತನುಮೋಹಿ ಪ್ರಸಾದಿಗಳು ಉಂಟು. ಹಾಸಿಗೆಯ ಹಿಡಿದು ಔಷಧಿಗಳನ್ನು ಕೊಳ್ಳುವ ಜೀವಗಳ್ಳ ಪ್ರಸಾದಿಗಳೂ ಉಂಟು. ಈ ಪ್ರಸಾದಿಗಳು ಇದನ್ನು ಚೆನ್ನಾಗಿ ಅರಿಯಬೇಕು.

## ಪ್ರಾಣಲಿಂಗ ಪ್ರಸಾದಿ ಯಾರು?

ಪ್ರಸಾದಿಗಳಾಗಬಹುದು. ಪ್ರಾಣಲಿಂಗ ಪ್ರಸಾದಿಗಳಾಗುವುದು ಪ್ರಯಾಸ. ಪಂಚೇಂದ್ರಿಯಗಳ ಸುಖದ ಭಾನ ಇರುವ ವರೆಗೂ ಅದು ಸಮನಿಸದು. ಅದೇನು ಕಾರಣವೆಂದರೆ—



"ಶ್ರೋತ್ರೇಂದ್ರಿಯ ಸುಖವುಳ್ಳನ್ನಕ್ಕರ ಗುರುವಚನವನೆಂತು ಕೇಳಿದೆನೆನಬಹುದಯ್ಯ? ಘ್ರಾಣೇಂದ್ರಿಯ ಸುಖವುಳ್ಳನ್ನಕ್ಕರ ಲಿಂಗಕ್ಕೆ ಗಂಧವನೆಂತು ನಿವೇದಿಸಿದೆವೆನಬಹುದಯ್ಯ? ನೇತ್ರೇಂದ್ರಿಯ ಸುಖವುಳ್ಳನ್ನಕ್ಕರ ಲಿಂಗವ ಭಾವಿಸಿದೆವೆಂತೆನಬಹುದಯ್ಯ? ಜಿಹ್ವೇಂದ್ರಿಯ ಸುಖವುಳ್ಳನ್ನಕ್ಕರ ಪ್ರಸಾದವ ಗ್ರಹಿಸಿದೆವೆಂತೆನಬಹುದಯ್ಯ? ಸ್ಪರ್ಶೇಂದ್ರಿಯ ಸುಖವುಳ್ಳನ್ನಕ್ಕರ ಲಿಂಗಾಂಗವಾಯಿತ್ತೆಂತೆನಬಹುದಯ್ಯ? ಇವೆಲ್ಲವನು ಪರಿಚ್ಛೇದಿಸಿದೊಡೆ ಅವರೆ ನಮ್ಮ ಕೂ. ಚ. ಸಂಗಯ್ಯನಲ್ಲಿ ಪ್ರಾಣಲಿಂಗ ಪ್ರಸಾದಿಗಳಯ್ಯ."

ಗುರುವಚನವ ಕೇಳುವ, ಲಿಂಗಕ್ಕೆ ಗಂಧವ ನಿವೇದಿಸುವ, ಲಿಂಗ ನಿರೀಕ್ಷಣೆ ಮಾಡುವ, ಪ್ರಸಾದವ ಸಂಗ್ರಹಿಸುವ, ಲಿಂಗಾಂಗವಾಗುವ ಸೌಭಾಗ್ಯ ಪಂಚೇಂದ್ರಿಯ ಸುಖದ ಲಾಲಸೆಯು ಲಯವಾಗದೆ ಸಾಧ್ಯವಿಲ್ಲ. ಆದ್ದರಿಂದ ಪಶುವಿನಂತೆಳಸುವ ಪಂಚೇಂದ್ರಿಯಗಳ ಪರಿಯನ್ನು ಪರಿಹರಿಸಬೇಕು. ಆತನೇ ನಿಜವಾದ ಪ್ರಾಣಲಿಂಗಪ್ರಸಾದಿ.

ಪ್ರಯಾಸಪಟ್ಟಾದರು ಪ್ರಾಣಲಿಂಗಪ್ರಸಾದವನ್ನು ಪಡೆಯಬಹುದು. ಲಿಂಗಪ್ರಾಣಪ್ರಸಾದ ಪಡೆವುದು ಇನ್ನೂ ಅಪರೂಪ. ಆದರೆ ಇದನ್ನು ಸಾಧಿಸದ ಹೊರತು ಪ್ರಸಾದಿಗೆ ಪರಿಪೂರ್ಣತೆಯಿಲ್ಲ; ಪರಿಪಕ್ವತೆ ಇಲ್ಲ. ಆತ ಲಿಂಗಭೋಗೋಪಭೋಗಿ ಆಗ ಶಿವಯೋಗಿ ಎನಿಸ. (ಪುಟ-೮೨, ವ-೩)

## ಪ್ರಸಾದವಾವುದು ?

ಸತ್ಯವಾದ ಪ್ರಸಾದವಾವುದು? ಎಲ್ಲಿಹುದು? ಹೇಗೆ ಪಡೆವುದು? ಎಂಬೀ ಪ್ರಶ್ನೆಗಳಿಗೆ ಸರಿಯಾದ ಸಂಪೂರ್ಣವಾದ ಉತ್ತರ ಇಲ್ಲಿದೆ:

"ಪ್ರಸಾದ ಪ್ರಸಾದವೆಂಬುವರು ಪ್ರಸಾದದ ಸ್ಥಳಕುಳವೆಂತಪ್ಪುದೆಂದೊಡೆ ನಾನರಿಯೆನಯ್ಯ. ಕೊಟ್ಟವನೇನು ಗುರುವೆ? ಅಲ್ಲ. ಕೊಂಡವನೇನು ಶಿಷ್ಯನೆ? ಅದೆಂತಯ್ಯಾ ಎಂದೊಡೆ, ತನುವನಂಡಲೆದು, ಮನವಶುದ್ಧವ ಮಾಡಿ, ಈಡಾಪಿಂಗಳ ನಾಳವಂ ಕಟ್ಟಿ, ಸುಷುಮ್ನ ನಾಳದಲ್ಲಿರ್ಪ ಪವನನೆಂಬ ಪರಿಚಾರಕನಿಂದೆ, ಅಗ್ನಿ ಎಂಬ ಅಜಗರನ

ಎಬ್ಬಿಸಲು, ಅದು ಮೇಲುಗಿರಿಯಲ್ಲಿರ್ದ ಪ್ರಸಾದವ ಕಾಗಲೊಡನೆ ಆ ಪ್ರಸಾದವು ಉದರಕ್ಕಿಳಿದು ಬರ್ಪಲ್ಲಿ, ಮನವೆಂಬ ಪ್ರಸಾದಿ ಮೊಯ್ಯಾಂತುಕೊಂಡು ಭೋಗಿಸಬಲ್ಲಡೆ, ಆತನೇ ಪ್ರಸಾದಿ ಕೂ. ಚ. ಸಂ. ದೇವ''

ಮಸ್ತಕದ ಮೇಲುಗಿರಿಯಲ್ಲಿರ್ದ ಅಚ್ಚಳಿಯದ ಆನಂದಾಮೃತವೇ ಪ್ರಸಾದ. ತನುಮನವ ಮುಟಕ್ಕಿಟ್ಟು, ಈಡಾಪಿಂಗಳ ಕಟ್ಟಿ, ಸುಷುಮ್ನಾನಾಳದಲ್ಲಿರುವ ಪವನಪರಿಚಾರಕನ ಬೆಂಬಲದಿಂದ ಅಗ್ನಿ ಅಜಗರನ ಎಬ್ಬಿಸಿದಲ್ಲಿ ಆ ಪ್ರಸಾದ ಉದರಕ್ಕಿಳಿದು ಬರುವುದು. ಅದನುಂಬುವ ಮನ ಪ್ರಸಾದಿಯೇ ಅಮರಪ್ರಸಾದಿ. ಇದೇ ಪ್ರಸಾದದ ಸ್ಥಳಕುಳದ ಹೃದಯ-

## ಅಷ್ಟತನುತ್ವಕಲ್ಪನೆ ಅನಿಷ್ಟವಾದದ್ದು.

ಈ ವಿಚಾರವನ್ನು ಈ ವಚನವೇ ವಿವರವಾಗಿ-ವಿಸ್ಪಷ್ಟವಾಗಿ ವಿಚಾರಿಸಿದೆ—

''ಅಷ್ಟತನುಮೂರ್ತಿಯೆಂಬ ಮಾತಿನ ಪಾತಕವ ಕೇಳಲಾಗದು. ಅದೆಂತೆಂದೊಡೆ, ಪೃಥ್ವಿಯಂತೆ ಕಠಿಣವುಳ್ಳಾತನೆ? ಅಪ್ಪುವಿನಂತೆ ರಸಭರಿತವುಳ್ಳಾತನೆ? ತೇಜದಂತೆ ತೃಣಕಾಷ್ಠವಿಲ್ಲದಿರ್ದೊಡೆ ನಂದುವಾತನೆ? ವಾಯುವಿನಂತೆ ಚಲನೆಯುಳ್ಳಾತನೆ? ಆಕಾಶದಂತೆ ಬಟ್ಟಬಯಲಾದಾತನೆ? ಚಂದ್ರ ಸೂರ್ಯರಂತೆ ದಿವಾರಾತ್ರಿಯ ನಡಿಸುವ ಕೃತ್ಯದಾತನೆ? ಜೀವಾತ್ಮನಂತೆ ಜನನಮರಣಕ್ಕೊಳಗಹನೆ? ಇದುಕಾರಣವಾಗಿ ಕೂ. ಚ. ಸಂ. ದೇವಾ ನೀವು ನಿಮ್ಮಂತೆ, ಉಳಿದವೆಲ್ಲವೂ ನೀವಿರಿಸಿದಂತೆ.''

ಅಷ್ಟಪ್ರಕೃತಿ ಕಲ್ಪನೆಯು ವಿಕೃತಿಯ ಚಿಹ್ನ. ಖಂಡ ಕಲ್ಪನೆ. ಈಳೆ-ಲಿಂಬೆ, ಬಾಳೆ ಹಲಸು ಮೊದಲಾದ ಹಣ್ಣುಗಳಲ್ಲಿರುವ ಹುಳಿ, ಸಿಹಿ ಮುಂತಾದ ರಸಗಳು ಔಪಾಧಿಕವಾದಂತೆ, ಮೃದು ಕಠಿಣ, ರಸ ನೀರಸ, ತೇಜ-ನಿಸ್ತೇಜ, ಗಮನ-ನಿರ್ಗಮನ, ಜನನ-ಮರಣ ಮುಂತಾದವುಗಳು ಔಪಾಧಿಕವೇ ಹೊರತು ಸರ್ವಾಂತರ್ಯಾಮಿಗೆ ವ್ಯಕ್ತವಾಗಿ ವ್ಯಷ್ಟಿಯಾಗಿ ಸಲ್ಲವು.

## ಬಯಲವಸ್ತುವು ಭವಿಯೆ!

“ಭವಿಮಾಡಲಿಕ್ಕೆ ಪೃಥ್ವಿಯಾಯಿತ್ತು. ಭವಿಮಾಡಲಿಕ್ಕೆ ಅಪ್ಪುವಾಯಿತ್ತು. ಭವಿಮಾಡಲಿಕ್ಕೆ ಅಗ್ನಿಯಾಯಿತ್ತು. ಭವಿಮಾಡಲಿಕ್ಕೆ ವಾಯುವಾಯಿತ್ತು. ಭವಿಮಾಡಲಿಕ್ಕೆ ಆಕಾಶವಾಯಿತ್ತು. ಭವಿಮಾಡಲಿಕ್ಕೆ ಸೂರ್ಯಚಂದ್ರರಾದರು. ಭವಿಮಾಡಲಿಕ್ಕೆ ಬ್ರಹ್ಮವಿಷ್ಣುಗಳಾದರು. ಭವಿಮಾಡಲಿಕ್ಕೆ ರುದ್ರನಾದನು. ......... ಇದುಕಾರಣ ಕೂ. ಚ. ಸಂ. ದೇವಾ, ಭವಿಮಾಡಲಾಯಿತ್ತು.”

ಆದಿಭವಿ. ಅಂತ್ಯಭವಿ. ಆದಿಭವಿತನವನ್ನು ಕಳೆಯಬಹುದು. ಅಂತ್ಯದಲ್ಲಿ ಅಚ್ಚಳಿಯದೆ ಉಳಿವ ಭವಿತನ ಕಳೆವುದು ಆದಾರ ವಶ? ಪಂಚಭೂತಗಳು, ಪಂಚದೇವತೆಗಳು ಭವಿಯಿಂದ ಆದವು. ಎಲ್ಲಕ್ಕು ಆದಿಕಾರಣವು ಭವಿಯೆ; ಆದರೆ ಆದಿಭವಿತನವು ಭವಕ್ಕೆ ಬೇರು. ಅಂತ್ಯಭವಿತನವು ಭವಕ್ಕೆ ವೃತ್ತ್ಯ

## ಭವಿಪಾಕವೆಂತುಂಟು?

“ಭಕ್ತರಾದೆವೆಂದು ಭವಿಪಾಕವನೊಲ್ಲೆವೆಂಬಿರಿ. ಭವಿಪಾಕವೆಂಬುದೆಂತುಂಟೆಂದೊಡೆ ಕೇಳಿರೇ. ಅಂಗತ್ರಯದಿಂದೆ ನೋಡಿದಡದು ಭವಿಪಾಕ. ಲಿಂಗತ್ರಯ ನೋಟಕ್ಕದು ಸಲ್ಲದು. ಗುರುಕಾರುಣ್ಯವುಂಟು. ನಾವು ಸದ್ಭಕ್ತರೆಂಬುವರು ಅವರಿಗೆ ಅಂಗತ್ರಯದ ನೋಟವುಳ್ಳನ್ನಕ್ಕರ ಲಿಂಗತ್ರಯದ ನೋಟವಿನ್ನೆಲ್ಲಿಯದೋ? ಪಂಚಭೂತದ ಕಾಯವ ತಂದು ಸದ್ಭಕ್ತನೆಂದೊಡೆ ಪ್ರಸಾದ ನಾಸ್ತಿ ಎಂಬುದು ನಮ್ಮ ಕೂ. ಚ. ಸಂ. ದೇವರ ವಚನ.”

ಪ್ರಸಾದಿಯು ಪ್ರಸಾದಕಾಯನಾಗಬೇಕು. ಪಂಚಭೂತದ ಕಾಯ ಕಳೆಯಬೇಕು. ತನುತ್ರಯದ ವಾಸನೆಯು ವಿನಾಶವಾಗಬೇಕು. ಆಗ ಆತ ಭಕ್ತನಾಗುವನು. ಆತನ ಪದಾರ್ಥ ಪ್ರಸಾದವಾಗುವುದು ಇಲ್ಲದಿದ್ದಲ್ಲಿ ಭಕ್ತನದೂ ಭವಿಪಾಕವೆ!

## ವರ್ಣದೀಕ್ಷೆಗೆ ಕಾಲ ನಿರ್ಣಯ.

“. . . . ಬ್ರಾಹ್ಮಣನ ಮೂರು ವರುಷ ನೋಡಬೇಕು. ಕ್ಷತ್ರಿಯನ ಆರು ವರುಷ ನೋಡಬೇಕು. ವೈಶ್ಯನ ಒಂಬತ್ತು ವರುಷ ನೋಡ

ಬೇಕು. ಶೂದ್ರನ ಹನ್ನೆರಡು ವರುಷ ನೋಡಬೇಕು. ಈ ಹಿಂಗೆ ನೋಡಿದಲ್ಲದೆ ದೀಕ್ಷೆಯ ಕೊಡಲಾಗದು. ಈ ಕ್ರಮವನರಿಯದೆ, ಉಪಾಧಿವಿಡಿದು ಉಪದೇಶವ ಕೊಂಬಾತ ಶಿಷ್ಯನಲ್ಲ. ಇವರಿಬ್ಬರ ನಿಲವು ಒಂದೆ ಟೆಕ್ಕನ ಮನೆಗೆ ಟೆಕ್ಕ ಬಂದಂತೆ. ಈ ಗುರು ಶಿಷ್ಯರಿಬ್ಬರನ್ನು ರೌರವ ನರಕದಲ್ಲಿಕ್ಕುವ ನಮ್ಮ ಕೂ. ಚ. ಸಂ. ದೇವಾ. ''

ಈ ನಿರೀಕ್ಷಣೆಯು ಇಂದು ನಿಂತು ಹೋಗಿದೆ. ಈ ನಿಯಮವನ್ನು ಅನುಸರಿಸಬೇಕೆಂದರೆ ಅದು ಅಂದಿನ ಮಾತು. ಇಂದಿಗದು ಸಲ್ಲದೆಂದು ಸ್ಪಷ್ಟವಾಗಿ ಹೇಳುವದುಂಟು. ಇಂದಿನದು ಓಡುವ ಪ್ರಪಂಚವಲ್ಲವೆ ?

## ಪದಾರ್ಥವೆಂದರೇನು?

ಪಾರಮಾರ್ಥಿಕ, ವ್ಯಾವಹಾರಿಕ, ಪ್ರಾತಿಭಾಷಿಕ, ತುಚ್ಛ ಎಂದು ಪದಾರ್ಥ ನಾಲ್ಕು ವಿಧವೆಂಬುದಾಗಿ ವೇದಾಂತ ಶಾಸ್ತ್ರವು ವಿವರಿಸುತ್ತದೆ. ಹೆಚ್ಚಾಗಿ ಆಹಾರ ಸಾಮಗ್ರಿಗಳಿಗೇನೆ ಪದಾರ್ಥವೆಂಬುದಾಗಿ ಬಳಕೆಯಲ್ಲಿರುತ್ತದೆ. ಚನ್ನಬಸವಣ್ಣನು ಅದೇ ಪದಾರ್ಥ ಶಬ್ದಕ್ಕೆ ಬೇರೊಂದು ಅರ್ಥವನ್ನು ಪ್ರತಿಪಾದಿಸಿದ್ದಾನೆ.

"ಪದಾರ್ಥ ಪದಾರ್ಥನೆಂದಂಬಿರಿ; ಪದವಾವುದು, ಅರ್ಥವಾವುದು ಎಂದರಿಯಿರಿ. ಪದವೆ ಲಿಂಗ, ಅರ್ಥವೆ ಭಕ್ತ. ಇದನರಿದು ಪದಾರ್ಥವೆಂದು ತಂದು ಅರ್ಪಿತವ ಮಾಡಬಲ್ಲಡೆ ಕೂಡಿಪ್ಪನಯ್ಯ ನಮ್ಮ ಕೂ. ಚ. ಸಂ ದೇವ."

ಲಿಂಗ (ಶಿವ) ಭಕ್ತ (ಶಕ್ತಿ) ಈ ದ್ವಯವೇ ನಿಜವಾದ ಪದಾರ್ಥ. ಇದನು ತಂದು ಅರ್ಪಿತಮಾಡುವುದೆಂದರೆ ಶರಣಸತಿ-ಲಿಂಗಪತಿಗಳು ಸಮರಸವಾಗುವುದು. ಇದೇ ಅರ್ಪಣವಿಧಾನ.

## ಹೊನ್ನು ಹೆಣ್ಣು ಮಣ್ಣು-ಯಾವು?

ಇವು ಹೊರಗಿನವೆಂಬುದು ಸರ್ವಸಾಮಾನ್ಯವಾದ ತಿಳವಳಿಕೆ. ಆಧ್ಯಾತ್ಮಿಕಕ್ಕೆ ಅವೇ ಅಡ್ಡಿ ಆತಂಕಗಳೆಂದು ಗ್ರಹಿಕೆ. ಆದರದು ವಿಚಾರ ಮುಖದಲ್ಲಿ ವಿರಸ. ಏಕೆಂದರೆ ಈ ಹೊರಗಿನ ಹೊನ್ನು ಹೆಣ್ಣು ಮಣ್ಣು

ಗಳನ್ನು ಬಿಟ್ಟವರೂ ಸಹ ಭವದ ಕೋಟಲೆಗೆ ಪಕ್ಕಾಗುವದುಂಟು; ಆಗುತ್ತಾರೆ. ಹಾಗಾದರೆ ಆ ಹೊನ್ನು ಹೆಣ್ಣು ಮಣ್ಣು ಬೇರೆ ಇರಬೇಕು; ಇರುವವು. ಅವಾವೆಂದರೆ—

"......ಹೊನ್ನು ಜೀವ, ಹೆಣ್ಣು ಪ್ರಾಣ, ಮಣ್ಣು ದೇಹ. ಹೊನ್ನು ಭವಿ, ಹೆಣ್ಣು ಭವ, ಮಣ್ಣು ಹವ್ಯ. ಈ ತ್ರಿವಿಧ ಸ್ಥಲವಪೂರ್ವ ನಮ್ಮ ಕೂ. ಚ. ಸಂ. ನಲ್ಲಿ"

ಈ ಹೊನ್ನುಳ್ಳಾತ ಭಕ್ತನಲ್ಲ. ಈ ಹೆಣ್ಣುಳ್ಳಾತ ಶರಣನಲ್ಲ. ಈ ಮಣ್ಣುಳ್ಳಾತ ಲಿಂಗೈಕ್ಯನಲ್ಲ. ಆದ್ದರಿಂದ ಇವನ್ನು ಜಯಿಸಬೇಕು; ತ್ಯಜಿಸಬೇಕು. ತನುವಿನ ಗೆಲವು, ತನ್ಮಯತ್ವದ ಒಲವು. ಮನೋವಿಲಯ, ಮಹಾನುಭವತ್ವದ ವಿಜಯ. ಜೀವಭಾವದ ವಿನಾಶ, ಆತ್ಮದೇವವಿಲಾಸ. ಇದೇ ಪಂಥನದ ವೃತ್ತ್ಯ ಶಿವಾನುಭವದ ಸೊತ್ತು ಹೊನ್ನು ಹೆಣ್ಣು ಮಣ್ಣುಗಳ ಗೆಲವಿನ ಗೊತ್ತು.

## ಗುರು ದ್ರವ್ಯವ ಕದಿಯಲಾಗದು.

"ಗುರುಕಾರುಣ್ಯವ ಪಡೆದೆವೆಂಬುವರು ನೀವು ಕೇಳಿ ಭೋ! ಒಬ್ಬನು ಆದಿಹೆನೆಂಬ. ಮತ್ತೊಬ್ಬ ಒಬ್ಬರಿಚ್ಛೆಗಾದಿಹೆನೆಂಬ. ಇವರಿಬ್ಬರು ಪಿಂಡ ಭೋಗಿಗಳು. ಭಕ್ತಂಗೆ ಆಗೆಯು ಇಲ್ಲ, ಚಾಗೆಯು ಇಲ್ಲ, ಸರ್ವದ್ರವ್ಯವನು ಗುರುವಿಗೊಪ್ಪಿಸಿದನಾಗಿ ... ...ಇದುಕಾರಣ ಗುರುದ್ರವ್ಯವನಪಹರಿಸಲಾಗದು. ಗುರು ದ್ರವ್ಯವಾವುದೆಂದಡೆ ದೇಹಿಕ ದ್ರವ್ಯ, ಭೌತಿಕ ದ್ರವ್ಯ, ಆತ್ಮದ್ರವ್ಯ, ಇಂದ್ರಿಯದ್ರವ್ಯ, ಜ್ಞಾನದ್ರವ್ಯವೆಂಬ ಪಂಚದ್ರವ್ಯವನು ಉಭಯವಳಿದು ಷೋಡಶೋಪಚಾರದಲ್ಲರ್ಪಿಸಬಲ್ಲಡೆ ನಮ್ಮ ಕೂ. ಚ ಸಂ. ನಲ್ಲಿ ಆತನೇ ಗುರುಭಕ್ತನು."

ಗುರುಭಕ್ತನ ಈ ಪಂಚದ್ರವ್ಯಗಳು ಗುರುವಿನವು. ಅವನ್ನು ಆತನ ಅಪ್ಪಣೆಯಿಲ್ಲದೆ ಸ್ವಾರ್ಥಮನೋವೃತ್ತಿಯಿಂದ ಬಳಸಕೂಡದು; ಬೆಳಸಕೂಡದು. ಒಂದು ವೇಳೆ ಹಾಗೆ ಮಾಡಿದಲ್ಲಿ ಆತ ಗುರುಭಕ್ತನಲ್ಲ; ಬ್ರಾಹ್ಮೀತಿ ರಾಕ್ಷಸ,—ಎಂಬುದು ಈ ವಚನದ ವಿಧಿವಾದ.

## ಲಿಂಗೈಕ್ಯನ ಸಾಹಿತ್ಯ.

ಸಾಹಿತ್ಯವಿಲ್ಲದ್ದು ಯಾವುದೂ ಸಿದ್ಧಿಸದು. ನಿದರ್ಶನಕ್ಕಾಗಿ ಹತ್ತಿ ಹುಟ್ಟಲು ಅದೆಷ್ಟೋ ಸಾಹಿತ್ಯಬೇಕು. ಬೆಳೆಯಲುಬೇಕು. ಬಟ್ಟಿ ನೇಯಲು ಬೇಕು. ಮತ್ತೆ ವೃತ್ತಿಕೆಯಾಗಲು ಬೇಕು. ಹೀಗೆ ಯಾವುದನ್ನು ವಿಚಾರಿಸಿದರೂ ಸಾಹಿತ್ಯವಿಲ್ಲದೆ ಸಾಧ್ಯವಿಲ್ಲ. ಇದರಂತೆ ಲಿಂಗೈಕ್ಯನಿಗೂ ಒಂದು ಸಾಹಿತ್ಯಬೇಕು.

“ಅರುಹಿಲ್ಲದ ಕಾರಣ ಭವಕ್ಕೆ ಬಂದರು. ಅರುಹಿಲ್ಲದವಂಗೆ ಆಚಾರವಿಲ್ಲ. ಆಚಾರವಿಲ್ಲದವಂಗೆ ಗುರುವಿಲ್ಲ. ಗುರುವಿಲ್ಲದವಂಗೆ ಲಿಂಗವಿಲ್ಲ. ಲಿಂಗವಿಲ್ಲದವಂಗೆ ಜಂಗಮವಿಲ್ಲ. ಜಂಗಮವಿಲ್ಲದವಂಗೆ ಪಾದತೀರ್ಥಪ್ರಸಾದವಿಲ್ಲ. ಪಾದತೀರ್ಥಪ್ರಸಾದವಿಲ್ಲದವಂಗೆ ಗಣತ್ವವಿಲ್ಲ. ಅರಿವು ಸಾಹಿತ್ಯ ಆಚಾರ, ಆಚಾರಸಾಹಿತ್ಯ ಗುರು, ಗುರುಸಾಹಿತ್ಯ ಲಿಂಗ, ಲಿಂಗಸಾಹಿತ್ಯ ಜಂಗಮ, ಜಂಗಮಸಾಹಿತ್ಯ ಪ್ರಸಾದ, ಪ್ರಸಾದ ಸಾಹಿತ್ಯ ಗಣತ್ವ. ಇದು ಕಾರಣ ಕೂ. ಚ. ಸಂ. ನಲ್ಲಿ ಇವಷ್ಟು ಒಂದುಗೂಡಿದವರಲ್ಲಿ ಎಲ್ಲ ಸ್ಥಲವುಂಟು. ಆತ ನಿಷ್ಕಳ ಲಿಂಗೈಕ್ಯ; ಆತ ಅಪೂರ್ವ.

ಇವಿಷ್ಟೂ ಲಿಂಗೈಕ್ಯನ ಸಾಹಿತ್ಯ. ಇವನ್ನು ಸಂಪಾದಿಸುವುದು ಆತನಿಗೆ ತೀರ ಅಗತ್ಯ. *

---

* ಕೆಲವು ಮಾತಾಂಶಗಳು ನಿಂತು ಬಂದಿದ್ದವು. ಅವು ಅಗತ್ಯವೆಂದು ಬಗೆಗೆ ಬಂದುದರಿಂದ ಮರಳಿ ಈ ಲೇಖದಲ್ಲಿ ಅವನ್ನೆ ವಿವರಿಸಲಾಗಿದೆ. ಮುಂದಿನ ಲೇಖ ಐತಿಹಾಸಿಕಾಂಶಗಳಿಂದೊಡಗೂಡಿ ಪ್ರಕಟವಾಗುತ್ತದೆ.

# ಶರಣಸತಿಯರ ನೂರೆಂಟು ನಾಮಗಳು.

(ಶ್ರೀ. ಘನಮಠದಾರ್ಯ ನಾಗಭೂಷಣ ಶಿವಯೋಗಿವಿರಚಿತ.)

---

ಭಾ। ಷಟ್ಪದಿ॥

ಸೂಚನೆ॥ ಪ್ರೀತಿಯಲಿ ನೂತನ ಪುರಾತನ।
ರಾತಿಶಯ ಶರಣೆಯರ ನಾಮಗ।
ಳೋತು ಪಠಿಸುವವರ್ಗೆ ಮಹವಿಷ್ಟಾರ್ಥಸಿದ್ಧಿಗಳೂ ॥ಪ॥

ಶ್ರೀಲಲಿತೆ ನೀಲಾಂಬೆಗಳ ಸವಿ।
ಶಾಲಮತಿ ಗಂಗಾಂಬೆಗಳ ಶಿವ।
ಲೋಲೆಯಹ ನಾಗಾಂಬೆಗಳ ಸೂರಾಂಬೆಗಳ ಮತ್ತೆ॥
ಶೀಲಯುತೆ ಗೌರಾಂಬೆಗಳ ಹಿತ।
ಬಾಲೆಯಹ ಕೋಲಾಂಬೆಗಳ ಗುಣ।
ಜಾಲೆ ವಿಮಲಾಂಬೆಗಳನಾ ವರದೇವಲಾಂಬೆಗಳ ॥೧॥

ಬಾಲೆ ವೀರಮ್ಮಗಳ ಪರಮ ಸು।
ಶೀಲೆ ಮಸಣಮ್ಮಗಳ ಭವನಿ।
ರ್ಮೂಲೆ ಲಕ್ಕಮ್ಮಗಳ ನೆರೆ ಮಾಯಮ್ಮಗಳ ಮತ್ತೆ॥
ಕಾಲಜೆ ರೆಮ್ಮವ್ವೆಗಳ ಸದ।
ಯಾಳಿ ರಾಯಮ್ಮಗಳ ಸುಜನರ।
ಪಾಲೆ ಗುಡಿಸಿಲಪಾದ ನಾಗಾಯಮ್ಮಗಳ ಮತ್ತೆ ॥೨॥

ಕಾರಿಕಾಲಮ್ಮೆಗಳ ಕರುಣಾ।
ಕಾರೆ ಗಾರಮ್ಮೆಗಳ ಜಗದುಪ।
ಕಾರೆ ಕಾಳಿಯದ ಪುರದ ವೀರಮ್ಮಗಳನನು ಮತ್ತೆ॥
ಸಾರಮತಿ ಕಾಯಮ್ಮಗಳ ಸುವಿ।
ಚಾರ ಮಹಾದೇವಮ್ಮಗಳ ಪಾ।
ಪಾರಿಯಕ್ಕಮ್ಮಗಳ ಕಲ್ಯಾಣಮ್ಮಗಳ ಮತ್ತೆ ॥೩॥

ಅವ್ವೆಯಹ ಯಾರುತರ ಕದಿರ ರೆ- ।
ಮ್ಮವ್ವೆಯ ಕೊಟ್ಟಣದ ವರಸೋ ।
ಮವ್ವೆಗಳ ರೆಬ್ಬವ್ವೆಗಳ ರೇಕವ್ವೆಗಳ ಮತ್ತೆ ॥
ಅವ್ವೆಸೋಹಳಿಪುರದ ಸೋ ।
ಮವ್ವೆಗಳ ನಿಂಗಳಿಯ ವೈಜ ।
ಕ್ಕವ್ವೆಗಳ ವೈಜಾಂಬವ್ವೆಗಳ ಮತ್ತೆ ॥೪॥

ಅವ್ವೆ ಶಿವದಾಸವ್ವೆಗಳ ಶಿಲ ।
ಕವ್ವೆಗಳ ಕಾಳವ್ವೆಗಳ ಗೊ ।
ಗ್ಗವ್ವೆಗಳ ಗುಡ್ಡವ್ವೆಗಳ ಮತ್ತೆ ॥
ಅವ್ವೆದುಗ್ಗಳವ್ವೆಗಳ ಪಿ ।
ಟ್ಟವ್ವೆಗಳ ಸಂಕವ್ವೆಗಳ ಸ ।
ಪ್ಪವ್ವೆಗಳ ಜೊಮ್ಮವ್ವೆಗಳ ಮುದ್ದವ್ವೆಗಳ ಮತ್ತೆ ॥೫॥

ಅವ್ವೆ ಪರತರ ನೀಲನನುದಿನಂ ।
ಬೆವ್ವೆಗಳನಾ ವೀರಸಂಗಾ ।
ಯವ್ವೆಗಳನಾ ವೀರತಿಲಕವ್ವೆಗಳನನವರತ ॥
ಅವ್ವೆಮಾಚಲ ಅವ್ವೆಚಂಗಳೆ ।
ಅವ್ವೆಗಳ ಕನ್ನಡಿಯಕರ ರೆ ।
ಮ್ಮವ್ವೆಗಳನಾ ವೀರ ಚೋಳಾಯವ್ವೆಗಳ ಮತ್ತೆ ॥೬॥

ಅಕ್ಕ ಮುಕ್ತಾಯಕ್ಕಗಳ ಸ ।
ತ್ಯಕ್ಕಗಳ ಮಾಯಕ್ಕಗಳ ನೆ ।
ಲ್ಲಕ್ಕಗಳ ಮಲ್ಲಕ್ಕಗಳ ಚನ್ನಕ್ಕಗಳ ಮತ್ತೆ ॥
ಅಕ್ಕನುಡುತಡಿಯ ಮಹಾದೇ ।
ವಕ್ಕನೊಬ್ಬಳೆಯಕ್ಕದಾ ನಿಂ ।
ಬೆಕ್ಕಗಳ ನುರುತರದ ಮಂಗಾಯಕ್ಕರಸಿಯರನು ॥೭॥

ದೇವಿಬೊಂತಲಪೇವಿಯಲ್ಲಮ ।
ದೇವಿ ವಿಮಲಾದೇವಿ ಸುಗ್ಗಲ ।
ದೇವಿ ಚಾಕಲದೇವಿ ಕೇತಲದೇವಿಗಳ ಮತ್ತೆ ।

ದೇವಿಮಾಚಲದೇವಿ ಬಾಚಲ ।
ದೇವಿ ಕಾಚಲದೇವಿ ಮೈಚಲ ।
ದೇವಿಯಳನಾ ಕೇಳಿಕೆಯಹ ಮಹಾದೇವಿಗಳ ಮತ್ತೆ ॥೮॥

ದೇವಿ ಗಂಗಾದೇವಿಯಾ ಮಾ ।
ಯ್ದೇವಿಯಾ ಶಿವದೇವಿ ಸಿದ್ಧಾ ।
ದೇವಿಯಾ ಸಾಯ್ದೇವಿಯಾ ಶಚಿದೇವಿಗಳ ಮತ್ತೆ ॥
ದೇವಿಯಾಮಳದೇವಿ ಯಣ್ಣಲ ।
ದೇವಿ ಲಲನದೇವಿ ಚಿಕ್ಕಾ ।
ದೇವಿ ರುದ್ರಸುವೀಣೆ ಗಂಗಾದೇವಿಗಳ ಮತ್ತೆ ॥೯॥

ದೇವಿಯಸ್ಯಜ್ಞಾನಿಚಂದ್ರಿಣಿ ।
ದೇವಿ ಜ್ಞಾನಾನಂದದೇವಿಯ ।
ದೇವಿರತ್ನಾವತಿಯ ಪರಮಸುದೇವಿಗಳ ಮತ್ತೆ ॥
ದೇವಿಸೋಮಪ್ರಭಾಂಕದೇವಿಯ ।
ದೇವಿಯು ಶೃಂಗರದೇವಿಯ ।
ದೇವಿಯರ್ ಶರ್ವಾಣಿಯಾ ಶಿವಜ್ಞಾನದೇವಿಗಳ ॥೧೦॥

ನಾಚಿ ಪಾವನನಾಚಿಯಳನುರಿ ।
ನಾಚಿ ಚೊಲ್ಲಡನಾಚಿಯಳಸಲೆ ।
ನಾಚಿ ಪರ್ವತನಾಚಿಯಳನಾ ಪರವೆನಾಚಿಗಳ ॥
ನಾಚಿ ಶಿವಪ್ರಿಯನಾಚಿಯಳನಾ ।
ನಾಚಿ ತಿಲವಲಿನಾಚಿಯಳ ನೆರೆ ।
ನಾಚಿ ಶಂಖಿಲಿನಾಚಿ ಸೌಂದರನಾಚಿಯಳ ಮತ್ತೆ ॥೧೧॥

ದಾರುಕಿಯ ವರದಾನಿಯಮ್ಮನ ।
ಸಾರಚರಿತೆ ಸುನೀತಿಯಸುರ್ಗವಿ ।
ಚಾರಪದ್ಮಾವತಿಯ ಕನಕಮಾಲಿನಿಯ ಮತ್ತೆ ॥
ಮಾರಜಿತ ಕಾಮಾಲತಿಯ ಸುಖ ।
ಸಾರೆ ದೇವರದಾಸಿಯಳ ಮಹಾ ।
ಧೀರೆ ಸೋಮರಸಿಯಳ ನಿರುಪಮ ಮಂಗಳಾಂಗಿಯಳ ॥೧೨॥

ಹರನ ಸತಿ ನುತಿಕೋಟಿಯಿಂ ಶಿವ ।
ಶರಣಸತಿಯರ ನುತಿ ಮಿಗಿಲು ಮನ ।
ಉರುತರದ ಭೃಂಗೀಶ ಮುಖ್ಯ ಪ್ರಮಥರೊಳ್ಪೂಜೆಯುಳ್ಳವರು ॥
ಶರಣಸತಿಯರು ಪ್ರಮಥರೊಳು ಪೂ ।
ಜ್ಯರುಮುದಾಗಿರೆ ಶ್ರೀಘನಮಃಠೇ ।
ಶ್ವರನ ನಿಜಭಕ್ತಿಯಲಿ ಪೊಗಳುತ ಪಡೆವೆ ನಿಜಸುಖವ ॥೧೩॥

--ಶ್ರೀಯುತ ಎಮ್. ಸಿದ್ಧವೀರಯ್ಯ
ಇವರಿಂದ ಸಂಗ್ರಹಿಸಲ್ಪಟ್ಟಿದು.

---

## ಗಣಾಷ್ಟೋತ್ತರ.

(ಶ್ರೀ ನಾಗಭೂಷಣ ಘನಮಠದಾರ್ಯರು ರಚಿಸಿದ್ದು)

---

ಭಾ। ಷಟ್ಪದಿ.

ಸೂಚನೆ:—ಲೀಲೆಯಲಿ ನೂತನ ಪುರಾತನ ।
ರಾಳಿ ನಾಮವ ಬಿಡದೆಯುದಯದ ।
ಕಾಲದೊಳು ಪಠಿಸಿದರಿಗಿಹವಿಷ್ಟಾರ್ಥ ಸಿದ್ಧಿಗಳು ॥ಪಲ್ಲ॥

ಬಸವರಾಜನ ಚನ್ನಬಸವನ ।
ಅಸಮಪ್ರಭುವನು ಸಿದ್ಧರಾಮನ ।
ಕುಶಲಮತಿ ಮಡಿವಳನನಜಗಣ್ಣ ಸೊಡ್ಡಳನ ॥
ಮುಸುಡಿಚೌಡಯ್ಯನ ಗಜೇಶ್ವರ ।
ಮಸಣಿತಂದೆಯನ ।
ದಸರಿದೇವನ ಹಡಪದಪ್ಪಣಗಳ ಕಲಿಗಣನ ॥೧॥

ಹೊನ್ನತಂದೆಯನನಘಮಾದರ ।
ಚನ್ನನುರಿ ಚಾರಮನ ನಂಬಿಯು ।
ಕನ್ನಪಾಖ್ಯನ ಭೋಗಿದೇವನ ಕಾಚಿರಾಜವನ ॥
ಧನ್ಯದೇವರದಾಸಿಮಯ್ಯನ ।
ಮಾನ್ಯನಹ ಹೊಡೆಹುಲ್ಲಬಂಕನ ।
ಉನ್ನತದ ರೇಚಣ್ಣನಿಂಭಕ್ತನಲಾಯುಧನ ॥೨॥

ಬೊಮ್ಮಿದೇವನನ್ನೈದೆ ಕಿನ್ನರ ।
ಬೊಮ್ಮಿದೇವನ ಸಾರ ಕನ್ನದ ।
ಬೊಮ್ಮಿದೇವನ ಪರಮಸಗರದಬೊಮ್ಮಿ ಕಲಕೇತನ ॥
ಬೊಮ್ಮಿದೇವನ ವಿನುತ ಹಾದರ ।
ಬೊಮ್ಮಿದೇವನನಾದಿರಕ್ಕಸ ।
ಬೊಮ್ಮಿದೇವನ ನಿತ್ಯಬಾಹುರ ಬ್ರಹ್ಮತಂದೆಗಳ ॥೩॥

ಮಾರನಿಡಗುಡಿ ಮಾರನರವಿನ ।
ಮಾರನಾ ನಗೆಮಾರಮೋಳಿಗೆ ।
ಮಾರನಿಳಿಯಾಂಡ ಗುಡಿಮಾರನ ಧೀರನಾಯ್ದಕ್ಕಿ ॥
ಮಾರ ನಾಡಕ್ಕಿಯ ಸುಮಾರನ ।
ಮಾರಭೂಪನ ಶೂರಸಾನಿಡು ।
ಮಾರಿದೇವನ ಸೋಮಾಸಿಮಾರರ ಕಾಳಿಮನ ॥೪॥

ವೇಮನಾರಾಧ್ಯಪ್ರಮೈದುನ ।
ರಾಮನುರಿ ತುರಗಾಯಿರಾಮನ ।
ಕ್ಷೇಮಿಯಾತಳವಾರಕಾಯ್ಕದ ರಾಮನೇಕಾಂತ ॥
ರಾಮನುದರದ ರಾಮನಸದೃಶ ।
ಕಾಮವಟ್ಟದ ಭೀಮನಾ ಕಲಿ ।
ಕಾಮರಾಯನ ಪ್ರಹರಿಸೋಮಣ್ಣಗಳನನವರತ ॥೫॥

ಪಂಡಿತಯ್ಯನನಧಿಕ ಶ್ರೀಪತಿ ।
ಪಂಡಿತನ ಶಿವಲೆಂಕಮಂಚಣ ।
ಪಂಡಿತನು ತಿರುಜ್ಞಾನಸಂಬಂಧಿಗಳ ಚಿದ್ವಿದ್ಯಾ ॥
ಪಂಡಿತನು ಅಹದಾಸಿದೇವನ ।
ದಂಡಿತಘಕುಲ ಸೇದಿರಾಜನ ।
ಕೊಂಡಗೂಳಿಯಕೇಶಿರಾಜನ ಚಂಡಧೀಶ್ವರನ ॥೬॥

ಪಾಲಗುರ್ಜರನೋಹಿಲನ ಸಲೆ ।
ಕೋಲಶಾಂತಯ್ಯಗಳನಾ ತಿರು ।
ನೀಲಕಂಠಯ್ಯಗಳ ವಿನುತತಿರುಮೂಲದೇವರನ ॥

ಚೋಳರಾಯನ ವಿಹಿತಮಾದರ ।
ಧೂಳನಾ ಹರಳಯ್ಯಗಳ ಸಿರಿ ।
ಯಾಳನಾ ಗೊಲ್ಲಾಳನುತ್ತಮನ ಚೀಲಾಳನನ ॥೭॥

ಉರರಾಯಣ್ಣಗಳ ನೆರೆ ಮಧು ।
ವರಸನಾ ಶಿವನಾಗಮಯ್ಯನ ।
ಮುರಘರಾ ನೈನಾರರಾ ಉರಿಲಿಂಗಪೆದ್ದಿಗಳ ॥
ಚೆರುಪುಲಿಯನಣು ಮೂರ್ತಿಯಂ ।
ತಿರುಕುರುಪಿತೊಂಡರ ಸರಿಯ ಚೌಡನ ।
ಮರುಳಶಂಕರದೇವನನತಿಭಕ್ತನ ಮೊನೆಧರನ ॥೮॥

ಮೊರನವೇಮಯ್ಯಗಳ ನೇಲೇ ।
ಶ್ವರದ ಕೇತಯ್ಯಗಳನಾ ಜೋ ।
ಧರದ ಮಾಯಣ್ಣಗಳ ಕಕ್ಕಯ್ಯಗಳ ನೈಸರನಾ ॥
ಕರಳುಶಾಂತಯ್ಯಗಳ ಮರೆಮಿಂ ।
ಡರನಸಾಮಿಕನಾಚಿದೇವನ ।
ಸರಳವೇಳ್ಕುತ್ತರ ಸುಗುರುಭಕ್ತಯ್ಯಗಳ ಮತ್ತೆ ॥೯॥

ಅರಿವಳನನಿಮಿಷ ಗೊಗ್ಗೀ ।
ಶ್ವರನ ಪಾಂಡ್ಯರ ಬಾಚಿದೇವನ ।
ಪುರದನಾಗಣ್ಣಗಳ ಶ್ವಪಚಯ್ಯಗಳನನವರತ ॥
ವರಕರಸ್ಥಲನಾಗಲಿಂಗನ ।
ತರಗೆಲೆಯ ಶಾಂತಯ್ಯಗಳ ಪಾ ।
ಲ್ಕುರಿಕೆಸೋಮೇಶ್ವರನ ತೋಂಟದಸಿದ್ಧಗುರುವರನ ॥೧೦॥

ಹರಗಣಾಯನುತಳಿದವಗೆ ಶಿವ ।
ಪುರವನಾದುದೆನಲ್ಕೆಬಸವೇ ।
ಶ್ವರನು ಮೊದಲಾದಖಿಲ ಗಣವರರಾಭಿಧಾನವನು ॥
ಪರಮಭಕ್ತಿಯೊಳುಂಪಠಿಸಲವ ।
ಗರಿದಾವದು ಘನಮತೇಶನ ।
ಕರುಣದಿಂ ನಿಜವಡೆದು ಸುಖಸಂಪದದಿ ಬಾಳುವರು ॥೧೧॥

# ಕ್ಷೇತ್ರ ಐಹೊಳೆ.

(ಲೇ:-- ಕಾವ್ಯತೀರ್ಥ, ವಿದ್ವಾನ್ ಶಾಂತವೀರದೇವ ಐಹೊಳೆ.)

———(o)———

ವಿಜಾಪುರ ಜಿಲ್ಹೆಗೆ ಒಳಪಟ್ಟ "ಐಹೊಳೆ" ಎಂಬದೊಂದು ಗ್ರಾಮ ವಿದೆ. ಸೊಲ್ಲಾಪುರ ಹುಬ್ಬಳ್ಳಿಗೆ ಇರುವ ರೇಲ್ವೆಮಾರ್ಗದ ಮಧ್ಯದ ಬಾಗಲಕೋಟೆ ಸ್ಟೇಶನ್ನಿಗೆ ಈ ಗ್ರಾಮವು ಹದಿನೆಂಟು ಮೈಲು ದೂರ ಅಂತರದಲ್ಲಿರುತ್ತದೆ. ಈ ಸ್ಥಳದಲ್ಲಿರುವ ಅನೇಕ ದೇವಾಲಯಗಳನ್ನು ನಿರೀಕ್ಷಿಸಿದರೆ ಇದು ಆರನೇಯ ಶತಮಾನದಲ್ಲಿ ಬಹು ಪ್ರಸಿದ್ಧ ಪಟ್ಟಣವಾಗಿತ್ತೆಂದು ಊಹಿಸಲಿಕ್ಕೆ ಆಧಾರಗಳು ಸಿಗುತ್ತವೆ.

ಐಹೊಳೆ, ಪಟ್ಟದಕಲ್ಲು, ಮಹಾಕೂಟ, ಬನಶಂಕರಿ, ಈ ನಾಲ್ಕು ಸ್ಥಳಗಳು ಒಂದಕ್ಕೊಂದು ಸಮೀಪ ಸಮೀಪವಾಗಿವೆ. ಇವು ದಂಡಕಾರಣ್ಯದಲ್ಲಿಯ ಕೇಂದ್ರ ಸ್ಥಳಗಳು. ಕಾಪಾಲಿಕ, ಕಾಳಾಮುಖ, ಶೈವ, ವೀರಶೈವ ಜೈನ, ಮುಂತಾದ ಮತದವರಿಗೆ ಪುಣ್ಯಸ್ಥಲವಾಗಿತ್ತು. ಯೋಗಿಗಳಿಗೂ ಅವಧೂತರಿಗೂ ಈ ಗ್ರಾಮವು ತವರೂರಾಗಿತ್ತು. ಕಾಪಾಲಿಕ, ಕಾಳಾಮುಖರ ಧರ್ಮಾನುಷ್ಠಾನಕ್ಕೆ ಬೇಕಾಗುವ ಗವಿಗಳ ಮತ್ತು ಶಿಲಾಮಂದಿರಗಳ ಅವಶೇಷಗಳು ಈಗಲೂ ಇಲ್ಲಿ ಇವೆ. ಶೈವರು ಯಜ್ಞಮಾಡುವದಕ್ಕೆ ಬೇಕಾಗುವ ಕಲ್ಲಿನ ಯಜ್ಞಮಂಟಪಗಳು ಐಹೊಳೆಯ ಹೊಳೆಯ ದಂಡೆಯಲ್ಲಿ ಕಾಣಬರುತ್ತವೆ.

ಇಲ್ಲಿಯ ಶೈವಮಂದಿರಗಳು ವಿಪುಲವಾಗಿವೆ. ಹಿಂದಿನಕಾಲದಲ್ಲಿ ದೇವಾಲಯಗಳನ್ನು ಕಟ್ಟಿಸಿದರೆ ಸದ್ಗತಿಯಾಗುವದೆಂಬ ನಂಬಿಕೆಯು ಪ್ರತಿಯೊಬ್ಬ ವ್ಯಕ್ತಿಯಲ್ಲಿಯೂ ಇದ್ದಂತೆ ತೋರುತ್ತದೆ. ಆದ್ದರಿಂದ ಇಲ್ಲಿ ಹಿರಿ ಕಿರಿಯರೆಲ್ಲರೂ ಗುಡಿಗಳನ್ನು ಕಟ್ಟಿಸಿದ್ದಾರೆ. ಸಣ್ಣ ಪುಟ್ಟ ಗುಡಿಗಳನ್ನೆಲ್ಲ ಎಣಿಕೆ ಮಾಡಿದರೆ ನೂರು ದೇವಾಲಯಗಳಕಿಂತಲೂ ಹೆಚ್ಚಿಗಿವೆ. ಪ್ರತಿಯೊಂದು ಕಟ್ಟಡದಲ್ಲಿ ಶಿಲ್ಪಿಗಳ ಚಾತುರ್ಯವು ತಜ್ಞರನ್ನು ದಂಗುಬಡಿಸುವಂತಹದಿದೆ. ಅಲ್ಲದೆ ದುರ್ಗದಗುಡಿ, ಲಾಡಖಾನಗುಡಿ, ರಾವಣಪಡಿ, ರಾಮಲಿಂಗನಗುಡಿ, ಎಂಬ ಹಲವಾರು ಗುಡಿಗಳು ಬಹು ಪುರಾ

ತನದವೆಂದು ತಿಳಿಯುತ್ತದೆ. ಕೆಳಗಿನಿಂದ ಮೇಲಿನ ವರೆಗೆ ಟೊಪ್ಪಿಗೆಯಂತೆ ದುಂಡಾಕಾರವಾಗಿ ಕಟ್ಟಿದ ದುರ್ಗದ ಗುಡಿಯು ಶಿಲ್ಪಚಾತುರ್ಯವು ಅಪ್ರತಿಮವಾಗಿದೆ. ಇಂತಹ ಗೋಲಾಕಾರದ ರಚನೆಯ ರೀತಿಯು ನಮ್ಮ ಭಾರತದಲ್ಲೆಲ್ಲಿಯೂ ಕಾಣುವದಿಲ್ಲವೆಂದು ಶೋಧಕರು ಅಭಿಪ್ರಾಯಪಟ್ಟಿದ್ದಾರೆ.

ಐಹೊಳೆ ಗ್ರಾಮದ ಭೂಮಿಯ ಸ್ವಾಭಾವಿಕ ನೋಟವು ಎಲ್ಲ ಕ್ಷೇತ್ರಗಳಿಗಿಂತ ಬಹು ಆಶ್ಚರ್ಯವನ್ನುಂಟುಮಾಡುವಂಥದಿದೆ. ಈ ಗ್ರಾಮಕ್ಕೆ ಸಮೀಪವಾಗಿ ಮಲಪ್ರಭಾ ಎಂಬ ಪವಿತ್ರ ನದಿಯುಂಟು. ಗ್ರಾಮದೇವತೆಯು ನಿಡುದೋಳೆಂಬಂತೆ ಗ್ರಾಮದ ಎಡಬಲ ಪಕ್ಕಗಳಲ್ಲಿ ಸೊಗಸಾದ ಬೇರೆ ಹಳ್ಳಗಳೆರಡು ಹರಿದು ಹೊಳೆಗೆ ಕೂಡಿವೆ. ಇವೆಲ್ಲವುಗಳ ಪ್ರವಾಹಗಳು ಉಳಿದ ಜಲಾಶಯಗಳಂತಿರದೆ ಪಶ್ಚಿಮವಾಹಿನಿಯಾಗಿ ಹರಿದಿವೆ. ಗ್ರಾಮಕ್ಕೆ ಹೊಂದಿಕೊಂಡಿರುವ ಬೆಟ್ಟದ ಅನೇಕ ಬುಗ್ಗೆಗಳು ಪಶ್ಚಿಮ ಮುಖವಾಗಿ ಹರಿದು ಹೊಳೆಗೆ ಕೂಡುತ್ತವೆ. ಪಶ್ಚಿಮ ಮುಖವಾಗಿ ಹರಿಯುವ ಜಲಾಶಯಗಳೆಲ್ಲ ಬಹು ಪುಣ್ಯಕೊಡತಕ್ಕವೆಂದು ನಾಡಿಗರ ಅಭಿಪ್ರಾಯವಿರುತ್ತದೆ. ಈ ರೀತಿಯಾಗಿರುವ ಪ್ರವಾಹದಲ್ಲಿ ಪರಶುರಾಮನು ಸ್ನಾನ ಮಾಡಿ ಕಾಶೀ ಮುಂತಾದ ಕ್ಷೇತ್ರಗಳಲ್ಲಿ ಹೋಗದೆ ತನ್ನ ಮಾತೃಹತ್ಯಾಪಾಪವನ್ನು ಕಳೆದುಕೊಂಡನೆಂದು ಮೊದಲಾದ ಸಂಗತಿಗಳು ಇಲ್ಲಿಯ ಸ್ಥಲ ಪುರಾಣದಲ್ಲಿವೆ. ಅಲ್ಲದೆ ಆಚಾರ್ಯನಾದ ಪಂಚವಕ್ತ್ರಗಣೇಶ್ವರನು ಈ ಹೊಳೆಯ ಗ್ರಾಮದಲ್ಲಿರುವ ಗೌರೀಗುಡಿಯಲ್ಲಿ ಈಶ್ವರ ಮೂರ್ತಿಯಿಂದ ಹುಟ್ಟಿದನೆಂತಲೂ ಅನಂತರ ವೀರಶೈವ ಮತವನ್ನು ಉಜ್ವಲಗೊಳಿಸಿದನೆಂತಲೂ "ನಿರಂಜನವಂಶರತ್ನಾಕರ" ಎಂಬ ಗ್ರಂಥದಿಂದ ತಿಳಿದುಬರುತ್ತದೆ.

ಮಗ್ಗೆಯ ಮಾಯಿದೇವ, ರವಿಕೀರ್ತಿ, ಸಾರಂಗದೇವ, ಶಾಂತಲಿಂಗ ದೇಶಿಕ ಮುಂತಾದ ಮಹಾಮಹಿಮರಿಗೆಯೂ ಪಂಡಿತಾಗ್ರೇಸರರಿಗೂ ಈ ಗ್ರಾಮವು ಪ್ರಿಯವಾದ ಸ್ಥಲವಾಗಿತ್ತು.

" ಮಲಪ್ರಹಾರಿಣೀನಾಮ ಗಂಗಾ ಶ್ರೀಮಲನಾಶಿನೀ ॥
ತ್ರಿದೀಕ್ಷಾಪಥಗಾತೀರ್ಥಂ ತತ್ತೀರಂ ಕ್ಷೇತ್ರಮೈಪುರೀ ॥೧॥

ಮುಂತಾಗಿ ಹೇಳುವ ಮಾಯಿದೇವನ ವಚನದಿಂದ ಈ ಗ್ರಾಮಕ್ಕೆ ಐಪುರ ಅಥವಾ ಆರ್ಯಪುರ, ಎಂಬ ಪ್ರಸಿದ್ಧ ಹೆಸರಿದ್ದಂತೆ ತಿಳಿಯುತ್ತದೆ. ಶಿಲಾಶಾಸನಗಳಲ್ಲಿ "ಆರ್ಯಪುರ"ವೆಂದೇ ಹೆಸರಿದ್ದಂತೆ ತಿಳಿಯುತ್ತದೆ. ಐಪುರದ ಅಂದರೆ ಐಹೊಳೆಯ ರಾಜನು ಕುಲದಿಂದ ಕ್ಷತ್ರಿಯನಾಗಿದ್ದನು. ಈತನಿಗೆ ವೀರಶೈವ ಮತವು ಶ್ರೇಷ್ಠವಾದುದೂ ಪವಿತ್ರವಾದುದೂ ಎಂದು ಅನುಭವದಿಂದ ಉಪದೇಶ ಮಾಡಿ ವೀರಶೈವ ದೀಕ್ಷೆಯನ್ನು ಕೊಡಿಸಿದ "ಶಾಂತಲಿಂಗ ದೇಶಿಕ"ನೆಂಬ ಮಹಿಮನಿಗೆ ಈ ಸ್ಥಲವು ಪ್ರಿಯವಾಗಿತ್ತು. ಭೈರವೇಶ್ವರ ಕಥಾ ಸೂತ್ರರತ್ನಾವಲಿಯನ್ನು ಬರೆದ ಶಾಂತಲಿಂಗ ದೇಶಿಕನೇ ಹೀಗೆ ಇಲ್ಲಿ ಧರ್ಮಪ್ರಚಾರ ಮಾಡಿದನೋ ಅಥವಾ ಇನ್ನೊಬ್ಬ ಶಾಂತಲಿಂಗ ದೇಶಿಕನೋ ಎಂಬ ಅನುಮಾನವಿದೆ.

ಸಾರಂಗದೇವನೆಂಬ ವೀರಶೈವ ಮಹಾಪುರುಷನು ಧರ್ಮಪ್ರಚಾರ ಮಾಡುತ್ತ ಐಹೊಳೆ ಗ್ರಾಮಕ್ಕೆ ಬಂದನು. ಇಲ್ಲಿ ಕೆಲಕಾಲ ವಾಸಿಸಿದ್ದನು. ಈಗಲೂ ಈತನ ವಂಶದವರು ಈ ಗ್ರಾಮದಲ್ಲಿದ್ದಾರೆ. ಇವರಿಗೆ "ಸಾರಂಗದವರೆ"ಂದೇ ಕರೆಯುವ ರೂಢಿಯು ಈಗಲೂ ಇದೆ.

ಶೈವರಿಗೆ ಮುಖ್ಯ ಮುನಿ ಎಂದು ಹೇಳಿಸಿಕೊಳ್ಳುವ "ಹೆಗ್ಗಪ್ಪ"ನೆಂಬ ಋಷಿಯು ಇಲ್ಲಿಯೇ ಜನ್ಮತಾಳಿದನು. ಈತನಿಗೆ ಕಾಯಕವು ಮುಖ್ಯವಾಗಿ ಗೋಸೇವೆಯಾದುದರಿಂದ ಈತನನ್ನು ಆರ್ಯರು ಮತ್ತು ರಾಜರು "ಗೋಮುನೀಶ್ವರ"ನೆಂದು ಸಂಸ್ಕೃತ ಶಬ್ದದಿಂದ ಕರೆದಿದ್ದಾರೆ. ಈ ಗೋಮುನೀಶ್ವರನ ಸಂತತಿಯವರು ಈಗಲೂ ಇದ್ದಾರೆ. ಗೋಮುನೀಶ್ವರನು ಶಿವನ ಆಯುಧಗಳಲ್ಲಿ ಮುಖ್ಯ ಆಯುಧವಾದ "ಕೊಂತ" ಎಂಬುದನ್ನು ಪೂಜಿಸುತ್ತಿದ್ದನು. ಈ ಪೂಜೆಯ ಪದ್ಧತಿಯು ವಂಶಪರಂಪರೆಯಿಂದ ಈಗಲೂ ನಡೆಯುತ್ತಬಂದಿದೆ. ಇದನ್ನು ಪೂಜೆಮಾಡುವ ಗೋಮುನೀಶ್ವರನ ಸಂತತಿಯವರಿಗೆ "ಕೊಂತದವರು" ಎಂಬ ಉಪನಾಮವಿದೆ. ಈಗಲೂ ಹೆಗ್ಗಪ್ಪನ ವಂಶದವರು ಈ ಗ್ರಾಮದಲ್ಲಿ ಇದ್ದಾರೆ. ಇವೆಲ್ಲ ಅಂಶಗಳು ಇಲ್ಲಿಯ ಕೆಲವು ಶಿಲಾಲಿಪಿಗಳಿಂದ ತಿಳಿಯುತ್ತವೆ.

ಇವೇ ಮುಂತಾದ ಐತಿಹಾಸಿಕ ಮತ್ತು ಧಾರ್ಮಿಕ ಮುಖ್ಯಾಂಶಗಳಿಗೆ ಆಸ್ಪದವಾದುದರಿಂದ ಐಹೊಳೆಗೆ ಇಷ್ಟೊಂದು ಮಹತ್ವವೂ ಪವಿತ್ರತೆಯೂ ಬಂದಿವೆ.

ರುದ್ರಭೂಮಿ ಅಥವಾ ಪುಣ್ಯ ಭೂಮಿಯಲ್ಲಿ ಅಮಂಗಲ ಮತ್ತು ಅಸಹ್ಯ ಹಬ್ಬಹುಣ್ಣಿವೆಗಳು ಜರುಗಬಾರದೆಂದು ಹಿಂದಿನ ಹಿರಿಯರ ಅಭಿಪ್ರಾಯವಾಗಿದೆ. ಆದುದರಿಂದ ಕಾಮನನ್ನು ಸುಡುವ ಹಬ್ಬವನ್ನೂ ಕಾರಹುಣ್ಣಿವೆಯ ಕರಿಹರಿಯುವ ಉತ್ಸವವನ್ನೂ ಐಹೊಳೆ ಗ್ರಾಮದಲ್ಲಿ ಹಿಂದಿನಿಂದ ಈ ವರೆಗೂ ಮಾಡುವದಿಲ್ಲ.

"ಅನ್ಯಕ್ಷೇತ್ರೇಕೃತಂಪಾಪಂ ಪುಣ್ಯಕ್ಷೇತ್ರೇವಿನಶ್ಯತಿ ॥
ಪುಣ್ಯಕ್ಷೇತ್ರೇಕೃತಂ ಪಾಪಂ ವಜ್ರಲೇಪೋಭವಿಷ್ಯತಿ" ॥೧॥

ಎಂದರೆ ಸಾಮಾನ್ಯ ಭೂಮಿಯಲ್ಲಿ ಮಾಡಿದ ಪಾಪಕರ್ಮವು ಪುಣ್ಯಕ್ಷೇತ್ರ ಸೇವನೆಯಿಂದ ಹೋಗುತ್ತದೆ. ಆದರೆ ಪುಣ್ಯಕ್ಷೇತ್ರದಲ್ಲಿ ಮಾಡಿದ ಕರ್ಮವನ್ನು ಎಲ್ಲಿ ತೊಳೆದರೂ ಹೋಗುವದಿಲ್ಲ ಎಂಬ ಪದ್ಯದ ಅಭಿಪ್ರಾಯಗಳು ಎಷ್ಟೋಸಲ ಇಲ್ಲಿ ಅನುಭವಕ್ಕೆ ಬಂದ ಉದಾಹರಣೆಗಳಿವೆ. ಈ ಸ್ಥಾನದಲ್ಲಿ ಅತಿ ಪಾಪಮಾಡಿದ ಪ್ರಾಣಿಯು ಪ್ರಾಣದಿಂದ ಬಹುಕಾಲ ಉಳಿಯುವದಿಲ್ಲ. ಇದಕ್ಕೆ ವಿರುದ್ಧವಾಗಿ ಪುಣ್ಯಕರ್ಮ ಮಾಡುವ ಮಾನವನು ಬೇಗನೆ ಜ್ಞಾನಿಯಾಗುವನು. ಹೀಗೆ ಈ ಸ್ಥಳದಲ್ಲಿ ಜಪತಪಗಳನ್ನು ಮಾಡಿದರೆ ಅತ್ಯಲ್ಪಕಾಲದಲ್ಲಿಯೇ ಸಿದ್ಧಿಯುಂಟಾಗುವದೆಂದು ಪುರಾತನರ ಅಭಿಪ್ರಾಯವಿದೆ.

ಹಬ್ಬ ಹುಣ್ಣಿವೆ, ಸೂರ್ಯಗ್ರಹಣ, ಸಂಕ್ರಾಂತಿ, ಮುಂತಾದ ಪರ್ವಕಾಲದಲ್ಲಿ ಇಲ್ಲಿಯ ಸುತ್ತುಮುತ್ತಿನ ನಿವಾಸಿಗಳು ಈ ಸ್ಥಳಕ್ಕೆ ವಿಶೇಷವಾಗಿ ಬರುವ ದೃಶ್ಯವನ್ನು ಈಗಲೂ ಕಾಣಬಹುದು.

# ಅರಿದರಿದು ಕೆಡಬೇಡ.

(ವೀರಬಸಯ್ಯ. ಶಿ. ಕಂಬಿ. ಕಣ್ಣೆಕರವಿನಕೊಪ್ಪ.)

---

ಹರನನ್ನು ನೆರೆನಂಬಿ
ನರಕದಿಂ ದೂರಾಗೊ
ಉರೆನಚ್ಚಿ ಕೆಡಬೇಡ ಸಂಸಾರವ

ಕೊಲುವ ಬೇಡನ ಕೊಳಲ
ನಲಿವ ನಾದವ ಕೇಳಿ
ಮೆಲಕುಹಾಕುತ ನಿಂತ ಹರಿಣೆಯಂತೆ

ಕಣ್ಣಿನಾಸೆಗೆ ಹುಳವು
ಮಿನುಕಿ ಬೆಳಗುವ ದೀಪ
ತನ್ನಿರಸವು ತುಂಬಿದಾ ಹಣ್ಣು ಎಂದು

ಎಡೆಬಿಡದೆ ಹರಿತಂದು
ಸೊಡರ ಮಡಲಲಿ ನಿಂದು
ಕಡು ಸುಖವ ಪಡೆಯೆ ಬಯಸಿ ಬಂದಂತೆ

ನಲಿದುಲಿವ ಸರ್ಪನಾ
ತಲೆಯು ನೆರಳನು ಬಯಸಿ
ನಿಲಲು ಬಂದಾ ಕಪ್ಪೆ ಬಾಳಿನಂತೆ

ನೆರೆ ಸುಖಿಸುವಾ ಸುಖವು
ಉರಿವ ಗಾಳಿಯು ಸೊಡರು
ಅರೆಚಣದ ಆನಂದವಾಯೆ ಮಮತೆ

ಅರಿದರಿದು ಕೆಡಬೇಡ
ಅರಿವು ಮರೆದಿರಬೇಡ
ಸರಸಾಡು ಸಂಗನಶರಣರೊಡಗೂಡಿ

ಶರಣರಿಂ ನೆರೆ ಸುಖಿಸು
ಮರಣರಹಿತನುವಾಗಿ
ಶರಣಸತಿ ಲಿಂಗಪತಿ ಎಂಬಂದದಿ
ಪರುಷ ಸೋಂಕಿದ ಲೋಹ
ವಿರುಪಾಕ್ಷರಂಜಿಯೊಲು
ವರಹರನ ಕರುಣೆಯಿಂ ನಿನಗೆ ಇರವು.

---

## ಮಾಡುವ ಕ್ರಿಯೆ ಮತ್ತು ನೀಡುವ ಕರುಣೆ.

### ವಚನ.

ಕೃಷಿಕನು ಉಳುವೆ ಬಿತ್ತನೆಗಳಿಗೆ ಅಧಿ
ಕಾರಿಯಲ್ಲದೆ ಮಳೆ ಬೆಳೆಗಳಿಗೆ ಅಧಿಕಾ
ರಿಯಲ್ಲ. ಭಕ್ತನು ಮಾಡುವ ಕ್ರಿಯೆಗೆ
ಅಧಿಕಾರಿಯಲ್ಲದೆ ನೀಡುವ ಕರುಣೆಗೆ
ಅಧಿಕಾರಿಯಲ್ಲ. ಮಾಡುವ ಕ್ರಿಯೆ ಭ
ಕ್ತನ ಕೈಯ್ಯದು. ನೀಡುವ ಕರುಣೆ
ದೇವ ನಮ್ಮ ಬಸವಲಿಂಗಪ್ರಿಯ ಶ
ಟ್ಟಿಯ ಬಸವೇಶ್ವರನ ಕೈಯ್ಯದು.

---

## ಶಿವಾನುಭವ ಸಹಾಯಧನ.

(೧) ಶ್ರೀಮನ್ನಿರಂಜನ ಸಂಗಮನಾಥಸ್ವಾಮಿಗಳವರು ೨೫-೦-೦
ವಿರಕ್ತಮಠ ಮು। ಬಿಲ್ಲಹಳ್ಳಿ ಜಿ. ಶಿವಮೊಗ್ಗಾ.
(೨) ಶಿವಾನುಭವಸಂಘ ಹತ್ತರಸಂಗ, ಸಂಗನಬಸವಣ್ಣ ೫-೦-೦
ಕಲ್ಯಾಣಶೆಟ್ಟಿ ಲೋಣಿ ಇವರ ಮುಖಾಂತರ ಬಂದದ್ದು.
(೩) ಪುಣಬಗಟ್ಟ ಜಿ. ಬಳ್ಳಾರಿ ಕೆಲವು ಜನ ಮಹನೀಯರಿಂದ ೭-೩-೦

ಮೇಲಿನ ಮಹನೀಯರಿಗೆಲ್ಲ ನಾವು ಅತ್ಯಂತ ಕೃತಜ್ಞರಾಗಿದ್ದೇವೆ.

ಸಂಪಾದಕ- ಶಿವಾನುಭವ
ವಿಜಾಪುರ.

ಭಾವಃ— ಇದರಲ್ಲಿ ಕೇತಯ್ಯನು ತನ್ನ ಕಾಯಕದ ರೀತಿಯನ್ನು ಒಂದು ಬೆಡಗಿನ ವಚನದ ಮೂಲಕ ಹೇಳುತ್ತಾನೆ. ಅಲ್ಲಲ್ಲಿ ಅಶುದ್ಧ ಶಬ್ದಗಳಿರುವದರಿಂದ ಅರ್ಥ ತಿಳಿಯಲು ದುಸ್ತರವಾಗುತ್ತದೆ. ತಾನು ಬಿದಿರಿನ ಕಾಯಕವನ್ನು ಮಾಡುತ್ತ ಲಿಂಗಾಂಗ ಸಾಮರಸ್ಯವನ್ನು ಹೇಗೆ ಹೊಂದುವೆನೆಂಬುದನ್ನು ಅವನು ಇಲ್ಲಿ ನುಡಿದಿದ್ದಾನೆ. ಇದರಿಂದ ಕೇತಯ್ಯನು ಬಿದಿರು ಕಾಯಕವನ್ನು ಮಾಡುತ್ತ ಇದ್ದುದು ಸಿದ್ಧವಾಗುತ್ತದೆ.

(೨) ಇಂದ್ರಿಯಂಗಳ ಕೊಂದೆಹೆನೆಂದೊಡವು ಕಂದರ್ಪನ ಹಂಗು. ಕಂದರ್ಪನ ಕೊಂದಿಹೆನೆಂದೊಡವು ಕಂಗಳ ಲಾಭ. ಕಂಗಳ ಮುಚ್ಚಿಯುಲ್ಲದೆ ಲಿಂಗವ ಕಾಣಬಾರದು. ಅದು ನಿರಂಗಂಗಲ್ಲದೆ ಜಗದ ಹಂಗಿನವರಿಗಿಲ್ಲ ಎಂದೆ ಗೌರೇಶ್ವರಾ.

(೩) ಮೊದಲು ಹುಸಿ, ಲಾಭ ದಿಟವೇ? ನಿರೀಕ್ಷಣೆ ಇಲ್ಲದೆ ಪರೀಕ್ಷೆಯುಂಟೇ? ಈಯುವಸರದಂಗವ ಗೌರೇಶ್ವರಲಿಂಗ ನೀನೇ ಬಲ್ಲೆ.

(೪) ಭಕ್ತಂಗೆ ಸುಖವೂ ಸರಿ, ದುಃಖವೂ ಸರಿ. ಉರಿ ಸಿರಿ ಉಭಯವು ಸರಿ ಎನ್ನದಿರ್ದಡೆ ಭಕ್ತಿಗದೇ ಹಾನಿ. ಜಂಗಮವೆಂದು ಪ್ರಮಾಣಿಸಿ ತನ್ನ ಕಂಗಳ ಮುಂದೆ ಕಂಡವರು ಭುಂಜಿಸಲ್ಕೆ ತನ್ನಂಗವ ಹೊರೆದಡೆ ತೀರ್ಥ ಪ್ರಸಾದಕ್ಕೆ ಅವನಂದೇ ಹೊರಗು ಗೌರೇಶ್ವರಾ.

(೫) ಗುರು ಹುಸಿ, ಲಿಂಗ ದಿಟವೆನಲಿಲ್ಲ. ಲಿಂಗ ಹುಸಿ ಜಂಗಮ ದಿಟವೆನಲಿಲ್ಲ. ಜಂಗಮ ಹುಸಿ ಪಂಚಾಚಾರ ದಿಟವೆನಲಿಲ್ಲ. ಇಂತಿದರಂಗವನು ಗೌರೇಶ್ವರ ಬಲ್ಲ.

(೬) ಎನ್ನ ಚಿತ್ತಕ್ಕೆ ಆಚಾರಲಿಂಗವಾದಾತ ಬಸವಣ್ಣ-ಎನ್ನ ಬುದ್ಧಿಗೆ ಗುರುಲಿಂಗವಾದಾತ ಬಸವಣ್ಣ. ಎನ್ನ ಅಹಂಕಾರಕ್ಕೆ ಶಿವಲಿಂಗವಾದಾತ ಬಸವಣ್ಣ. ಎನ್ನ ಮನಕ್ಕೆ ಜಂಗಮಲಿಂಗವಾದಾತ ಬಸವಣ್ಣ. ಎನ್ನ ಜ್ಞಾನಕ್ಕೆ ಪ್ರಸಾದಲಿಂಗವಾದಾತ ಬಸವಣ್ಣ. ಎನ್ನ ಭಾವಕ್ಕೆ ಮಹಾಲಿಂಗವಾದಾತ ಬಸವಣ್ಣ. ಎನ್ನ ಸ್ಥೂಲತನುವಿಂಗೆ ಇಷ್ಟಲಿಂಗವಾದಾತ ಬಸವಣ್ಣ. ಎನ್ನ ಸೂಕ್ಷ್ಮತನುವಿಗೆ ಪ್ರಾಣಲಿಂಗ

ವಾದಾತ ಬಸವಣ್ಣ. ಎನ್ನ ಕಾರಣ ತನುವಿಂಗೆ ಭಾವಲಿಂಗವಾದಾತ ಬಸವಣ್ಣ. ಇಂತೆಂದರಿದೆನಾಗಿ ಗೌರೇಶ್ವರಲಿಂಗದಲ್ಲಿ ಸುಖಿಯಾದೆನು.

ಈ ಎಲ್ಲ ವಚನಗಳಲ್ಲಿ ಶಿವಾನುಭವದ ಉಚ್ಚ ತತ್ವಗಳು ನಿರೂಪಿತವಾಗಿದ್ದು, ಇವುಗಳಿಂದ ಮೋದರ ಕೇತಯ್ಯನು ಬಸವೇಶ್ವರನ ಸಮಕಾಲೀನನಾಗಿ ಅವನು ಉಚ್ಚ ಶಿವಾನುಭವಿಯಾಗಿದ್ದನೆಂದು ನಾವು ಊಹಿಸಬಹುದಾಗಿದೆ.

---

## ಅಮ್ಮವ್ವೆ ಅಥವಾ ಬಿಜ್ಜಮಹಾದೇವಿ.

ಮೈಸೂರು ಸೀಮೆಯಲ್ಲಿ, ಬಿಜ್ಜಾವರವೆಂಬ ಗ್ರಾಮವಿದೆ. ಅದು ತುಮಕೂರಿನಿಂದ ಈಶಾನ್ಯಕ್ಕೆ ೨೮ ಮೈಲುಗಳ ಮೇಲೆ ಇದೆ. ಅಲ್ಲಿ ಶಂಕರನೆಂಬ ಶಿವಬ್ರಾಹ್ಮಣನು ವಾಸಿಸುತ್ತಿದ್ದನು. ಅವನ ಹೆಂಡತಿಯ ಹೆಸರು ಭಾಗೀರಥಿಯು. ಅವರಿಗೆ ಅಮ್ಮವ್ವೆ ಎಂಬ ಮಗಳು ಹುಟ್ಟಿದಳು. ಅವಳು ಮನೆಯಲ್ಲಿ ಯಾವಾಗಲೂ ನಡೆಯುತ್ತಿದ್ದ ಶಿವಗೋಷ್ಠಿಗಳನ್ನೂ ಹರಕಥನಗಳನ್ನೂ ಲಕ್ಷಪೂರ್ವಕವಾಗಿ ಕೇಳುವಳು. ಶಿವಾಲಯಕ್ಕೆ ತಪ್ಪದೆ ಹೋಗುವಳು. ಇದರಿಂದ ಅವಳಲ್ಲಿ ಶಿವಭಕ್ತಿಯು ದಿನೇ ದಿನೇ ಹೆಚ್ಚುತ್ತ ಹೋಯಿತು.

ಅಮ್ಮವ್ವೆಯು ಯೌವ್ವನಸ್ಥಳಾದ ಬಳಿಕ, ಅವಳ ಸೋದರತ್ತೆಯು ತನ್ನ ಮಗನಿಗೆ ಅವಳನ್ನು ಕೊಟ್ಟು ಲಗ್ನಮಾಡಬೇಕೆಂದು ತಂದೆಗೆ ಕೇಳಲು ಅವನು—ನನ್ನ ಮಗಳು ಲಿಂಗಪೂಜೆಯನ್ನಲ್ಲದೆ ಮತ್ತೊಂದನರಿಯಳು. ನಿನ್ನ ಮಗನು ಅನ್ಯದೈವಪೂಜಕನು. ಅದು ಕಾರಣ ನಿನ್ನ ಮಗನಿಗೆ ಅವಳನ್ನು ಕೊಡಲಾರೆನೆನಲು, ಸೋದರತ್ತೆಯು—ನಾವು ಕುಲಹೀನರೆಂದು ನೀನು ಕೊಡಲೊಲ್ಲೆಯೋ ಏನು? ಹೀಗಾದರೆ ನಾನು ಇಲ್ಲಿಯೇ ಪ್ರಾಣಬಿಡುವೆನು ಎಂದೆನ್ನಲು, ತಂದೆಯು ಅಂಜಿ ಮಗಳ ಪುಣ್ಯವಿದ್ದಂತೆ ಆಗಲಿ ಎಂದು ಅವಳನ್ನು ಅವಳ ಮಗನಿಗೆ ಕೊಟ್ಟು ಲಗ್ನಮಾಡಿದನು.

ಆದರೆ ಲಗ್ನವಾದ ಬಳಿಕ ಒಂದು ತಿಂಗಳಲ್ಲಿಯೇ ಅಮ್ಮವ್ವೆಯ ಗಂಡನು ಮೃತಪಟ್ಟನು. ಆಮೇಲೆ ಸ್ವಲ್ಪ ದಿವಸಗಳಲ್ಲಿ ಅವಳ ತಾಯಿ ತಂದೆಗಳೂ ಕೂಡ ಸತ್ತುಹೋದರು. ಹೀಗೆ ಅಮ್ಮವ್ವೆಯು ಅನಾಥ ಳಾದಳು. ಆಗ ಅವಳು ವೀರಶೈವ ದೀಕ್ಷೆಯನ್ನು ಹೊಂದಿ ಶಿವಾನು ಭವದ ನಡೆಯಂತೆ ನಡೆಯುತ್ತ ರಾಟಿಯ ಕಾಯಕವನ್ನು ಕೈಕೊಂ ಡಳು. ಅವಳು ಹತ್ತಿಯನ್ನು ಹಿಂಜಿ ನೂತು ತನ್ನ ಉಪಜೀವನವನ್ನು ಸಾಗಿಸುವಳು. ಅದರಲ್ಲಿ ತನಗೆ ಉಳಿದದ್ದನ್ನು ದಾಸೋಹದ ಕಾರ್ಯ ಗಳಿಗೆ ಉಪಯೋಗಿಸುವಳು.

ಹೀಗಿರಲು ಒಂದು ದಿನ ಒಬ್ಬ ಚರಮೂರ್ತಿಯು ಆಕೆಯ ಮನೆಗೆ ಬರಲು ಅವಳು ಅವನನ್ನು ಸತ್ಕರಿಸಿ ನೀವಾರೆಂದು ಕೇಳಲು—ನಾವು ಶಿವನ ಭಕ್ತರು, ದೇಶಾಂತರಿಗಳು, ಎಂದು ಹೇಳಿದನು. ಅದಕ್ಕೆ ಅಮ್ಮವ್ವೆಯು ಶಿವನೆಂತಿರುವನೆಂದು ಕೇಳಲು, ಆ ಚರಮೂರ್ತಿಯು— ಶಿವನು ಅಗ್ನಿನೇತ್ರವುಳ್ಳವನು, ಅವನು ಜಟಾಧಾರಿಯು, ಅವನ ಜಟೆ ಯಲ್ಲಿ ಗಂಗೆ, ಸರ್ವಾಂಗದಲ್ಲಿ ಭಸ್ಮ, ಉಡುಪು ಹುಲಿದೊಗಲು, ಹೊದೆಯುವದು ಗಜಚರ್ಮ, ಸ್ಮಶಾನವಾಸಿಯು, ಸರ್ಪಾಭರಣನು, ಉರದಲ್ಲಿ ಶಿರೋಮಾಲೆ. ಅವನಿಗೆ ತಂದೆತಾಯಿಗಳಿಲ್ಲ. ಆದರೆ ಜಗ ತ್ತಿಗೆ ತಾನೇ ತಂದೆತಾಯಿ. ಅವನಿಗೆ ಬಂಧುಬಳಗವಿಲ್ಲ. ಆದರೆ ಜಗ ತ್ತಿಗೆ ತಾನೇ ಬಂಧುವು, ಎಂದು ಶಿವನ ಸ್ವರೂಪವನ್ನು ವಿಸ್ತಾರವಾಗಿ ಬಣ್ಣಿಸಿ ಹೇಳಿದನು. ಆದರೆ ಅವನು ಹೇಳಿದ್ದರಲ್ಲಿ ಶಿವನಿಗೆ ತಂದೆ ತಾಯಿಗಳಿಲ್ಲ, ಅವನಿಗೆ ಬಂಧುಬಳಗವಿಲ್ಲ ಎಂದು ಹೇಳಿದ್ದು ಮಾತ್ರ ಅವಳ ಮರ್ಮಕ್ಕೆ ತಾಕಿತು. ಅವಳು—ಶಿವನಿಗೆ ತಾಯಿ ಇಲ್ಲವೇ ಎಂದು ಕೇಳಲು ಆ ಚರಮೂರ್ತಿಯು—ಅವನಿಗೆ ತಾಯಿ ಇಲ್ಲ. ಇದು ಅವನಿಗೆ ಸಹಜವಾದುದು ಎಂದೆನ್ನಲು, ಅಮ್ಮವ್ವೆಯು ಆಗ ಸುಮ್ಮ ನಾಗಿ ಚರಮೂರ್ತಿಯನ್ನು ಚನ್ನಾಗಿ ಉಪಚರಿಸಿ ಅವನನ್ನು ಕಳಿಸಿ ಕೊಟ್ಟಳು.

ಅವನು ಹೋದಬಳಿಕ ಅಮ್ಮವ್ವೆಯು ಚಿಂತಾಕ್ರಾಂತಳಾಗಿ ತನ್ನ ಲ್ಲಿಯೇ—ಶಿವನಿಗೆ ಯಾರೂ ದಿಕ್ಕಿಲ್ಲವೇ? ಅವನಿಗೆ ತಾಯಿ ಇಲ್ಲವೇ? ತಾಯಿ ಇದ್ದರೆ ಅವನ ತಲೆ ಹೀಗೆ ಜಡೆಗಟ್ಟುವದೇ ? ಅವನು

ಚರ್ಮವನ್ನು ಹೊದೆಯುಗೊಡುವಳೇ? ಸ್ಮಶಾನದಲ್ಲಿ ಇರಗೊಡುವಳೇ? ಅಕಟಕಟಾ, ಶಿವನಿಗಾರೂ ಇಲ್ಲವೇ? ಎಂದು ಚಿಂತಿಮಾಡುತ್ತ ನಿದ್ರೆ ಹೋದಳು.

ಅವಳು ನಿದ್ರೆ ಹೋದಾಗ ಅವಳ ಸ್ವಪ್ನದಲ್ಲಿ ಶಿವನು ಜಂಗಮ ರೂಪಾಗಿ ಬಂದು—ಎಲೋ ಭಕ್ತೆಯೇ, ನೀನು ಚಿಂತೆ ಮಾಡಬೇಡ. ಈ ಊರ ಸಮೀಪದಲ್ಲಿ ಒಂದು ಅರಣ್ಯವಿದೆ. ಅಲ್ಲಿ ನಾನು ತೊಟ್ಟಿಲಲ್ಲಿ ಶಿಶುವಾಗಿರುತ್ತೇನೆ. ಉದಯದಲ್ಲೆದ್ದು ನನ್ನನ್ನು ಅಲ್ಲಿ ಕಾಣು, ಎಂದು ಹೇಳಿ ಅಂತರ್ಧಾನನಾದನು. ಆಗ ಅವಳು ಮುಂಜಾವಿನಲ್ಲಿ ಎಚ್ಚತ್ತು ಶಿವನನ್ನು ಹುಡುಕುತ್ತ ಅರಣ್ಯಕ್ಕೆ ಹೊರಟಳು. ಅರಣ್ಯದಲ್ಲಿ ಅವಳು ಹೋಗುವಾಗ, ಅವಳಿಗೆ ಶಿವಧ್ಯಾನವೇ ಧ್ಯಾನವು. ಶಿವನನ್ನು ಶಿಶುವಾಗಿ ನಾನು ಯಾವಾಗ್ಗೆ ಕಂಡೇನು, ಅವನನ್ನು ನಾನು ಎಂದು ಸಲಹೇನು, ಎಂದು ಆತುರಪಡುತ್ತ ಅವಳು ಶಿವನನ್ನು ಹುಡುಕುತ್ತ ಹೊರಟಳು. ಮಾರ್ಗದಲ್ಲಿ ಒಂದು ಎರಳೆಯು ಮರಿಯು ತಾಯ ಕೂಡ ಹೋಗುವದನ್ನು ಕಂಡು ಅವಳು—ಶಿವನೇ ನೀನೆನಗೆ ಮಕ್ಕಳನ್ನು ಕೊಡಲಿಲ್ಲ. ಈ ಎರಳೆಯ ಬಾಳುವೆಯಕಿಂತ ನನ್ನ ಬಾಳುವೆ ಕಡೆಯದಾಯಿತಲ್ಲಾ, ಎಂದು ನುಡಿಯುತ್ತ ಮುಂದೆಹೋಗಲು, ಅಲ್ಲಿ ಒಂದು ಮರದ ಮೇಲೆ ಒಂದು ಕಪಿಯು ತನ್ನ ಮರಿಯನ್ನು ಅವುಚಿಕೊಂಡು ಕುಳಿತದ್ದನ್ನು ಕಂಡು—ಪರಮಾತ್ಮನೇ, ಇದಕ್ಕೆಲ್ಲ ಮಕ್ಕಳನ್ನು ನೀನು ಕೊಟ್ಟೆ. ನೀನು ನನಗೆ ಕೊಡಲಿಲ್ಲ. ಈ ಕಪಿಯಕಿಂತಲೂ ನಾನು ಕನಿಷ್ಟಳಾದೆನಲ್ಲಾ, ಎಂದು ಹಲುಬುತ್ತ ಶಿವನನ್ನು ಹುಡುಕುತ್ತ, ಅರಣ್ಯ ಮಧ್ಯದಲ್ಲಿ ಸಂಚರಿಸಹತ್ತಿದಳು. ಹೀಗೆ ಅವಳು ಸಂಚರಿಸುತ್ತಿರುವಾಗ ಶಿವನು ತೊಟ್ಟಿಲಲ್ಲಿ ಶಿಶುವಾಗಿ ಮಲಗಿದ ಸ್ಥಳಕ್ಕೆ ಬಂದಳು. ಮತ್ತು ಅಲ್ಲಿ ಶಿವನನ್ನು ಕಂಡಳು. ಶಿಶುವನ್ನು ನೋಡಿದ ಕೂಡಲೆ ಅವಳಿಗೆ ಪ್ರೇಮವು ಉಕ್ಕೇರಿತು, ಶಿಶುವನ್ನು ಮುದ್ದಾಡಿದಳು, ಎತ್ತಿಕೊಂಡಳು.

ಆ ಶಿಶುವು ಮಲಗಿದ್ದ ತೊಟ್ಟಿಲವು ಅಗಾಧವಾದದ್ದು. ಆ ಶಿಶುವಿಗೆ ನಿರಾಕಾರ ಬಯಲೇ ಅದರ ತೊಟ್ಟಿಲು, ಶಿವನ ಜಡೆಗಳು ಅದಕ್ಕೆ ಪಟ್ಟಾವಳಿಯು, ಶಿವಾಗಮಗಳೇ ತೊಟ್ಟಿಲ ಹಗ್ಗಗಳು, ಚಂದ್ರಮನು ಆರ

ಳಿಲಿ, ಪಣೆಗಣ್ಣು ಕಸ್ತುರಿಯ ತಿಲಕ, ಫಣಿಕುಂಡಲಗಳು ಮಾಗಾಯ್ಗಳು, ನಾಗಕಂಕಣವು ಕೈಗಡಗವು, ಪಾದದಲ್ಲಿದ್ದ ಫಣಿಗಳು ಅದಕ್ಕೆ ಕಾಲ ಗಡಗಗಳು, ಬ್ರಹ್ಮನ ತಲೆ ಮುದ್ರೆಯುಂಗುರ, ಗಜಚರ್ಮವು ಶಿಶುವಿಗೆ ಹಸರು ಹೊದಿಕೆ, ಆದಿ ಆಧಾರವು ಅದಕ್ಕೆ ಉಡಿದಾರ, ಹೀಗೆ ಶಿವನು ಶಿಶುವಿನ ವೇಷಧಾರಣ ಮಾಡಿಕೊಂಡು ತೊಟ್ಟಿಲಲ್ಲಿ ಕುಳಿತುಕೊಂಡು ಅರಣ್ಯ ಮಧ್ಯದಲ್ಲಿ ತನ್ನ ತಾನೇ ತೂಗಿಕೊಳ್ಳುತ್ತ ಕುಳಿತಿದ್ದನ್ನು ನೋಡಿದಳು. ಅಂಥ ಶಿಶುವನ್ನು ಅಮ್ಮವ್ವೆಯು ನೋಡಿದ ಕೂಡಲೆ ಅವಳಲ್ಲಿ ಪ್ರೇಮವು ಉಕ್ಕೇರಿತು. ಅದನ್ನು ಅವಳು ಎತ್ತಿಕೊಂಡು ಮನೆಗೆ ಬಂದು ಮನೆಯ ತೊಲೆಗೆ ಒಂದು ತೊಟ್ಟಿಲನ್ನು ಕಟ್ಟಿ ಅದರಲ್ಲಿಟ್ಟು ಅದನ್ನು ಜೋಕೆ ಮಾಡಲು ಆರಂಭಿಸಿದಳು.

ಅವಳು ಆ ಕೂಸಿಗೆ ನಾಗೇಶನೆಂಬ ಹೆಸರನ್ನಿಟ್ಟಳು. ಮತ್ತು ಅದಕ್ಕೆ ಬಾಲ್ಯೋಪಚಾರಗಳನ್ನು ಮಾಡಹತ್ತಿದಳು. ಆ ಶಿಶುವು ತನ್ನ ಹೊಟ್ಟೆಯ ಕೂಸು ಎಂದು ತಿಳಿದು ಅದಕ್ಕೆ ಮೊಲೆಯೂಡಿಸುವಳು, ಆಡಿಸುವಳು, ಮುದ್ದಿಕ್ಕುವಳು, ಜೋಗುಳವಾಡುವಳು. ಜೋಗುಳವಾಡುವಲ್ಲಿ ಸುಕೃತಾತ್ಮನೇ ಜೋ ಜೋ, ಅನಾಥನಾಥನೇ ಜೋ ಜೋ, ಮೂದೇವರ ಪಿತನೇ ಜೋ ಜೋ, ಎಂದು ಶಿವನ ಕುರಿತು ಹಾಡುವಳು. ಹೀಗೆ ಆ ಶಿಶುವಿನ ಮೇಲೆ ಅವಳಿಗಾದ ಅಕ್ಕರತೆಗೆ ಎಣೆ ಇಲ್ಲ.

ಹೀಗಿರುವಲ್ಲಿ ಪರಮಾತ್ಮನು ಆಕೆಯ ಮನಸ್ಸನ್ನು ಪರೀಕ್ಷಿಸಬೇಕೆಂದು ಒಂದುದಿವಸ ಮೊಲೆಯನ್ನುಣ್ಣುವದನ್ನು ಬಿಟ್ಟನು. ಅವನ ಎದೆ ಹೊಟ್ಟೆಯುಬ್ಬಿಕೊಂಡು ಮುಖ ಬೆರೆತುಕೊಂಡು ಅತ್ಯಂತ ಕಸವಿಸಿ ಪಡಹತ್ತಿದನು. ಅಮ್ಮವ್ವೆಯು ಅದನ್ನು ನೋಡಿ ಹೌಹಾರಿದಳು. ಅನೇಕ ಉಪಚಾರಗಳನ್ನು ಮಾಡಿದಳು. ಆದರೆ ಯಾವುದರಿಂದಲೂ ಪ್ರಯೋಜನವಾಗಲಿಲ್ಲ. ಕೂಸಿನ ಬೇನೆಯು ಹೆಚ್ಚುತ್ತಹೋಯಿತು. ಆಗ ಅಮ್ಮವ್ವೆಯು ಕೂಸಿನ ಮರಣವನ್ನು ನೋಡಲಾರೆನೆಂದು ಅದಕ್ಕೂ ಮೊದಲು ತಾನು ಸಾಯಬೇಕೆಂದು ಬಯಸಿ ತನ್ನ ಕತ್ತನ್ನು ಕತ್ತರಿಸಿಕೊಳ್ಳುವಾಗ ಶಿವನ್ನು ಮೆಚ್ಚಿ ಪಂಚಮುಖ, ದಶಭುಜ, ನಾಗಕಂಕಣ, ಜಟಾಧಾರಿಯಾಗಿ ತೊಟ್ಟಿಲಲ್ಲಿಯೇ ಪ್ರತ್ಯಕ್ಷನಾಗಿ ಕಾಣಿಸಿಕೊಂಡನು. ಅವನನ್ನು ಅಮ್ಮವ್ವೆಯು ಕಂಡು ಅತ್ಯಂತ ಹರುಷಿತಳಾಗಿ ಅವನಿಗೆ

ಪೊಡಮಡಲು ಪರಮಾತ್ಮನು ಅವಳಿಗೆ ನಿನಗೇನು ಬೇಕು ಬೇಡು ಎನಲು, ಅಮ್ಮವ್ವೆಯು—ನನಗೇನು ಬೇಡ, ನೀನು ನಿರೋಗಿಯಾಗುವದು ನನಗೆ ಬೇಕು. ನೀನು ಶಾಶ್ವತ ತನುವಾಗಿರುವದು ಬೇಕು. ನಿನ್ನಿಂದ ಬೇಡುವದು ಇದೊಂದೇ ವರವು. ಇಷ್ಟೇ ನನಗೆ ಸಾಕು, ಎಂದು ನುಡಿದಳು. ಆಗ ಪರಮಾತ್ಮನು ನಕ್ಕು—ಎಲೌ ತಾಯೇ, ನಿನ್ನಂಥ ತಾಯಿಗಳು ನನಗೆ ಇರಲು ವ್ಯಾಧಿಗಳು ನನಗೇನು ಮಾಡುವವು? ನಾನು ನಿತ್ಯನಾಗಿದ್ದೇನೆ. ನಾನು ಕ್ಷೇಮವಾಗಿರುವೆನು. ಆದರೆ ಇನ್ನುಮೇಲೆ ನಿನಗೂ ನಿತ್ಯತ್ವವು ಪ್ರಾಪ್ತವಾಗಲಿ ಎಂದು ನುಡಿದು, ಅಲ್ಲಿಯೇ ಅಂತರ್ಧಾನನಾದನು. ಆಮೇಲೆ ಅಮ್ಮವ್ವೆಯು ತನ್ನ ಲಿಂಗದಲ್ಲಿ ವಿನೋದಿಸುತ್ತ ಕೆಲಕಾಲದ ಮೇಲೆ ಬಿಜ್ಜಾವರದಲ್ಲಿಯೇ ಸಮಾಧಿಯನ್ನು ಹೊಂದಿದಳು.

ಅಮ್ಮವ್ವೆಗೆ ಬಿಜ್ಜಾಂಬೆ, ಬಿಜ್ಜಮಹಾದೇವಿ ಎಂಬ ಬೇರೆ ಹೆಸರುಗಳಿವೆ. ಬಿಜ್ಜಾಂಬೆ ಇದು ಆಕೆಯ ಹುಟ್ಟಿದಾಗಿನ ಹೆಸರು ಇದ್ದು, ಅವಳು ಪ್ರಸಿದ್ಧಳಾದ ಬಳಿಕ 'ಅಮ್ಮವ್ವೆ' ಎಂದು ಜನರಲ್ಲಿ ಸಾರ್ಥಕ ನಾಮವನ್ನು ಪಡೆದಿರಬಹುದೆಂದು ತೋರುತ್ತದೆ. ಅಮ್ಮವ್ವೆಯು ಅಥವಾ ಬಿಜ್ಜಮಹಾದೇವಿಯು ವೀರಶೈವ ಶಿವಶರಣ ಶರಣೆಯರಲ್ಲಿ ಬಹು ಪ್ರಖ್ಯಾತಳಾಗಿದ್ದಾಳೆ. ಗಣಸಹಸ್ರದಲ್ಲಿ ಅವಳ ಹೆಸರು ಇದೆ. ದೇವಿಯರ ತ್ರಿವಿಧಿಯಲ್ಲಿ ಅವಳ ವರ್ಣನೆ ಇರುವದು ಹೇಗೆಂದರೆ—

ಮಾಯಾ ವಿರಹಿತನಿಗೆ । ತಾಯಿ ತಾನಿಲ್ಲೆಂದು<br>
ಒಯ್ಯಾರದಿಂದ ಮೊಲೆಯೂಡಿ ಸಲಹಿರ್ದ<br>
ತಾಯೆ ಅಮ್ಮವ್ವೆ ಶರಣಾಗು ॥

ಬಿಜ್ಜಾವುರ ಗ್ರಾಮದ ಹೆಸರಾದರೂ ಬಿಜ್ಜವ್ವೆ ಈ ಹೆಸರಿನಿಂದಲೇ ಬಂದಿರಬಹುದೆಂದು ತೋರುತ್ತದೆ.

# ಗಟ್ಟಿವಾಳಯ್ಯ.

ಗಟ್ಟಿವಾಳಯ್ಯನು ಬಸವೇಶ್ವರನ ಕಾಲದಲ್ಲಿದ್ದ ಶಿವಶರಣರಲ್ಲಿ ಉನ್ನತ ಸ್ಥಾನವನ್ನು ಪಡೆದವನಿರುತ್ತಾನೆ. ಅವನು ಶಿವಾನುಭವ ಮಂಟಪದಲ್ಲಿ ನಡೆಯುತ್ತಿದ್ದ ವಿವಾದಗಳಲ್ಲಿ ಯಾವಾಗಲೂ ಅಂಗವಹಿಸಿದವನು. ಮತ್ತು ಶ್ರೇಷ್ಠತರಗತಿಯ ವಚನಕಾರನಿದ್ದಾನೆ. ಅವನ ಮುದ್ರಿಕೆಯು 'ಚಿಕ್ಕಯ್ಯ ಪ್ರಿಯಸಿದ್ಧಲಿಂಗ ಇಲ್ಲ ಇಲ್ಲ' ಎಂದಿದೆ. ಅವನ ವಚನಗಳಲ್ಲಿ ಪರಮಾತ್ಮನ ಸ್ವರೂಪು, ಶಿವಶರಣರ ನಡೆ, ಈ ಮೊದಲಾದ ಶಿವಾನುಭವ ವಿಷಯಗಳ ಸಂಬಂಧವಾಗಿ ಅತ್ಯಂತ ಉನ್ನತವಾದ ವಿಚಾರಗಳಿವೆ.

ಗಟ್ಟಿವಾಳಯ್ಯನ ಮೊದಲಿನ ಹೆಸರು ಮುದ್ದಣ್ಣನೆಂದಿದೆ. ಅವನು ತನ್ನ ಗ್ರಾಮದಲ್ಲಿ ಚಿಕ್ಕವನಿರುವಾಗಲೇ ಶಿವಾನುಭವದ ವಿಚಾರಗಳಲ್ಲಿ ಮಗ್ನನಾಗಿ ಅದರ ನಡೆಯಂತೆ ನಡೆಯುತ್ತ ನರ್ತನ ಮಾಡುವ ಕಾಯಕವನ್ನು ಕೈಕೊಂಡವನಾಗಿದ್ದನು. ಅವನು ಈ ಕಾಯಕವನ್ನು ಮಾಡುತ್ತ ಮದ್ದಳೆಯನ್ನು ನುಡಿಸುತ್ತ ಶಿವಾನುಭವದ ತತ್ವಗಳನ್ನು ಜನರಲ್ಲಿ ಸಾರುವನು. ಈ ಕಾಯಕದಿಂದ ತನಗೆ ದೊರಕಿದ್ದರಲ್ಲಿ ತೃಪ್ತನಾಗಿ ಅದರಲ್ಲಿ ತನಗೆ ಏನಾದರೆ ಉಳಿದರೆ ಅದನ್ನು ದಾಸೋಹ ಕಾರ್ಯಗಳಿಗೆ ಉಪಯೋಗಿಸುವನು.

ಗಟ್ಟಿವಾಳಯ್ಯನು ಪರಮ ವೈರಾಗ್ಯ ಶಾಲಿಯು. ಅವನು ಇಂದ್ರಿಯ ವಿಷಯಗಳನ್ನು ತೃಣೀಕರಿಸಿ ನಿರಾಶಾಭರಿತನಾಗಿ ಆಚರಿಸುವವನಾಗಿದ್ದನು. ಅವನು ಕನಕವೆಂದರೆ ಕಲ್ಲು, ತನ್ನ ಮನೆ ಎಂದರೆ ಸಂತೆಯ ಗುಡಿಸಲು, ಎಂದು ಭಾವಿಸಿ ಎಲ್ಲರಲ್ಲಿಯೂ ವಿಶ್ವಬಂಧುತ್ವಭಾವವನ್ನು ತಾಳಿದವನಾಗಿದ್ದನು. ಅವನು ಯಾರನ್ನೂ ಪೀಡಿಸುತ್ತಿದ್ದಿಲ್ಲ. ಯಾರ ಮನಸ್ಸನ್ನೂ ನೋಯಿಸುತ್ತಿದ್ದಿಲ್ಲ. ಅಹಿಂಸಾ ಧರ್ಮವನ್ನು ಪಾಲಿಸುವವನಾಗಿದ್ದನು. ಅವನ ಈ ಕಡುತರವಾದ ಆಚರಣೆಯನ್ನು ನೋಡಿ ಜನರು ಅವನನ್ನು ಗಟ್ಟಿವಾಳ ಮುದ್ದಣ್ಣನೆಂದು ಕರೆಯಹತ್ತಿದರು. ಹೀಗೆ ಅವರು ಕರೆಯುತ್ತ ಕರೆಯುತ್ತ ಮುಂದೆ ಗಟ್ಟಿವಾಳಯ್ಯನೆಂಬ ಹೆಸರು ಮಾತ್ರ ಅವನಿಗೆ ಉಳಿಯಿತು.

ಗಟ್ಟಿವಾಳಯ್ಯನಿಗೆ ಒಬ್ಬ ಹೆಂಡತಿಯು ಇದ್ದಳು. ಅವಳು ಗಟ್ಟಿವಾಳಯ್ಯನ ಈ ನಿರಾಶಾವೃತ್ತಿಯನ್ನು ನೋಡಿ ಅತ್ಯಂತ ಬೇಸರಗೊಂಡವಳಾಗಿದ್ದಳು. ಅವಳಿಗೆ ವೈಭವವೂ ಶ್ರೀಮಂತಿಕೆಯೂ ಬೇಕಾಗಿದ್ದವು. ಇವು ಅವನಲ್ಲಿ ಇಲ್ಲದ್ದರಿಂದ ಅವಳು ಅವನನ್ನು ಪ್ರೀತಿಸುವದನ್ನು ಬಿಟ್ಟು ಜಾರತನದಿಂದ ನಡೆಯಹತ್ತಿದಳು. ಇದು ಗಟ್ಟಿವಾಳಯ್ಯನಿಗೆ ತಿಳಿದು ಬಂದಿತು. ಆದರೂ ಅವನು ಅಹಿಂಸಾವೃತ್ತಿಯುಳ್ಳವನಾದ್ದರಿಂದ ಅವಳಲ್ಲಿ ಎಷ್ಟು ಮಾತ್ರವೂ ಮುನಿಸು ತಾಳದೆ ತನ್ನ ಶಿವಾನುಭವದಲ್ಲಿಯೇ ಮಗ್ನನಾಗಿ ಅತ್ಯಂತ ಸಮಾಧಾನದಿಂದಿರುವನು.

ಒಂದು ದಿನ ಅವನ ಹೆಂಡತಿಯು ತನ್ನ ತವರೂರಿಗೆ ಹೋಗಬೇಕೆಂದು ಬಯಸಲು ಗಟ್ಟಿವಾಳಯ್ಯನು ಹಾಗೆಯೇ ಆಗಲೆಂದು ಒಂದು ಚಕ್ಕಡಿಯನ್ನು ಬಾಡಿಗೆಗೆ ತೆಗೆದುಕೊಂಡು ಅಲ್ಲಿಗೆ ಹೊರಟನು. ಅವನ ಹೆಂಡತಿಯು ಚಕ್ಕಡಿ ಹೊಡೆಯಲಿಕ್ಕೆ ತನ್ನ ವಿಟಪುರುಷನೊಬ್ಬನನ್ನು ಗೊತ್ತುಮಾಡಿಕೊಂಡು ಮೂವರೂ ದಾರಿಯಿಂದ ನಡೆದು ಬರುವಲ್ಲಿ ಮಧ್ಯದಲ್ಲಿ ಒಂದು ಭಾವಿಯನ್ನು ಕಂಡು ಗಟ್ಟಿವಾಳಯ್ಯನಿಗೆ ಅವನ ಹೆಂಡತಿಯು—ನಾನು ನೀರಡಿಸಿದ್ದೇನೆ. ಬಾವಿಯಿಂದ ನೀರು ತನ್ನಿ ಎಂದು ಹೇಳಲು ಅವನು ಒಳಗೆ ಇಳಿದು ನೀರು ತುಂಬಿಕೊಳ್ಳುವಾಗ, ಆ ವಿಟನು ಇದು ಒಳ್ಳೇ ಸಮಯವೆಂದು ಒಂದು ಕಲ್ಲು ಗುಂಡನ್ನು ತೆಗೆದುಕೊಂಡು ಮೇಲಿನಿಂದ ಗಟ್ಟಿವಾಳಯ್ಯಳ ಮೇಲೆ ಬಲವಾಗಿ ಎಸೆಯಲು ಅದು ಅವನಿಗೆ ತಾಕಲು ಅವನು ನೀರಿನಲ್ಲಿ ಮುಳುಗಿದನು.

ಆಗ ಆ ವಿಟನೂ ಹೆಂಡತಿಯೂ ನಗುತ್ತ ಸಂತೋಷಪಟ್ಟು ಗಾಡಿಯನ್ನು ಹೊಡೆದುಕೊಂಡು ಅವಳ ತವರಮನೆಗೆ ಬರುವಷ್ಟರಲ್ಲಿ ಗಟ್ಟಿವಾಳಯ್ಯನು ಅವರಕಿಂತಲೂ ಮೊದಲಿಗೆಯೇ ಅಲ್ಲಿಗೆ ಬಂದು ಮನೆಯ ಮುಂದೆ ಕುಳಿತಿದ್ದನು. ಗಟ್ಟಿವಾಳಯ್ಯನು ಶ್ರೇಷ್ಠ ಶಿವಾನುಭವಿಯು, ಲಿಂಗದೇಹಿಯು. ಅಂಥವನಿಗೆ ಬಾಹ್ಯ ಪೀಡೆಗಳು ಹೇಗೆ ಬಾಧಿಸುವವು? ಅವನು ಅಲ್ಲಿ ಕುಳಿತಿರುವದನ್ನು ಅವನ ಹೆಂಡತಿಯು ನೋಡಿ ನಾಚಿಕೆಯಿಂದ ತಲೆ ಬಗ್ಗಿಸಿಕೊಂಡುನಿಂತಳು. ಆದರೆ ಗಟ್ಟಿವಾಳಯ್ಯನು ತನ್ನನ್ನು ಕೊಂದು ಹಾಕಬೇಕೆಂದು ಬಯಸಿದ ಅವಳಿಗೂ ಅವಳ ವಿಟನಿಗೂ ಒಂದಾದರೂ ಸಿಟ್ಟಿನ ನುಡಿಗಳನ್ನು ಆಡಲಿಲ್ಲ.

ಗಟ್ಟಿವಾಳಯ್ಯನು ಲಗ್ನವಾದ ಬಳಿಕ ತನ್ನ ಅತ್ತೆಯ ಮನೆಗೆ ಎಂದೂ ಬಂದಿರಲಿಲ್ಲ. ಅವನು ಶಿವಾನುಭವಿಯಾದ ಬಳಿಕ ಅವನ ರೂಪು, ವೇಷ ಇವೆಲ್ಲವುಗಳು ಬದಲಾಗಿದ್ದರಿಂದ ಅತ್ತೆಯ ಮನೆ ಯಲ್ಲಿ ಯಾರೂ ಅವನನ್ನು ಗುರುತಿಸಲಿಲ್ಲ. ಆದರೆ ಅವನ ಹೆಂಡ ತಿಯು ಅಲ್ಲಿಗೆ ಆಗಿಂದಾಗ್ಗೆ ಬರುತ್ತಿದ್ದು ಅಲ್ಲಿಯೂ ಕೂಡ ಅವಳು ದುರ್ನಡತೆಯಿಂದ ನಡೆಯುತ್ತಿದ್ದಳು. ಆದ್ದರಿಂದ ಅವಳು ಊರಿಗೆ ಬಂದಳೆಂಬ ಸುದ್ದಿಯನ್ನು ಅವಳ ಅಲ್ಲಿಯ ವಿಟನೊಬ್ಬನಿಗೆ ತಿಳಿಯಲು ಅವನು ಅಲ್ಲಿಗೆ ಬಂದು ಅವಳನ್ನು ಕರೆದುಕೊಂಡು ಹೋಗಹತ್ತಿದನು. ಬಾಡಿಗೆಯವನು ಅದನ್ನು ನೋಡಿ, ಇವಳು--ನನ್ನ ಸ್ತ್ರೀ ಎಂದು ಹೇಳಲು ಉಭಯತರು ಕಾದಾಡಹತ್ತಿದರು. ಗಟ್ಟಿವಾಳಯ್ಯನು ಅದನ್ನು ನೋಡಿ ಉಭಯತರ ಜಗಳವನ್ನು ಬಗೆ ಹರಿಸಬೇಕೆಂದು ಬಯಸಿ ತನ್ನಲ್ಲಿದ್ದ ಲಿಂಗಶಕ್ತಿಯ ಮೂಲಕ ತನ್ನ ಹೆಂಡತಿಯನ್ನು ಇಬ್ಭಾಗಮಾಡಿ, ಅವುಗಳಿಂದ ಎರಡು ಹೆಣ್ಣುಗಳನ್ನು ಮಾಡಿ, ನೀವಿಬ್ಬರು ಒಂದೊಂದು ಹೆಣ್ಣು ತೆಗೆದುಕೊಳ್ಳಿರಿ ಎಂದು ಹೇಳಿ ಅವರಿಗೆ ಒಪ್ಪಿಸಿ, ಇನ್ನು ಮೇಲೆ ನನಗೆ ಈ ಸ್ತ್ರೀ ಪ್ರಪಂಚವು ಸಾಕು, ಇದನ್ನು ನಡಿಸಲಿಕ್ಕೆ ನನಗೆ ಬಾರದು, ಕಲ್ಯಾಣ ಪಟ್ಟಣದಲ್ಲಿ ಬಸವಾದಿ ಪ್ರಮಥರಿದ್ದಾರೆ, ಅವರ ಕಡೆಗೆ ಹೋಗುವೆನೆಂದು, ಪರಮ ವೈರಾಗ್ಯಶಾಲಿಯಾಗಿ ಅಲ್ಲಿಗೆ ನಡೆದು ಕೊಂಡು ಬಂದು ಶಿವಾನುಭವ ಮಂಟಪದಲ್ಲಿ ಬಸವೇಶ್ವರ ಸನ್ನಿಧಾ ನದಲ್ಲಿ ಇರಹತ್ತಿದನು.

ಅವನು ಕಲ್ಯಾಣ ಪಟ್ಟಣಕ್ಕೆ ಬಂದ ಬಳಿಕ ಅಲ್ಲಿ ಭಿಕ್ಷೆಯನ್ನು ಬೇಡಿಕೊಂಡಿರದೆ, ತನ್ನ ಮೊದಲಿನ ನರ್ತನ ಮಾಡುವ ಕಾಯಕವನ್ನು ಮಾಡಿಕೊಂಡಿರುತ್ತಿದ್ದನು. ಆಗ ಅವನಿಗೆ ಸದ್ಭಕ್ತಿಯೇ ಭಿಕ್ಷೆಯಾಯಿತು. ಅವನು ಇದು ಅಡವಿ ಅರಣ್ಯ ಗುಡಿ ಗುಂಡಾರ ತಿಪ್ಪೆ ಉಪ್ಪರಿಗೆ ಎಂಬ ಭೇದ ಭಾವವಿಲ್ಲದೆ ಎಲ್ಲವೂ ಸಮವಾದುದು ಎಂಬ ಭಾವವುಳ್ಳವನಾಗಿ ಯಾವಾಗಲೂ ಆನಂದ ವೃತ್ತಿಯುಳ್ಳವನಾಗಿ ಪಟ್ಟಣದಲ್ಲಿ ಇರಹತ್ತಿದನು.

ಹೀಗಿರುವಲ್ಲಿ ಒಂದು ದಿನ ಬಸವಣ್ಣನ ಮನೆಯ ಮುಂದಿನ ಭೇರಿಯು ಬಾರಿಸಹತ್ತಲು, ಆಗ ಊಟದ ಸಮಯವಾಯಿತೆಂದು ಪಟ್ಟಣದಲ್ಲಿಯ ಜಂಗಮರು ಎಂದಿನಂತೆ ತಂಡ ತಂಡವಾಗಿ ಅಲ್ಲಿಗೆ

ಭೋಜನಕ್ಕೆಂದು ಬರಹತ್ತಿದರು. ಅವರನ್ನು ಗಟ್ಟಿವಾಳಯ್ಯನು ನೋಡಿ ಅಸಹ್ಯಪಟ್ಟು—ಈ ಜಂಗಮರು ಬಸವಣ್ಣನ ಮನೆಯ ಮುಸುರಿಯ ಗಡಿಗೆಯ ನೊಣಗಳು. ಇವರು ಉಪಾಧಿಯಿಂದ ಶರೀರ ಪೋಷಕರಲ್ಲದೆ ಜಂಗಮ ಸ್ಥಲಕ್ಕೆ ಸಲ್ಲರು. ಇವರು ಭಕ್ತಿಯನರಿಯದ ಕಿಸುವಾಯಿಗಳು. ಬಸವ ಊಟ ಹಾಕುತ್ತಾನೆಂದು ಇವರು ಬಸಿದ ಲೋಳೆಯನ್ನು ಬಾಯಲ್ಲಿ ಹಾಕುವವರು. ಇವರಿಗೇಕೆ ಪರಮಾತ್ಮನು? ಎಂದು ಅವರನ್ನು ವಿಡಂಬಿಸುತ್ತ ನಿಂತನು. ಅದನ್ನು ಆ ಜಂಗಮರು ಕೇಳಿ ಅತ್ಯಂತ ಕ್ರುದ್ಧರಾಗಿ ಈ ಗಟ್ಟಿವಾಳಯ್ಯನಿಗೇನು ಮಾಡಬೇಕೆಂದು ಯೋಚಿಸಿ—ಇವನು ಶಿವಾನುಭವಿಯು ಎಂದು ಜನರಲ್ಲಿ ಪ್ರಸಿದ್ಧನಾಗಿದ್ದಾನೆ. ಅದ್ದರಿಂದ ಇವನ ಇಷ್ಟಲಿಂಗವನ್ನು ಕಿತ್ತುಕೊಂಡು ಬಿಟ್ಟರೆ ಸಾಕು, ಇವನು ತಾನಾಗಿಯೇ ಉಪವಾಸ ಬಿದ್ದು ಸತ್ತು ಹೋಗುತ್ತಾನೆ, ಎಂದು ತಿಳಿದು ಅವನನ್ನು ಬಂಧಿಸಿ ನೋಯಿಸಿ, ಅವನ ಇಷ್ಟಲಿಂಗವನ್ನು ಕಸೆದು ಕೊಂಡು ಬಿಟ್ಟರು.

ಆದರೆ ಗಟ್ಟಿವಾಳಯ್ಯನು ಜಂಗಮರ ಈ ದುರ್ಬುದ್ಧಿಯನ್ನು ತಿಳಿದವನಾಗಿ ಸಮೀಪದಲ್ಲಿ ಬಿದ್ದ ಒಳ್ಳೇ ಗಾತ್ರವುಳ್ಳ ಒಂದು ದೊಡ್ಡ ಬಂಡೆಯ ಕಲ್ಲನ್ನು ತೆಗೆದುಕೊಂಡು ಬಂದು ಅದಕ್ಕೆ ಹಗ್ಗವನ್ನು ಹಾಕಿ ಕೊರಳಿಗೆ ಕಟ್ಟಿಕೊಂಡು ಇದು ನನ್ನ ಇಷ್ಟಲಿಂಗ, ಇದು ನನ್ನ ಮಹಾಲಿಂಗ, ಎಂದು ಹೇಳುತ್ತ ಬಸವೇಶ್ವರನ ಮನೆಯ ಹೆಬ್ಬಾಗಿಲಿಗೆ ಬಂದು ಅಲ್ಲಿ ಚಾಚಿಕೊಂಡು ಕುಳಿತನು. ಆಗ ಆ ಬಂಡೆಗಲ್ಲು ಬಾಗಿಲಿಗೆ ಸರಿಸಮಾನವಾಗಲು ಒಳಗೆ ಯಾರೂ ಹೋಗದಂತಾಯಿತು. ಅದರಿಂದ ಹಾಲು ಮೊಸರು, ಕಜ್ಜಾಯ, ಪಕ್ವಾನ್ನಗಳನ್ನು ತರುತ್ತಿದ್ದ ಬಸವೇಶ್ವರನ ಸೇವಕರು ಅವನ ಮನೆಯ ಹೊರಗೆಯೇ ನಿಂತುಕೊಳ್ಳಬೇಕಾಯಿತು. ಊಟಕ್ಕೆ ಬರುತ್ತಿದ್ದ ಅಸಂಖ್ಯಾತ ಜಂಗಮರು ಒಳಗೆ ಹೋಗಲಾರದವರಾದರು. ಆಗ ಅವರು ಗಟ್ಟಿವಾಳಯ್ಯನನ್ನು ಬೈಯ್ಯುತ್ತ ದ್ವಾರದಲ್ಲಿಯೇ ನಿಂತುಕೊಂಡರು. ಹೀಗೆ ಅಲ್ಲಿ ದೊಡ್ಡ ಗಲಾಟೆಯೇ ನಡಿಯಿತು.

ಇದು ಬಸವೇಶ್ವರನ ಹೆಂಡತಿಯಾದ ನೀಲಲೋಚನೆಗೆ ತಿಳಿಯಲು ಅವಳು ಬಿಜ್ಜಳನ ಸಭೆಯಲ್ಲಿದ್ದ ಬಸವೇಶ್ವರನಿಗೆ ಹೇಳಿ ಕಳುಹಿಸಿದಳು. ಆಗ ಅವನು ಅಲ್ಲಿದ್ದ ಪ್ರಭುದೇವ ಚನ್ನಬಸವ ಮೊದಲಾದ ಶಿವಶರ

ಊರನ್ನೊಡಗೊಂಡು ಗಟ್ಟಿವಾಳಯ್ಯನಿದ್ದಲ್ಲಿಗೆಬಂದು ಅಲ್ಲಿ ನಡೆದ ಎಲ್ಲವನ್ನು ತಿಳಿದುಕೊಂಡು ನೆರೆದ ಜಂಗಮರಿಗೆ—ನೀವು ಗಟ್ಟಿವಾಳಯ್ಯನ ಇಷ್ಟ ಲಿಂಗವನ್ನು ಅವನಿಗೆ ಕೊಡಿರಿ ಎಂದು ಹೇಳಲು, ಅವರು ಗಟ್ಟಿವಾಳ ಯ್ಯನಿಗೆ—ನಿಮಗೆ ಗುರು ಕೊಟ್ಟ ಲಿಂಗ, ಮತ್ತು ಬೆಟ್ಟದ ಈ ಗುಂಡು ಹೀಗೆ ಎರಡು ಲಿಂಗಗಳೇ? ನಿಮಗೆ ಇಬ್ಬರು ಗಂಡರೇ? ಎಂದು ಕೇಳಲು ಗಟ್ಟಿವಾಳಯ್ಯನು—ಒಂದೆರಡಾಗಬಲ್ಲದು, ಎರಡು ಮೂರಾಗಬಲ್ಲದು, ಆ ಮೂರು ಆರಾಗಬಲ್ಲುದು, ಆ ಆರು ಮೂವತ್ತಾರಾಗಬಲ್ಲದು, ಆ ಮೂವತ್ತಾರು ಇನ್ನೂರು ಹದಿನಾರಾಗಬಲ್ಲದು, ಆ ಇನ್ನೂರು ಹದಿನಾರು ಏಕ ಕೋಟಿ ಲಿಂಗ ಸ್ಥಲವಾಗಬಲ್ಲದು. ಇದು ಲಿಂಗದ ನಿಜವು. ನಿಮ್ಮದು ಆರ್ಥಿಗೆ ಕಟ್ಟಿದ ಲಿಂಗವು. ಅದು ನಿಮ್ಮ ಕೈಯ್ಯೊಳಗಾ ಯಿತ್ತು. ನಿಶ್ಚಯದ ಲಿಂಗ ನಿಮ್ಮ ಗೊತ್ತಿಗೆ ಸಿಕ್ಕದು. ಆ ಘನ ಲಿಂಗವುಳ್ಳ ನಾನೇ ಜಂಗಮನು. ನೀವು ಜಂಗುಳಿಗಳು. ಈ ಗುಂಡೇ ನನಗೆ ಬಟ್ಟಬಯಲು ಪರಬ್ರಹ್ಮ, ಎಂದು ಹೇಳಿದನು. ಆಗ ಆ ಜಂಗ ಮರು-ಈ ಲಿಂಗವು ನಿನ್ನದಾದರೆ ಅದು ನಿನ್ನ ಅಂಗೈಯಲ್ಲಿ ಏಕೆ ಅಡ ಗಬಾರದು? ಇದು ಲಿಂಗದ ರೀತಿಯಲ್ಲ ಎಂದು ನುಡಿಯುತ್ತ, ಅವರು ಅವನಿಗೆ—ಇಗೋ ಇದು ನಿನ್ನ ಮೊದಲಿನ ಇಷ್ಟ ಲಿಂಗವು. ನಿನಗೆ ಇಬ್ಬರು ಗಂಡರು ಎಂದು ಹೇಳಿ ಅದನ್ನು ಅವನಿಗೆ ಕೊಡಲು, ಗಟ್ಟಿವಾಳಯ್ಯನು ತನ್ನಲ್ಲಿ ನೆಲೆಗೊಂಗ ಲಿಂಗ ಸಾಮರ್ಥ್ಯದಿಂದ ಆ ಬೆಟ್ಟದ ಗುಂಡವನ್ನು ತನ್ನ ಆ ಇಷ್ಟಲಿಂಗದಲ್ಲಿಯೇ ಅಡಗಿಸಿಕೊಂಡು ಬಿಟ್ಟನು.

ಆಗ ಅಲ್ಲಿದ್ದ ಪ್ರಭುದೇವರು ಗಟ್ಟಿವಾಳಯ್ಯನ ನಡೆಯೇ ನಿಜ ವಾದದ್ದು ಎಂದು ನುಡಿದು ಅವನನ್ನು ಸ್ತುತಿಸುತ್ತ ಅಂದದ್ದುಃ—'ಅಂಗದ ಮೇಲಣ ಲಿಂಗ ಹಿಂಗಿದಾತನ ಭವಿ ಎಂಬರು, ಅಂಗದ ಮೇಲಣ ಲಿಂಗ ಇಪ್ಪಾತನ ಭಕ್ತನೆಂಬರು, ಅಂಗದೊಳಗೆ ಬೆರಸಿಪ್ಪ ಲಿಂಗದ ಹೊಲ ಬನರಿಯದೆ. ಲಿಂಗವಿಲ್ಲದೆ ಒಂದು ಕ್ಷಣ ಒಂದಂಗ ಸುಳಿದುದುಂಟೇ ಜಗದೊಳಗೆ? ಆ ಜಗದೊಳಗಣ ಲಿಂಗವನು ಹಿಂಗದವರಿಗೆ ಭವಮಾಲೆ ಯುಂಟು. ಹಿಂಗಿದವರಿಗೆ ಭವಮಾಲೆ ಇಲ್ಲ ಗುಹೇಶ್ವರಾ' ಎಂದು ನುಡಿದನು.

ಹಾಗೆಯೇ ಚನ್ನಬಸವೇಶ್ವರನು ಅಲ್ಲಮ ಪ್ರಭುವಿನನ್ನು ಸಮರ್ಥಿ ಸುತ್ತ – 'ಅಂಗದ ಮೇಲಣ ಲಿಂಗ ಹಿಂಗಿತ್ತೆಂದು ಆತ್ಮಘಾತವ ಮಾಡ

ಬೇಕೆಂಬ ಅಜ್ಞಾನಿಗಳು ಅಂಗವಾವುದು, ಲಿಂಗವಾವುದೆಂದವರೆತ್ತಬಲ್ಲರು? ಅಂಗವೇ ಆತ್ಮಲಿಂಗವ ಸಂದಿತ್ತು. ಈ ಎರಡರ ಸಂಬಂಧ ಸಂಚವ ತಿಳಿಯದೆ ಅಂಗಲಿಂಗ ಹಿಂಗಿತ್ತೆಂಬವರಿಗೆ ಪ್ರಾಣಲಿಂಗನಾಸ್ತಿ. ಪ್ರಸಾದ ವೆಲ್ಲಿಯದೋ ಕೂಡಲ ಚೆನ್ನಸಂಗಮದೇವಾ?' ಎಂದು ಗಟ್ಟಿವಾಳ ಯ್ಯನ ಆಚರಣೆಯ ರೀತಿಯನ್ನು ವಿವರಿಸಿ ಹೇಳಿದನು.

ಹೀಗೆ ಗಟ್ಟಿವಾಳಯ್ಯನು ಬೆಟ್ಟದ ಗುಂಡನ್ನು ತನ್ನ ಇಷ್ಟಲಿಂಗದಲ್ಲಿ ಅಡಗಿಸಿಕೊಂಡದ್ದನ್ನು ಬಸವಾದಿ ಪ್ರಮಥರೂ ಜಂಗಮರೂ ಕಂಡು ಅವ ನನ್ನು ಕೊಂಡಾಡುವವರಾದರು. ಜಂಗಮರಾದರೂ ಬಸವಣ್ಣನ ಮನೆಗೆ ಹೀಗೆ ಕೂಳಿಗೆ ಬಂದರೆ ತಾವು ಕೇವಲ ವೇಷಧಾರಿಗಳೆಂದು ತಿಳಿದು ಕೊಂಡು ಆಚರಿಸುವವರಾದರು. ಹೀಗೆ ಗಟ್ಟಿವಾಳಯ್ಯನು ಅವರೆಲ್ಲರಿಗೆ ಶಿವಾನುಭವದ ನಡೆಯನ್ನು ಆಗಿಂದಾಗ್ಗೆ ಅರುಹುತ್ತ ಬರುವವನಾದನು.

ಕಲ್ಯಾಣ ಪಟ್ಟಣದಲ್ಲಿ ಗಟ್ಟಿವಾಳಯ್ಯನು ತನ್ನ ಶಿವಾನುಭವದ ತತ್ವಗಳನ್ನು ನಾಟ್ಯದ ಮೂಲಕ ಅನೇಕ ವಿಧವಾಗಿ ಸಾರುತ್ತ ತನ್ನ ಕಾಯಕವನ್ನು ನಡಿಸುತ್ತಲಿದ್ದನು. ಅವನು ಇದರ ತತ್ವಗಳನ್ನು ಹೇಳುವಲ್ಲಿ ತನ್ನ ಎಲ್ಲ ವಚನಗಳ ಸಾರವೆಂದು—'ಸತ್ತು ಸಮಾಧಿಯಲ್ಲಿರಲಿಲ್ಲ, ಕಾಯವೆರಸಿ ಕೈಲಾಸಕ್ಕೆ ಹೋಗಲಿಲ್ಲ, ನಿತ್ಯವಾದ ಚರಲಿಂಗ ಹಸ್ತದ ಲ್ಲಿಯೇ ನಮಗೆ ನಿರವಯಲ ನಿಜಸಮಾಧಿ. ಇದ ಮೀರಿದವರಿಗೆ ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ' ಎಂಬ ವಚನದಲ್ಲಿಯ ಬೋಧೆ ಯನ್ನು ಅವನು ಯಾವಾಗಲೂ ತಿಳಿಸುತ್ತ ಪಟ್ಟಣದ ಬೀದಿಗಳಲ್ಲಿ ಸಂಚರಿಸುವನು. ಹೀಗೆ ಅವನು ಅನೇಕ ವರ್ಷ ಬೋಧಿಸುತ್ತ ಒಂದು ದಿನ ಕಲ್ಯಾಣ ಪಟ್ಟಣದ ರಾಜಬೀದಿಯಲ್ಲಿಯೇ ಮೃತಿಯನ್ನು ಹೊಂದಿದನು.

ಹೀಗೆ ಅವನ ಮೃತ ಶರೀರವು ಬೀದಿಯಲ್ಲಿಯೇ ಬಿದ್ದಿರುವದನ್ನು ಬಿಜ್ಜಳನ ಚಾರರು ಅವನಿಗೆ ತಿಳಿಸಲಾಗಿ ಬಿಜ್ಜಳನು ಬಸವಣ್ಣನಿಗೆ— 'ನಮ್ಮ ಪಟ್ಟಣದಲ್ಲಿ ಸತ್ತರೆ ಹೂಳಲಾಗದು, ಕಾಯವೆರಸಿ ಕೈಲಾಸಕ್ಕೆ ಹೋಗಲಾಗದು' ಎಂದು ಸಾರುವವನೊಬ್ಬನು ಸತ್ತನಂತೆ. ಅವನ ಶರೀರವು ಬೀದಿಯಲ್ಲಿ ಬಿದ್ದಿದೆಯಂತೆ. ಬಸವಣ್ಣನೇ, ನಿನ್ನ ಶರಣರಿಗೆ ನುಡಿದಂತೆ ನಡೆ ಇಲ್ಲವಲ್ಲಾ' ಎಂದು ಹಾಸ್ಯಮಾಡಿದನು. ಬಸವೇಶ್ವರನು ಇದನ್ನು ಕೇಳಿ ಕೂಡಲೆ ಕೆಲ ಶಿವಶರಣರೊಡಗೂಡಿ ಗಟ್ಟಿವಾಳಯ್ಯನ ಶರೀರವು ಬಿದ್ದ ಸ್ಥಳದಲ್ಲಿ ಬಂದು ಅದನ್ನು ಎತ್ತಿ ಸಮಾಧಿ ಮಾಡಬೇಕೆಂದು

ಶವದ ಪಾದವನ್ನು ತಾನು, ಒಬ್ಬ ಜಂಗಮನು ಅವನ ಹಸ್ತಗಳನ್ನು, ಉಳಿದ ಶರಣರು ಅವನ ಶರೀರವನ್ನು, ಹಿಡಿದು ಎಬ್ಬಿಸಬೇಕೆಂದು ಅದನ್ನು ಎತ್ತುವಷ್ಟರಲ್ಲಿಯೇ ಅವನ ದೇಹವು ಅವರ ಹಸ್ತಗಳಲ್ಲಿಯೇ ಬಯಲಾಯಿತು.

ಗಟ್ಟಿವಾಳಯ್ಯನ ಮೃತಶರೀರವು ಹೀಗೆ ಬಯಲಾಯಿತೆಂಬ ವಾರ್ತೆಯನ್ನು ಬಿಜ್ಜಳನು ಕೇಳಿ ಗಟ್ಟಿವಾಳಯ್ಯನ ಶವವು ಬಿದ್ದ ಸ್ಥಳಕ್ಕೆ ಬಂದು, ಅವನ ನುಡಿಯು ನಿಜವಾಯಿತೆಂದು ಅವನನ್ನೂ ಅಲ್ಲಿ ನೆರೆದಿದ್ದ ಶಿವಶರಣರನ್ನೂ ಹೊಗಳುತ್ತ ತನ್ನ ಓಲಗಕ್ಕೆ ಹೋದನು.

ವೀರಶೈವರಲ್ಲಿ ಎಂಟುವಿಧ ಸಮಾಧಿಗಳಿವೆ. ಅವು ಕ್ರಿಯಾಸಮಾಧಿ, ಗೋಮುಖಸಮಾಧಿ, ಗೋಳಕ ಸಮಾಧಿ, ಬಯಲಸಮಾಧಿ, ನಿಜಶಿವ ಸಮಾಧಿ, ನಿರವಯುಸಮಾಧಿ, ಸಚ್ಚಿದಾನಂದಸಮಾಧಿ, ಮತ್ತು ನಿರ್ವಾಣ ಸಮಾಧಿ ಎಂದಿವೆ. ಗಟ್ಟಿವಾಳಯ್ಯನು ನಿರವಯುಸ್ಥಲವನ್ನು ಹೊಂದಿ ನಿರ್ವಾಣ ಸಮಾಧಿಯನ್ನು ಹೊಂದಿದವನಾಗಿದ್ದಾನೆ. ನಿರ್ವಾಣ ಸಮಾಧಿಯ ವಿವರಣೆಯು ಸಂಗನಬಸವೇಶ್ವರ ವಚನದಲ್ಲಿ ಹೇಳಿದುದು ಹೇಗೆಂದರೆಃ-— 'ಪ್ರಥಮದಲ್ಲಿ ಗಟ್ಟಿವಾಳ, ಅಜಗಣ್ಣತಂದೆಗಳು, ಅಕ್ಕನಾಗಲಿ, ಮಹಾದೇವಿ, ನೀಲಲೋಚನೆ, ಮುಕ್ತಾಂಗನೆ ಮೊದಲಾದ ಶರಣರ್ಗೆ ನಿರವಯುಸ್ಥಲಕ್ಕೆ ಕಾರಣವಾದ ಶೂನ್ಯಲಿಂಗಾನುಭಾವವ ಬೋಧಿಸಿ ೨೧೬ ಸಕೀಲು ಮೊದಲಾದ ಸಕೀಲವನರುಪಿ ಆ ಅಪಸ್ಮರ ಕುಂಡಲಿ ಶೂನ್ಯಲಿಂಗೋದ್ಧರಣೆ ಚಿದಂಬರ ಮೊದಲಾದ ಚತುರ್ವಿಧ ಉದ್ಧರಣೆಯ ಕರುಣಿಸಿ ನಿರ್ವಾಣ ಸಮಾಧಿಯ ಪಥವ ತೋರಿದರು ನೋಡಾ.' ಗಟ್ಟಿವಾಳಯ್ಯನು ಹೊಂದಿದುದು ಈ ನಿರ್ವಾಣ ಸಮಾಧಿಯು. ಇದು ಶರಣನ ಅಂತಿಮಸ್ಥಿತಿಯು.

ಗಟ್ಟಿವಾಳಯ್ಯನು ವಚನಕಾರನಿದ್ದಾನೆ. ಅವನ ೧೦೦ ವಚನಗಳು ನಮ್ಮಲ್ಲಿವೆ. ಅವನು ತನ್ನ ಅನೇಕ ವಚನಗಳಲ್ಲಿ ಕೇವಲ ಅಶನಕ್ಕಾಗಿ ಬಸವೇಶ್ವರನಲ್ಲಿ ಬಂದಂಥ ಜಂಗಮರನ್ನು ಅತ್ಯಂತ ಕಟುವಾದ ರೀತಿಯಿಂದ ಟೀಕಿಸಿದ್ದಾನೆ. ಅವನ ಕೆಲವು ವಚನಗಳನ್ನು ನಾವು ಆಯ್ದು ಇಲ್ಲಿ ಉದಹರಿಸಿದ್ದೇವೆ.

## ವಚನಗಳು.

(೧) ಬಸವ ಮಾಡಿಹನೆಂದು ಬಾಯಲ್ಲಿ ಬಸಿವ ಲೋಳೆಯನರಿಯದೆ ಎಸಕದಿಂದ ಮಾಡುವದು ಹುಸಿ. ಭಕ್ತಿಯನರಿಯದ ಈ ಕಿಸುವಾಯರಿಗೇಕೆ ಚಿಕ್ಕಯ್ಯಪ್ರಿಯಸಿದ್ಧಲಿಂಗ ಇಲ್ಲ ಇಲ್ಲವೆಂದೆ.

(೨) ಜಂಗಮವಾಗಿ ಹುಟ್ಟಿದ ಮೇಲೆ ಹಿಂದಣ ಹೆಜ್ಜೆಯ ಮೆಟ್ಟಲುಂಟೇ? ಜಂಗಮವೆಂಬ ಮಾತಿಂಗೊಳಗಾದಲ್ಲಿ ಮೂರು ಮಲತ್ರಯವ ಹಿಂಗಿರಬೇಕು. ಅನಂಗನ ಬಲೆಗೆ ಎಂದಿಗೂ ಸಿಕ್ಕದಿರಬೇಕು. ಅದು ನಿಜದ ಸಂಗ. ಚಿಕ್ಕಯ್ಯಪ್ರಿಯ ಸಿದ್ಧ ಈ ಗುಣ ಆರಿಗೂ ಇಲ್ಲ ಇಲ್ಲ ಎಂದೆ.

(೩) ಆಸೆಗಾಗಿ ವೇಷವ ಹೊತ್ತು ತಿರುಗುವ ವೇಷದ ಗಂಡ, ಈಷಣತ್ರಯಕ್ಕಾಗಿ ಈಶನ ಪೂಜಿಸುವ ದಾಸನ ಗಂಡ, ಇಷ್ಟವ ಧರಿಸಿ ತನುವಿಗೆ ಆಸೆ ಮಾಡುವ ಭಾಷೆವಂತರ ಗಂಡ. ನಾನಂಜುವೆ ಹಂಗಳಿದವರಿಗೆ. ನಾನವರಿಗೆ ಊಳಿಗದ ಬಂಟ ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲವೆಂದೆನು.

ಮೇಲಿನ ವಚನಗಳಿಂದ ಗಟ್ಟಿವಾಳಯ್ಯನು ಕೇವಲ ವೇಷಧಾರಿ ಜಂಗಮರನ್ನು ಕಂಡಲ್ಲಿ ಅವನು ಸ್ಪಷ್ಟ ಶಬ್ದಗಳಿಂದ ಹಳಿಯುತ್ತ ವರ್ತಿಸುತ್ತಿದ್ದುದು ಕಂಡುಬರುತ್ತಿದೆ.

(೪) ಎನಗೆ ಹಳ್ಳದ ಹೊಡೆಕೆಯೆ(?) ಶಿವಧಾರವಾಗಿ, ಬೆಟ್ಟದ ಗುಂಡೇ ಲಿಂಗವಾಗಿ ಕಾಡಸೊಪ್ಪುಹಾಕಿದ ಮಡಕೆಯ ಉದಕವೇ ಮಜ್ಜನವಾಗಿ ಪೂಜಿಸುತ್ತಿದ್ದೆ. ಬಸವನ ಮನೆಗೆ ಹೋಗುವ ವ್ರತಗೇಡಿಗಳ ನೋಡಿ ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಎನುತಿದ್ದೆ.

(೫) ಇಷ್ಟಲಿಂಗವ ತಕ್ಕೊಂಡಲ್ಲಿ ದೃಷ್ಟವಾಯಿತ್ತೇ ನಿಮಗೆ? ಬಂಧನ ಮಾಡುವುದು ಲಿಂಗದೇಹಿಗಳಿಗೆ ಉಂಟೇ ಅಯ್ಯ? ಜಗದಲ್ಲುಂಡುಂಡು ಕೊಂಡಾಡುವವರಿಗೆ ಘನಲಿಂಗದ ಸುದ್ದಿ ಏಕೆ? ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಎಂದೆ.

(೬) ಅರ್ಥಿಗೆ ಕಟ್ಟಿದ ಲಿಂಗ ಕೆಯ್ಯೊಳಗಾಯಿತ್ತು. ನಿಶ್ಚಯದ ಲಿಂಗ ಆರ ಗೊತ್ತಿಗೆ ಸಿಕ್ಕದು. ಆ ಘನಲಿಂಗವುಳ್ಳನ್ನಕ್ಕ ನಾ ಜಂಗಮ

ನೀವು ಜಂಗುಳಿಗಳು. ಎನಗಾ ಭೀತಿ ಇಲ್ಲ. ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಎಂದೆ.

ಇವುಗಳಲ್ಲಿ ೪, ೫, ೬ ಈ ವಚನಗಳು ಜಂಗಮರು ಗಟ್ಟಿವಾಳಯ್ಯನ ಇಷ್ಟಲಿಂಗವನ್ನು ಕಸೆದುಕೊಂಡಾಗ್ಗೆ ಅವನು ಉದ್ರೇಕಗೊಂಡು ನುಡಿದವುಗಳು ಇರಬಹುದೆಂದು ನಮಗೆ ತೋರುತ್ತಿದೆ. ಶಿವಾನುಭವದ ಅವನ ವಿಚಾರಗಳನ್ನು ಹೇಳುವ ವಚನಗಳು ಅನೇಕವಿರುತ್ತವೆ. ಗ್ರಂಥ ವಿಸ್ತಾರಭಯಕ್ಕಾಗಿ ಅವುಗಳನ್ನು ನಾವು ಇಲ್ಲಿ ಉದಹರಿಸಿಲ್ಲ. ಇವನು ಸಹಸ್ರ ಗಣರಲ್ಲಿ ಎಣಿಸಲ್ಪಟ್ಟಿದ್ದಾನೆ.

---

## ಗೊಲ್ಲಾಳ.

ವಿಜಾಪುರ ಜಿಲ್ಲೆಯಲ್ಲಿ ಒಂದು ತಾಲೂಕು ಸ್ಥಳವಾದ ಸಿಂದಿಗಿ ಗ್ರಾಮದಿಂದ ಆಗ್ನೇಯ ದಿಕ್ಕಿಗೆ ೧೨ ಮೈಲುಗಳ ಮೇಲೆ ಗೋಲಗಿರಿ ಎಂಬ ಗ್ರಾಮವಿರುತ್ತದೆ. ಅಲ್ಲಿ ಕಾಟಕೋಟನೆಂಬ ಕುರುಬನು ವಾಸ ಮಾಡುತ್ತಿದ್ದನು. ಅವನ ಮಗನ ಹೆಸರು ಗೊಲ್ಲಾಳನು. ಅವನು ಕುರಿಯ ಮುಂದೆಯನ್ನಿಟ್ಟುಕೊಂಡು ಕುರಿಗಳನ್ನು ಮೇಯಿಸುವದೇ ಅವನ ಹೋರೆಯಾಗಿತ್ತು. ಒಂದುದಿನ ಅವನು ಬೀಸುಗೋಲನ್ನು ಹಿಡಿದುಕೊಂಡು ಕುರಿಗಳನ್ನು ಮೇಯಿಸುತ್ತ ಅಡವಿಯಲ್ಲಿದ್ದಾಗ ಶ್ರೀಶೈಲಕ್ಕೆ ಹೋಗುವ ಒಂದು ಪರಿಸೆಯು 'ಹರಹರಾ ಉಘೇ ಉಘೇ' ಎಂದು ಅನ್ನುತ್ತ ಗೋಲಗೆರೆಯ ಮೇಲಿಂದ ಹಾಯ್ದು ಹೋಗುತ್ತಿದ್ದದ್ದನ್ನು ಕಂಡನು. ಅವನು ಅವರಿಗೆ--ನೀವೆಲ್ಲಿಗೆ ಹೋಗುತ್ತೀರೆಂದು ಕೇಳಲು ಅವರು ಮುದಿಮಲ್ಲೇಶಲಿಂಗಕ್ಕೆ ಹೋಗುತ್ತೇವೆಂದು ಹೇಳಿದರು. ಅವರಲ್ಲೊಬ್ಬ ಮುದುಕ ಜಂಗಮನು ಕಾವಡಿಯನ್ನು ಹೊತ್ತುಕೊಂಡು ಬಿಸಿಲಲ್ಲಿ ಬೆವತು ಬಾಯಾರಿ ಆಯಾಸಪಟ್ಟು ನಡೆಯುತ್ತಿದ್ದದ್ದನ್ನು ಗೊಲ್ಲಾಳನು ಕಂಡನು- ಗೊಲ್ಲಾಳನು ಅವನಿಗೋಸ್ಕರ ಕನಿಕರಪಟ್ಟು ಅವನನ್ನು ಮಾತಾಡಿಸಲು, ಆ ಜಂಗಮನು--ನಾನು ಬಿಸಿಲಲ್ಲಿ ಬಸವಳಿದಿದ್ದೇನೆ. ನನಗೆ ಚರಣರಕ್ಷೆಗಳು ಬೇಕು. ಅವನ್ನು ನೀನು ಕೊಟ್ಟರೆ ನಿನಗೆ ನಾನು ಶ್ರೀಶೈಲಗಿರಿಯಿಂದ ಲಿಂಗವನ್ನು ತಂದು ಕೊಡುವೆನು. ಆ ಲಿಂಗವು ಬಹು ಪವಿತ್ರವಾದುದು ಎಂದು ಹೇಳಲು

**ಗೊಲ್ಲಾಳನು**—ಆಗಲಿ. ಮುದಿಮಲ್ಲೇಶನನ್ನು ತಂದುಕೊಡು ಎಂದು ಹೇಳಿ, ಅವನಿಗೆ ತನ್ನ ಜೋಡನ್ನು ಕೊಟ್ಟನು. ಮುದುಕನು ಆನಂದ ದಿಂದ ಚನ್ನಮಲ್ಲೇಶನು ನನಗೆ ಪ್ರಸನ್ನನಾದನು ಎಂದು ಅಂದು ಗಿರಿಗೆ ಹೋಗಿ ತಿರುಗಿ ಅದೇ ಗ್ರಾಮದ ಮೇಲಿಂದ ತನ್ನ ಪರಿಸೆಯೊಡನೆ ಹಾಯ್ದು ಬರುತ್ತಿರುವಾಗ ಗೊಲ್ಲಾಳನು ನರೆಗಂಬಳಿಯನ್ನು ಹೊತ್ತು ಕೊಂಡು ಬರುತ್ತಿದ್ದ ಆ ಮುದುಕ ಜಂಗಮನನ್ನು ಕಂಡು—ಅವನಿಗೆ ನನಗೆ ಮುದಿಮಲ್ಲೇಶನನ್ನು ತಂದೆಯಾ? ಎಂದು ಕೇಳಿದನು. ಆದರೆ ಆ ಜಂಗಮನು ಲಿಂಗವನ್ನು ತರುವದನ್ನು ಮರೆತು ಬಿಟ್ಟಿದ್ದನು. ಗೊಲ್ಲಾಳನು ಹೀಗೆ ಕೇಳಲು ಅವನು ಗಾಬರಿಗೊಂಡು, ಸಮೀಪದ ಲ್ಲಿಯೇ ನೆಲದ ಮೇಲೆ ಬಿದ್ದಿದ್ದ ಒಂದು ಕುರಿಯ ಹಿಕ್ಕಿಯನ್ನು ಪದು ಳದಿಂದ ಹಿಡಿದು—ಇದೇ ನಾನು ಪರ್ವತದಿಂದ ತಂದ ಲಿಂಗವು ಎಂದು ಹೇಳಿ ಅವನ ಹಸ್ತದಲ್ಲಿಟ್ಟನು. ಗೊಲ್ಲಾಳನು—ಗುರುವು ನನಗೆ ಲಿಂಗವನ್ನು ಕೊಟ್ಟನು ಎಂದು ಉಬ್ಬಿ, ಇದನ್ನೇನ ಮಾಡಲಿ ಎಂದು ಆ ಮುದಿಜಂಗಮನಿಗೆ ಕೇಳಲು, ಅವನು ಅವನಿಗೆ ಪೂಜೆಯನ್ನು ಮಾಡುವ ರೀತಿಯನ್ನು ಹೇಳಿದನು. ಹೀಗೆ ಹೇಳಿ ಆ ಜಂಗಮನು ಮುಂದೆ ಹೊರಟುಹೋದನು.

ಆಮೇಲೆ ಗೊಲ್ಲಾಳನು ಅತ್ಯಂತ ಭಕ್ತಿಯಿಂದ ಆ ಮಳಲಲ್ಲಿ ಒಂದು ಶಕ್ತಿಪೀಠವನ್ನು ರಚಿಸಿ, ಅದರಲ್ಲಿ ಹಿಕ್ಕಿಯನ್ನು ಕುಳ್ಳಿರಿಸಿ, ಎಕ್ಕೆ ಕಕ್ಕೆಯ ಹೂವುಗಳಿಂದ ಅದನ್ನು ಅರ್ಚಿಸಿ, ತನ್ನ ಎದೆಯನ್ನೇ ನಗಾ ರಿಯನ್ನು ಮಾಡಿ ಹೊಡೆದುಕೊಳ್ಳುತ್ತ, ಕೊಳಲನ್ನು ಊದುತ್ತ, ಕುರಿಗಳ ಹಾಲನ್ನು ತಂದು ನೀಡುತ್ತ ಪೂಜಿಸಿದನು. ಈ ಪ್ರಕಾರ ಅವನು ದಿನಾಲು ಕೊಡ ಹಾಲು ಹಿಕ್ಕಿಗೆ ಎರೆಯುತ್ತ, ಅದು ಪರ್ವತ ಮಲ್ಲೇ ಶನೆಂಬ ಭಾವದಿಂದ ಅತ್ಯಂತ ಭಕ್ತಿಯಿಂದ ಪೂಜೆ ಮಾಡುತ್ತ ಬಂದನು.

ಒಂದು ದಿನ ಅವನ ತಂದೆಯು ಕುರಿಗಳು ಹಾಲು ಕರೆಯುವ ದಿಲ್ಲ, ಇದಕ್ಕೆ ಕಾರಣವೇನೆಂಬುದನ್ನು ನೋಡಬೇಕೆಂದು ಅಡವಿಗೆ ಬಂದು, ಗೊಲ್ಲಾಳನು ಕುರಿಗಳ ಹಾಲು ಕರೆದು ಅದನ್ನು ಹಿಕ್ಕಿಯ ಮೇಲೆ ಸುರಿಯುತ್ತಿದ್ದದ್ದನ್ನು ಕಂಡು, ಅತ್ಯಂತ ಕೋಪಾವಿಷ್ಟನಾಗಿ ಮುಂದೆ ಬಂದು, ಆ ಲಿಂಗವನ್ನು ಕೆರಹು ಗಾಲಿಂದ ಒದೆದು ತುಳಿದು ಅಳಿಸಿಬಿಟ್ಟನು.

**BOOK-POST.**

R. N. B. 2554

*From,*
Shivanubhava
Office
Bijapur.

ಶ್ರೀ ರಾ॥ ರಾ॥

ಚನಮಲ್ಲಪ್ಪ ಸಿದ್ದಪ್ಪ ಬಡೇವಿ
ಪೋ. ಬನಹಟ್ಟಿ
ಸ್ಟೇ. ಕುಡಚಿ
(M. S. M. Ry.)










ಪ್ರತಿ ತಿಂಗಳ ೧೫ನೇ ತಾರೀಖಿಗೆ ಪ್ರಕಟವಾಗುವದು.

ವಾರ್ಷಿಕ ಚಂದಾ ಅಂಚೆವೆಚ್ಚಸಹಿತ ರೂ. ೪—೪—೦ ವ್ಹಿ. ಪಿ. ಖರ್ಚು ೦—೪—೦

ಸಂಪುಟ ೨೦ ] ನವ್ಹೆಂಬರ ೧೯೪೫. [ ಸಂಚಿಕೆ ೨


## ವಿಷಯಾನುಕ್ರಮಣಿಕೆ.

# ಶಿವಾನುಭವಕ್ಕೆ ಸಹಾಯ

ಶ್ರೀಯುತ ಪುನಬಗಟ್ಟೆ ಬಸಪ್ಪನವರು ದಾವಣಗೆರೆ ತಾಲೂಕು ಸಿದ್ಧಾನೂರ ಗ್ರಾಮದಲ್ಲಿ ಶಿವಾನುಭವ ಪ್ರವಚನವನ್ನು ನಡಿಸಿದ ಕಾಲಕ್ಕೆ ಅವರ ಪ್ರೋತ್ಸಾಹದ ಮೂಲಕ ಕೆಳಗೆ ಕಾಣಿಸಿದ ಮಹನೀಯರು ಶಿವಾನುಭವ ಪತ್ರಿಕೆಗೆ ಸಹಾಯವನ್ನು ಸಲ್ಲಿಸಿದ್ದಾರೆ ಈ ಮಹನೀಯರಿಗೂ ಶಾಸ್ತ್ರಿಗಳವರಿಗೂ ನಾವು ಬಹಳ ಋಣಿಯಾಗಿದ್ದೇವೆ.

## ಸಿದ್ಧಾನೂರು ಗ್ರಾಮ

(೧) ಸಿ. ಮಠದ ಕರಿಬಸಯ್ಯನವರು ೧ ರೂ. (೨) ಪಟೇಲ ಸಿದ್ದಪ್ಪನವರು ೨ರೂ. (೩) ಮೊಕಲಿಕಟ್ಟಿ ಮುನಿಯಪ್ಪ ೧ ರೂ. (೪) ಬೇಡೂರು ಆನೆಗೊಂಡದ ಬಸಪ್ಪ ೧ ರೂ. (೫) ಪುನಬಗಟ್ಟೆ ಬಸಪ್ಪ ಶಾಸ್ತ್ರಿಗಳು ೨ ರೂ. (೬) ಗಂಡವಕೋಡಿ ಹನುಮಪ್ಪ ೧ ರೂ. (೭) ದೊಡ್ಡ ವೀರಪ್ಪ ಶಿವಲಿಂಗಪ್ಪ ೧ರೂ. ಇತರ ಚಿಲ್ಲರೆ ಹಣ ೯ ರೂಪಾಯಿಗಳು ಒಟ್ಟು ೧೮ ರೂಪಾಯಿಗಳು (೮) ಗೌಡರ ಸಿದ್ದಪ್ಪ ಪಾವಡ ರಂಗನಹಳ್ಳಿ ೧ ರೂ. (೯) ರೇವಕ್ಕಳ ಮಳ್ಳಪ್ಪನವರು ಆನೆಕೊಂಡ ೨ರೂ. (೧೦) ಗೌಡರ ಚನ್ನಪ್ಪನವರು ಕೆಂಚನ್ನಳ್ಳಿ ೨ ರೂ. (೧೧) ನೀರಲಗಿ ಸಿದ್ದನಮಠದ ಹಾಲಪ್ಪನವರು ಪುಡನಳ್ಳಿ ೧ರೂ. (೧೨) ಬಂಗೇರ ಮಹಾದೇವಪ್ಪನವರು ಭಾದ್ರಗಟ್ಟೆ ೮ ಆ. (೧೩) ಕೊಡಿಹಳ್ಳಿ ಮಲ್ಲಪ್ಪನವರು ಕೆಂಚನ್ನಳ್ಳಿ ೧ರೂ. (೧೪) ಮಠದ ಬಸಯ್ಯನವರು ೨ರೂ. ಒಟ್ಟು ರೂ. ೯—೮—೦

ಸಂಪಾದಕ. ಶಿವಾನುಭವ ವಿಜಾಪುರ.

೨೫

# ಶಿವಾನುಭವ

ವರ್ಷ ೨೦ | ನವ್ಹಂಬರ ೧೯೪೫. | ಸಂಚಿಕೆ

## ಚನ್ನಬಸವೇಶ್ವರ ವಚನ ವಿಶೇಷಗಳು.

(ಲೇಃ-- ಶ್ರೀ. ಜ. ಪ. ಚನ್ನಬಸವರಾಜದೇಶಿಕೇಂದ್ರ ಸ್ವಾಮಿಗಳವರು,
ಜಗದ್ಗುರು ಶ್ರೀಮನ್ನಿಡುಮಾಮಿಡಿ ಶ್ರೀಶೈಲ ಸಂಸ್ಥಾನ.)

---

೨ ಐತಿಹಾಸಿಕಾಂಶಗಳು.

### ವೀರಶೈವವು ಎಂದಿನದು

ಈ ವಾದವು ಇಬ್ಬಗೆಯಾಗಿ ಹಬ್ಬಿಬಂದಿದೆ. ಮತ ಎಂದಿನದೆಂಬುದು ಮೊದಲನೆಯದು. ಹೆಸರು ಎಂದಿನದೆಂಬುದು ಎರಡನೆಯದು. ಇವೆರಡು ಇಂದು ಜಟಿಲವಾದ ಸಮಸ್ಯೆಗಳು. ಹಲವಾರು ವಿದ್ಯಾವಂತರು ಇದರಲ್ಲಿ ಭಾಗವಹಿಸಿದ್ದಾರೆ; ಸಂಶೋಧಿಸಿದ್ದಾರೆ. ಇನ್ನೂ ಸಂಶೋಧಿಸಬೇಕಾದ್ದು ಬೇಕಾದಷ್ಟು ಇವೆ. ಒಂದೊಂದೆ ಗುರಿಯನ್ನಿಟ್ಟುಕೊಂಡು ಹೋದರೆ ಇದು ಒಮ್ಮತಕ್ಕೆ ಸಮ್ಮತಕ್ಕೆ ಬರತಕ್ಕ ವಿಷಯವಲ್ಲ. ಪ್ರಾಚೀನವಾಗಲಿ ಅರ್ವಾಚೀನವಾಗಲಿ ಹೇಗಾ[illegible] ಸರಿಯೆ ಎಂದು ತೃಪ್ತಿ ಪಡೆವ ಪಾರಿಶುದ್ಧತೆ ಬೇಕು. ಇಲ್ಲಿ [illegible] ಲವಾಗದು. ಆಧಾರವಿಲ್ಲದ ಸ್ವಾಭಿಪ್ರಾಯ[illegible] ಪ್ರಯೋಜನಕ್ಕೂ ಬೀಳದು. ಹಿಂದಿನದಾಗಲು ಇಂದಿನದಾಗಲು ಆಧಾರಗಳೇ ಸಾಕ್ಷಿ. ಆ ಆಧಾರಗಳು ಯಾರ ಸೊತ್ತಲ್ಲ. ಅವು ಎಲ್ಲೆಲ್ಲಿ ಇರುವವೆಂಬುದನ್ನು ಕಂಡುಹಿಡಿಯುವುದು ಮಾತ್ರ ಸಂಶೋಧಕನ ಸಹಜ ಕರ್ತವ್ಯವಾಗಿರಬೇಕು. ಆಗ ಒಂದು ರೂಪಕ್ಕೆ ಬಂದೀತು, ಒಮ್ಮತವಾದೀತು! ಆ ಸಾಸ, ಆ ಜಸ ಅದಾರ ಭಾಗಕ್ಕೆ--ಭಾಗ್ಯಕ್ಕೆ ಸೇರಿದೆಯೊ ಕಾಣೆವು.

ಈ ಎರಡು ಬಗೆಯ ವಿಚಾರಗಳನ್ನೂ ಚನ್ನಬಸವಣ್ಣನವರ ವಚನ ಜಾಡಿನಲ್ಲಿ ಹುಡುಕಲು ಹೊರಡಲಾಗಿದೆ. ಈ ಉದ್ಯಮವು ಸಫಲಗೊಳ್ಳುವುದೊ ವಿಫಲಗೊಳ್ಳುವುದೊ ಅದು ಬೇರೆ ವಿಷಯ. ಸಂಶೋಧಕರಿಗೆ ಸರಿಯೆನಿಸಿದರೆ, ಸಹಾಯಕವಾದರೆ ಅದೇ ಸಾಕು; ಅಷ್ಟೇ ಸಾರ್ಥಕ.

ಎರಡರಲ್ಲಿ ಮತ ಎಂದಿನದು ಎಂಬುದನ್ನು ಮೊದಲು ವಿಚಾರಿಸಲಾಗುತ್ತದೆ; ವಿಶೋಧಿಸಲಾಗುತ್ತದೆ. ಈ ವಿಷಯದಲ್ಲಿ ಇಂದಿನ ಸಂಶೋಧಕರ ಅಭಿಪ್ರಾಯಗಳೇನೆಂಬುದನ್ನು ಮೊದಲು ಸಂಗ್ರಹವಾಗಿ ಪೀಠಿಕೆಯಾಗಿ ನೋಡಲೇಬೇಕು.

### ೧ ಬಸವಣ್ಣನಕಿಂತ ಪೂರ್ವದ ಕಾಲ.

೧ "... ..ದೇವರ ದಾಸಿಮಯ್ಯ ಮತ್ತು ಶಂಕರ ದಾಸಿಮಯ್ಯನವರು ಬಸವೇಶನಿಗಿಂತ ಮೊದಲಿನವರಾಗಿರುತ್ತಾರೆ. ಇದೂ ಅಲ್ಲದೆ ಬಸವೇಶನಿಗಿಂತಲೂ ಮೊದಲು ವೀರಶೈವವು ಇತ್ತೆಂಬುದಕ್ಕೆ ತಕ್ಕ ಮಟ್ಟಿನ ಚಾರಿತ್ರ ಪ್ರಮಾಣಗಳು ಸಿಕ್ಕುತ್ತವೆ......"

— ಶ್ರೀ ಜೀರಗೆ ಬಸವಲಿಂಗಪ್ಪನವರು
ಶಿವಾನುಭವ-ಸಂ-೬, ಸಂ-೪.

೨ "......ಕರ್ನಾಟಕ ಇತಿಹಾಸ ಮತ್ತು ಶಿವಶರಣರ ಚರಿತ್ರೆ ಇವುಗಳನ್ನು ನಾವು ಪರೀಕ್ಷಿಸಿದಲ್ಲಿ ವೀರಶೈವ ಧಾರ್ಮಿಕ ಚಳವಳಿಗಳು ಬಸವೇಶ್ವರನಕ್ಕಿಂತಲೂ ಮೊದಲು ಕೆಲವು ಬಾರಿ ಜರಗಿದ್ದು ಕಂಡು ಬರುತ್ತದೆ. ಮೊದಲನೇ ಚಳವಳಿಯು ದೇವರ ದಾಸಿಮಯ್ಯನ ಕಾಲದಲ್ಲಿ. ಆಗ ಕೆಂಭಾವಿ ಭೋಗಣ್ಣ, ನವಿಲಿಯ ಶಂಕರ ದಾಸಿಮಯ್ಯ, ಗೊಲ್ಲಗಿರಿಯ ಗೊಲ್ಲಾಳೇಶ್ವರ, ಮುದನೂರಿನ ಏಕೋರಾಮಾರಾಧ್ಯ ಇವರೇ ಮೊದಲಾದವರು ಉದಯಿಸಿದರು.......ಆಗ ಈ ಭಾಗದಲ್ಲಿ ಒಂದು ದೊಡ್ಡ ಧಾರ್ಮಿಕ ಚಳವಳಿಯು ಉಂಟಾಯಿತು. ಇದು ೧೧ನೇ ಶತಮಾನದ ಪೂರ್ವಾರ್ಧದಲ್ಲಿ ಜಯಸಿಂಹನ ಆಳಿಕೆಯಲ್ಲಿ ಆರಂಭವಾಯಿತೆಂದು ನಾವು ಊಹಿಸಬಹುದಾಗಿದೆ.

'ಮುಂದೆ ವಿಕ್ರಮಾರ್ಕನ ತರುವಾಯ ವೀರಶೈವ ಧಾರ್ಮಿಕ ಚಳವಳಿಯು ಪುನಃ ಪ್ರಾರಂಭವಾಯಿತು. ಇದು ಎರಡನೇ ಕ್ರಾಂತಿಯ ಕಾಲವಾಗಿರುತ್ತದೆ. '

"......ಪೇರ್ಮಾಡಿ ರಾಯನ ಕಾಲ (೧೧೨೮)ದಲ್ಲಿ ನಾವು ಹಿಂದೆ ಹೇಳಿದ ಮೇರೆಗೆ ಅನೇಕ ಶಿವಶರಣರಿಗೆ ಅವನ ಆಸ್ಥಾನದಲ್ಲಿ ಮನ್ನಣೆಯು ದೊರೆಯಿತು.

"ಬಸವೇಶ್ವರನ ಪೂರ್ವದ ಈ ಅವಧಿಯಲ್ಲಿ ಬಿಜ್ಜಳನ ತಂದೆಯಾದ ಪೇರ್ಮಾಡಿರಾಯನ ಕಾಲದಲ್ಲಿ ಅನೇಕ ಶಿವಶರಣರು ಉತ್ಪನ್ನರಾದರೆಂಬುದನ್ನು ನಾನು ಹಿಂದೆ ಉಲ್ಲೇಖಿಸಿದ್ದೇನೆ. ಅವನ ತರುವಾಯ ಸಹ ವೀರಶೈವ ಮತೋದ್ಧಾರ ಕಾರ್ಯಗಳು ದೇಶದಲ್ಲಿ ವಿಶೇಷವಾಗಿ ನಡೆದವು. ಮತ್ತು ಅದರಲ್ಲಿ ರೇವಣಸಿದ್ಧೇಶ್ವರನು ಬಹು ಪ್ರಸಿದ್ಧನಾಗಿ ವೀರಶೈವ ಧರ್ಮಕ್ರಾಂತಿಯನ್ನು ಮಾಡಿದನೆಂದು ಕಂಡು ಬರುತ್ತದೆ.

'ರೇವಣ ಸಿದ್ಧೇಶ್ವರನು ಬಸವೇಶ್ವರನಕ್ಕಿಂತಲೂ ಮೊದಲಿನವನೆಂದು ಅವನ ಚರಿತೆಯಿಂದಲೇ ಸ್ಪಷ್ಟವಾಗುತ್ತದೆ. ...... ರೇವಣಸಿದ್ಧನು ಬಸವನಕಿಂತಲೂ ಹಿಂದಿನವನು. ......'

" ರೇವಣಸಿದ್ಧೇಶ್ವರನು ಈ ಭಾಗ (ತದ್ದೇವಾಡಿ ಭಾಗ)ದಲ್ಲಿ ಇದ್ದಾಗ್ಗೆ ಮುಖ್ಯವಾಗಿ ಸೊಲ್ಲಾಪುರ ಮತ್ತು ವಿಜಾಪುರ ಜಿಲ್ಲೆಗಳಲ್ಲಿ ವೀರಶೈವಧರ್ಮದ ಬಗ್ಗೆ ಬಹುದೊಡ್ಡ ಕ್ರಾಂತಿಯನ್ನುಂಟುಮಾಡಿದನು. ಅವನು ಜನ ಸಾಮಾನ್ಯರಲ್ಲಿ ವೀರಶೈವ ಧರ್ಮಪ್ರಸಾರ ಮಾಡಿದನು. ......' ಮತ್ತು

—ಶಿವಾನುಭವ= ಸಂ—೧೩, ಸಂ-೫

" ಶಂಕರ ದಾಸಿಮಯ್ಯ ದೇವರ ದಾಸಿಮಯ್ಯರ ಕಾಲದಿಂದಲೂ ವೀರಶೈವ ತತ್ವಗಳು ಪ್ರಚುರ ಹೊಂದುತ್ತ ಬಂದಿವೆ. ಅವು ಅವರಕ್ಕಿಂತಲೂ ಪೂರ್ವದಲ್ಲಿ ಪ್ರಚಲಿತ ವಿರಬಹುದು. ಆದರೆ ಇದು ಇನ್ನೂ ಸಂಶೋಧಿಸಲ್ಪಟ್ಟಿಲ್ಲ. ......"

—ಶ್ರೀ ಪಿ. ಜಿ. ಹಳಕಟ್ಟಿಯವರು.
ಶಿವಾನುಭವ= ಸಂ—೧೩, ಸಂ-೭

## ೨ ಆಗಮಕಾಲ

೧ "..... ಲಿಂಗಪೂಜಾವಿಧಿಯು ಶಿವಾಗಮಂಗಳಲ್ಲಿ ಪ್ರಾರಂಭಿಸಿತು. ಈ ಆಗಮಗಳು ವೇದಮಂತ್ರಗಳನ್ನು ಶಿವಾರ್ಚನಾಪರವಾಗಿಯೂ ಶಿವಲಿಂಗ ಶಿವಮೂರ್ತಿ ಪ್ರತಿಷ್ಠಾಪರವಾಗಿಯೂ ಬಳಸಹತ್ತಿದವು.

'' ಅಗ್ನಿಹೋತ್ರಾಶ್ಚ ವೇದಾಶ್ಚ ಯಜ್ಞಾಶ್ಚ ಬಹುದಕ್ಷಿಣಾಃ ।
ಶಿವಲಿಂಗಾರ್ಚನಸ್ಯೈತೇ ಕೋಟ್ಯಂಶೇನಾಪಿ ನೋಸಮಾಃ॥ "

ಕಾಮಿಕಾಗಮ ಶಿವಾರ್ಚನ ಪಟಲ ೧೧ – ಎಂದು ಶಿವಲಿಂಗಾರ್ಚನವೇ ಅಧಿಕವಾದುದೆಂದು ಸಾರಿದವು.

' ಕಾಮಿಕಾದ್ಯಾಗಮಗಳ ಉತ್ತರ ಭಾಗದಲ್ಲಿ ಉಕ್ತವಾದ ಲಿಂಗಾಂಗ ಧರ್ಮವು ಸನಾತನವಾದರೂ, ಕ್ರಮಕ್ರಮೇಣ ಪ್ರಕಟವಾಯಿತೆನ್ನುವಲ್ಲಿ ಪರಮೇಶ್ವರನ ಲೀಲೆಗಳು ಸಾಕ್ಷಿಯಾಗಿವೆ. "

—ಶ್ರೀ ಸಿದ್ಧರಾಮಪ್ಪ ದುಂಡಪ್ಪ ಪಾವಟೆ ಹುಬ್ಬಳ್ಳಿ.
ಶಿವಾನುಭವ = ಸಂ– ೬, ಸಂ–೬.

೨ "...... ಆಗಮ ಮಾರ್ಗದಲ್ಲಿಯೇ ಒಂದು ಯೋಗಿಗಳ ವೃಂದವು ಕರ್ಮಚಿನ್ಹಗಳಾದ ಶಿಖೆ, ಜನಿವಾರಗಳನ್ನು ಕಿತ್ತೊಗೆದು, ಪಾರಮಾರ್ಥಮಾರ್ಗವನ್ನು ಕೈಕೊಂಡು ಜ್ಞಾನದ ಕುರುಹಾದ ಇಷ್ಟಲಿಂಗವನ್ನು ಮಸ್ತಕದಲ್ಲಿ ಧರಿಸಿ ಶಿವಧರ್ಮಶ್ರೇಷ್ಠತೆಯನ್ನು ಪ್ರಸ್ಥಾಪಿಸಿದರು. ಇವರೇ ಪೂರ್ವದ ವೀರಶೈವರು. ......ಆಗ ವೀರಶೈವರು ಅಷ್ಟಾವರಣ, ಪಂಚಾಚಾರಗಳೆಂಬ ಧರ್ಮಸಾಧನೆಗಳನ್ನೂ ವ್ರತಗಳನ್ನೂ ಗೊತ್ತುಮಾಡಿಕೊಂಡಿದ್ದರು. ... .. ಎಷ್ಟೋಜನ ವಿಚಕ್ಷಣರು ಪರಮಾತ್ಮನ ಕಳೆಯಾದ ಲಿಂಗವು ದೇಹದಲ್ಲಿಯೇ ಇದೆಯೆಂಬ ತತ್ವವನ್ನು ಅಂಗಿಕರಿಸಿ ಜಗಕ್ಕೆಲ್ಲ ಲಿಂಗವೇ ಪರಬ್ರಹ್ಮವೆಂದೂ ಆ ಲಿಂಗದ ಹೊರತು ಬೇರೆ ದೇವರಿಲ್ಲೆಂದೂ, ಇತಿಹಾಸದಲ್ಲಿಯೂ, ಧರ್ಮದಲ್ಲಿಯೂ ಚಿರಸ್ಮರಣೀಯವಾದ ಉತ್ಕ್ರಾಂತಿಯನ್ನೆಬ್ಬಿಸಿದರು. ದೇವರು ದೇವಾಲಯಗಳಲ್ಲಿಲ್ಲ. ನಮ್ಮ ದೇಹದಲ್ಲಿರುವನು. ನಮ್ಮ ದೇಹವೇ ದೇಗುಲ. ಇಷ್ಟಲಿಂಗವೇ ಪರಮಾತ್ಮನೆಂದು ಸಾರುವ ಜನಾಂಗವು ಪ್ರಾರಂಭದಲ್ಲಿ ಸಣ್ಣದಾಗಿದ್ದು, ಕೊನೆಗೆ ಬಹು ದೊಡ್ಡ ಸ್ವರೂಪವನ್ನು

ಹೊಂದಿತು. ಹಿಂದೆ ಹೇಳಿದ ಕೇವಲ ಜ್ಞಾನಮಾರ್ಗಾವಲಂಬಿಗಳಾದ ಆಗಮ ವೀರಶೈವರೇ ಈ ಹೊಸ ಉತ್ಕ್ರಾಂತಿಯ ಮುಂದಾಳುತನವನ್ನು ಅಂಗೀಕರಿಸಿದರು. ಇಂಥ ಮಾರ್ಗಾವಲಂಬಿಗಳಾದ ಲಿಂಗಾಂಗಿಗಳು ೧೧ನೆಯ ಶತಮಾನದ ಪೂರ್ವದಲ್ಲಿ ಅಲ್ಲಲ್ಲಿ ಅಲ್ಪ ಸಂಖ್ಯಾಕರಾಗಿ ಕಂಗೊಳಿಸುತ್ತಿದ್ದರು. ಇವರಲ್ಲಿ ದೇವರ ದಾಸಿಮಯ್ಯ, ಶಂಕರ ದಾಸಿಮಯ್ಯ, ಜಾತವೇದಮುನಿ ಮುಂತಾದವರ ಹೆಸರುಗಳನ್ನು ಉದಹರಿಸಬಹುದು.

—ಶ್ರೀ ಬ್ಯಾಳಿ ಕಲ್ಯಾಣಪ್ಪನವರು, ಬಿ. ಎ.
ಶಿವಾನುಭವ = ಸಂ-೧೧, ಸಂ-೨.

## ೩ ವೇದಾಗಮ ಕಾಲ.

೧ "ಹನ್ನೆರಡನೆಯ ಶತಮಾನದಲ್ಲಿದ್ದ ಕಳಚೂರ್ಯ ದೊರೆಯಾದ ಬಿಜ್ಜಳನ ಕಾಲದಲ್ಲಿದ್ದ ಕಲ್ಯಾಣದ ಬಸವೇಶ್ವರನೇ ವೀರಶೈವ ಮತಸ್ಥಾಪಕನೆಂದು ಹಲವು ಪಂಡಿತರು ಭಾವಿಸಿದ್ದಾರೆ. ವೇದದಷ್ಟೇ ಪ್ರಾಚೀನವೂ ವೇದಸಮ್ಮತವೂ ಆದ ವೀರಶೈವ ಮತವು ಪ್ರಾಚೀನ ಆಗಮೋಕ್ತ ಶೈವಮತದ ಒಂದು ಶಾಖೆಯೆಂಬುದನ್ನು ಅನೇಕರು ಇನ್ನೂ ಕಂಡುಕೊಂಡಿಲ್ಲ. ಶೈವಮತ ಮತ್ತು ದರ್ಶನಗಳಿಗೆ ಕಾರಂಜಿಯಂತಿರುವ ಶಿವಾಗಮಗಳೇ ವೀರಶೈವ ಮತಕ್ಕೂ ಆಧಾರಗ್ರಂಥಗಳು. ...... ವೀರಶೈವ ಸಿದ್ಧಾಂತಕ್ಕೆ ಅನ್ವಯಿಸುವ ಪಾರಿಭಾಷಿಕ ಶಬ್ದಗಳು ವೇದ ಸಾಹಿತ್ಯದಲ್ಲಿ ನೂರಾರಿವೆ. ಈ ಕಾರಣದಿಂದ ಬಹುಪ್ರಾಚೀನ ಕಾಲದಿಂದಲೂ ವೀರಶೈವ ಮತವು ಅಸ್ತಿತ್ವದಲ್ಲಿತ್ತೆಂದು ಸಾರಲು ಆಧಾರಗಳಿವೆ. ..."

—ಶ್ರೀ ಎಸ್. ಜಿ. ಸಾಖರ್‌ಪೇಕರ್, ಬರೋಡ.
ಶರಣಸಾಹಿತ್ಯ = ಸಂ-೩, ಸಂ-೬.

೨. "ಬೌದ್ಧ, ಕ್ರಿಶ್ಚನ್, ಮುಸಲ್ಮಾನ ಧರ್ಮಗಳಂತೆ ವೀರಶೈವ ಧರ್ಮವು ಒಬ್ಬಾನೊಬ್ಬ ವ್ಯಕ್ತಿ ಅಥವಾ ವ್ಯಕ್ತಿಗಳಿಂದ ಸ್ಥಾಪಿತವಾದುದಲ್ಲ. ಅದಕ್ಕೆ ಒಂದು ಪುರಾತನ ಪರಂಪರೆ ಇದೆ. ವೀರಶೈವ ಧರ್ಮವು ವೇದಾಗಮಗಳಿಂದ ಪ್ರಣೀತವಾದುದೆಂದು ಅದರಲ್ಲಿರುವ

ಗ್ರಂಥಗಳಲ್ಲಿ ಆಗಿಂದಾಗ್ಗೆ ಹೇಳಲ್ಪಡುವದುಂಟು. ವೀರಶೈವ ಮತ ತತ್ವಗಳನ್ನು ನಾವು ವಿವೇಚಿಸಿದಲ್ಲಿ ಈ ಅಭಿಪ್ರಾಯವೇ ಬಲಪಡುತ್ತದೆ. ಇದರಲ್ಲಿ ವೇದೋಪನಿಷತ್ತುಗಳಲ್ಲಿಯ ಪರಬ್ರಹ್ಮದ ವಿಚಾರಗಳು ಕಂಡು ಬರುತ್ತವೆ. ಆಗಮಗಳಲ್ಲಿ ಉಕ್ತವಾಗಿರುವ ಅನೇಕ ಆಚಾರ ವಿಷಯಕ ಪದ್ಧತಿಗಳೂ ತತ್ವಗಳೂ ಇದರಲ್ಲಿ ಹೇಳಲ್ಪಟ್ಟಿವೆ..."

—ಶ್ರೀ. ಫ. ಗು. ಹಳಕಟ್ಟಿಯವರು
ವಚನಶಾಸ್ತ್ರಸಾರ (ಭಾಗ-೨) ಅನುಬಂಧ ೧೪.

### ೪ ವೇದಗಳಿಗಿಂತ ಮೊದಲು.

೧ "ಈಚಿಗೆ ಪಂಜಾಬಿನಲ್ಲಿ ಹರಪ್ಪಾ, ಮಹಾಂಜೋದಾರೊ ಎಂಬ ಸ್ಥಳಗಳಲ್ಲಿ ಭೂ ಶೋಧನ ಮಾಡಿದ್ದರಲ್ಲಿ ಹೊರಬಿದ್ದ ಕೆಲವು ಕಟ್ಟಡಗಳು ಮುಂತಾದವುಗಳಲ್ಲಿ ಲಿಂಗಗಳು ಸಿಕ್ಕಿರುವದರಿಂದ ಭೂಗರ್ಭ ಶೋಧನ ಶಾಸ್ತ್ರದ ಪ್ರಕಾರ ಇದು (ಲಿಂಗಪೂಜಾತತ್ವ) ಆರ್ಯ ವೇದಗಳಿಗಿಂತ ಮೊದಲಿನ ದ್ರಾವಿಡರ ಕಾಲದ್ದೆಂದು ಸಿದ್ಧಾಂತ ಮಾಡಿರುತ್ತಾರಾಗಿ— ಲಿಂಗಪೂಜೆಯು ವೇದಗಳಿಗಿಂತ ಮೊದಲು ದ್ರಾವಿಡರಲ್ಲೇ ಇತ್ತೆಂದು ತಿಳಿಯಬೇಕಾಯಿತು. ಈ ಕಾರಣದಿಂದ ಲಿಂಗಪೂಜೆಯು ಪ್ರಾಚೀನತ್ವಕ್ಕೆ ವೇದಗಳನ್ನು ಅರಿಸಿಕೊಂಡು ಹೋಗುವ ಅವಶ್ಯಕತೆ ಏನೂ ಕಾಣುವದಿಲ್ಲ.

ಶ್ರೀ ಜೀರಗೆ ಬಸವಲಿಂಗಪ್ಪನವರು.
ಶಿವಾನುಭವ = ಸಂ.-೯, ಸಂ.-೩.

ಹೀಗೆ ಸಂಶೋಧಕರಲ್ಲಿ ಭಿನ್ನಾಭಿಪ್ರಾಯಗಳಿದ್ದರೂ ಇವೆಲ್ಲ ಸತ್ಯವಾದವುಗಳೆ! ಅಲ್ಲದೆ ಅವರವರ ಅಭಿಪ್ರಾಯಗಳಲ್ಲಿ ಗುರುತುಹಾಕಿದ ವಾಕ್ಯಗಳಿಂದ ಅವರವರ ದೃಷ್ಟಿಗಳು ಎಷ್ಟು ದೂರ ಹರಿದಿವೆಯೆಂಬುದನ್ನೂ ಮನಗಾಣಬಹುದಾಗಿದೆ. ಈ ಸಂಶೋಧಕರು ಹೇಳುವ ಕಾಲಗಳಲ್ಲೆಲ್ಲ ವೀರಶೈವವು ಇದ್ದುದಲ್ಲದೆ, ಇವರುಗಳು ಹೇಳುವ ಕಾಲಗಳಿಗಿಂತಲೂ ಇನ್ನೂ ಪೂರ್ವದಲ್ಲಿಯೇ ಇತ್ತೆಂದು ಚನ್ನಬಸವಣ್ಣನವರ ವಚನಗಳಿಂದ ವ್ಯಕ್ತವಾಗುತ್ತದೆ. ಅವನ್ನಿಲ್ಲಿ ಎತ್ತಿ ವಿವರಿಸೋಣವಾಗುತ್ತದೆ.

## ವೀರಶೈವವು ಇಪ್ಪತ್ತೊಂದು ಯುಗದ್ದು.

"ಇಪ್ಪತ್ತೊಂದು ಯುಗದವರೆಲ್ಲರು ಲಿಂಗವ ಪೂಜಿಸಿ ದೃಷ್ಟವಾವುದು ನಷ್ಟವಾವುದೆಂದರಿಯದೆ ಭಾವಭ್ರಮಿತರಾದರು. ಜೀವ ಸಂಕಲ್ಪಿತರಾದರು. ಜೀವನಾಹುತಿಯನೆ ಲಿಂಗಾರ್ಪಿತವೆಂಬುವರು ಭವದ ಬಳ್ಳಿಯ ಹರಿಯರರಿಯರಾಗಿ, ಇಂತಹರೆ ಭಕ್ತರು? ಇಂತಹರೆ ಪ್ರಸಾದಿಗಳು?......"

ಪ್ರಾಣಲಿಂಗಿಯ ಪ್ರಸಾದಲಿಂಗಸ್ಥಲದ ವಚನವಿದು. ಪುರಾತನ ವೀರಶೈವರ ಲಿಂಗಾರ್ಪಿತ ವಿಧಾನವು ಪರಿಶುದ್ಧವಾದುದಲ್ಲ. ಹಿಂದಿನವರು ಜೀವನಾಹುತಿಯನೆ ಲಿಂಗಾರ್ಪಿತವೆಂಬುವರು. ಇದು ತಪ್ಪು. ಇವರು ನಿಜವಾದ ಭಕ್ತರೆಂದೆನಿಸರು; ಪ್ರಸಾದಿಗಳೆಂದೆನಿಸರು.—ಎಂಬುದೇ ಈ ವಚನದ ತಾತ್ಪರ್ಯ. ಇದರಲ್ಲಿ ತೇಲುವದೇನೆಂದರೆ— ಜೀವನಾಹುತಿಯೆ ಲಿಂಗಾರ್ಪಿತವೆಂದು ಭಾವಿಸಿದ್ದ ಹಿಂದಿನ ಇಪ್ಪತ್ತೊಂದು ಯುಗದ ಲಿಂಗಾಂಗಿಗಳು ಅವರೆಂತಹ ಭಕ್ತ-ಪ್ರಸಾದಿಗಳು? ಅಲ್ಲಲ್ಲ. ಎಂದು ಸ್ಪಷ್ಟವಾಗಿ ಹಿಂದಿನ ಇಪ್ಪತ್ತೊಂದು ಯುಗದ ಲಿಂಗಪೂಜಕರ (ಲಿಂಗಾಂಗಿಗಳ) ಲಿಂಗಾರ್ಪಣಾಚರಣೆಯ ಕೊರತೆಯನ್ನು ಕಂಡೆತ್ತಿ ಪರಿಪೂರ್ತಿಗೊಳಿಸುವ ಪ್ರಯತ್ನ ನಡೆದಿದೆ ಈ ವಚನದಲ್ಲಿ. ಇದರಿಂದ ಚನ್ನಬಸವಣ್ಣನ ದೃಷ್ಟಿಯಲ್ಲಿ ವೀರಶೈವವು ಇಪ್ಪತ್ತೊಂದು ಯುಗದ್ದು. ಬಹು ಪುರಾತನದ್ದು.

ಚನ್ನಬಸವಣ್ಣನ ಈ ಅಭಿಪ್ರಾಯವನ್ನು ಐತಿಹಾಸಿಕವಲ್ಲವೆಂದು ಅಲ್ಲಗಳೆವುದಾಗಲಿ, ಹಗುರಾಗಿ ಕಾಣುವದಾಗಲಿ ಸತ್ಯಸಂಶೋಧಕರಿಗೆ ಉಚಿತವಾದುದಲ್ಲ. ಆತ ಬರೀ ಜ್ಞಾನಿಯಲ್ಲ, ಕಾಲಜ್ಞಾನಿ. ಮೇಲಾಗಿ ಸಮಾಜದ ಸುವ್ಯವಸ್ಥೆಗಾಗಿ ನಡುಕಟ್ಟಿನಿಂತು ಜೀವನವನ್ನು ಅದಕ್ಕಾಗಿಯೇ ಮೀಸಲಾಗಿರಿಸಿದ ಮಹಾವ್ಯಕ್ತಿ; ಮಹಾತ್ಮಾ. ಸಮಾಜದ ಸೃಷ್ಟಿ, ಸ್ಥಿತಿ, ಗತಿಗಳನ್ನು ಈತನು ಚನ್ನಾಗಿ ಬಲ್ಲ. ಬಸವಾದಿಗಳಿಗೆ ತಮ್ಮ ತಮ್ಮ ಹಿಂದಿನ ಭವಭವಾಂತರದ ಜನುಮಗಳ ಜ್ಞಾನವಿದ್ದರೆ ಸಮಾಜ ಸುಧಾರಣೆಯೆ ಸರ್ವಸ್ವವಾಗಿಯುಳ್ಳ ಚನ್ನಬಸವಣ್ಣನಿಗೆ ಸಮಾಜವು ಎಂದು ಸೃಷ್ಟಿಯಾದುದೆಂಬುದು ಚನ್ನಾಗಿ ಗೊತ್ತಿತ್ತು. ತನ್ನ ಕಾಲಜ್ಞಾನದ ಸದುಪಯೋಗವನ್ನು ವ್ಯಕ್ತಿತ್ವದಲ್ಲಿಯೆ ಕೊಳೆಹಾಕದೆ ಸಾಮಾಜಿಕವಾಗಿ ಸಾರ್ಥಕಪಡಿಸಿದನು. 'ಕಾಲಜ್ಞಾನವಾಯಿತ್ತೆಂದು

ಕರ್ಮವ ಹಳಿಯಬೇಡ.' ಎಂಬುದು ಚನ್ನಬಸವಣ್ಣನ ಉದಾತ್ತ ಉದ್ದೇಶ; ಉತ್ಕೃಷ್ಟ ಆದೇಶ! ಕಾಲಜ್ಞಾನಿಯಾಗಿ—ನಾನು ಹಿಂದಿಂದಿನ ಜನ್ಮಗಳಲ್ಲಿ ಹಾಗಾದೆ, ಹೀಗಾದೆ ಎಂದು ಕರ್ಮವ ಹಳಿಯುತ್ತ ಕುಳಿತರೆ ಏನು ಪ್ರಯೋಜನ? ಕರ್ಮವ ಹಳಿವುದೆ ಕಾಲಜ್ಞಾನದ ಫಲವಲ್ಲ. ಕಾಲಜ್ಞಾನವುಂಟಾದರೆ ಅದನ್ನು ಸಮಾಜಕ್ಕಾಗಿ ಸಂಸ್ಕೃತಿಗಾಗಿ ಉಪಯೋಗಿಸಬೇಕು. ಅವುಗಳ ಅಸ್ತಿತ್ವವನ್ನು ಆಸ್ತಿಯನ್ನು ಅಳೆದು ನೋಡಬೇಕು. ಆಗ ಅದು ಸಾರ್ಥಕ. ತನ್ನ ಕಾಲಜ್ಞಾನದ ಫಲದಿಂದ ಈ ಕೆಲಸ ಮಾಡಿದ್ದಾನೆ ಚನ್ನಬಸವಣ್ಣ.

"ಕೃತಯುಗ ಚೌತೀಸಲಕ್ಷ ಐವತ್ತಾರು ಸಾವಿರ ವರುಷದಲ್ಲಿ
ಕೇತಾರೇಶ್ವರ ದೇವರು ಪೃಥ್ವಿಗೆ ಮೂಲಸ್ಥಾನ.
ತ್ರೇತಾಯುಗ ಹದಿನೇಳು ಲಕ್ಷ ಇಪ್ಪತ್ತೆಂಟು ಸಾವಿರ ವರುಷದಲ್ಲಿ
ಸೇತುಬಂಧ ರಾಮೇಶ್ವರ ದೇವರು ಪೃಥ್ವಿಗೆ ಮೂಲಸ್ಥಾನ.
ದ್ವಾಪರಯುಗ ಎಂಟು ಲಕ್ಷ ಅರವತ್ತು ನಾಲ್ಕು ಸಾವಿರ ವರುಷದಲ್ಲಿ
ಸೌರಾಷ್ಟ್ರ ಸೋಮೇಶ್ವರ ಪೃಥ್ವಿಗೆ ಮೂಲಸ್ಥಾನ.
ಕಲಿಯುಗ ನಾಲ್ಕು ಲಕ್ಷ ಮೂವತ್ತೆರಡು ಸಾವಿರ ವರುಷದಲ್ಲಿ
ಶ್ರೀಗಿರಿ ಚನ್ನಮಲ್ಲಿಕಾರ್ಜುನದೇವರು ಪೃಥ್ವಿಗೆ ಮೂಲಸ್ಥಾನ.
ಇದುಕಾರಣ ಕೂ. ಚ. ಸಂ. ದೇವಾ ನಿಮ್ಮ ಭಕ್ತರಿಗೆ ಜಂಗಮವೇ
ಮೂಲಸ್ಥಾನ ಅಂದು ಮೊದಲು ಇಂದು ಕಡೆಯಾಗಿ."

ಈ ವಚನದಲ್ಲಿ ಉಕ್ತವಾದ ನಾಲ್ಕು ಯುಗಗಳ ಕಾಲಪರಿಮಿತಿ, ಕ್ರಮವಿಡಿದು ಕೇತಾರೇಶ್ವರ, ರಾಮೇಶ್ವರ, ಸೋಮೇಶ್ವರ, ಮಲ್ಲಿಕಾರ್ಜುನದೇವರ ಹೊಂದಾವಣಿಕೆ ಇವು ಪಂಚಾಂಗ ಪುಸ್ತಕಗಳಿಂದ ಆಯ್ದವಲ್ಲ. ಸಂಘಟಿಸಿದ ಕಾಲಜ್ಞಾನದಿಂದ ಹೊರಹೊಮ್ಮಿದವು. ಇದಿರಲಿ.

ಕೊನೆಯದಾಗಿ 'ದೇವಾ ನಿಮ್ಮ ಭಕ್ತರಿಗೆ ಜಂಗಮವೇ ಮೂಲಸ್ಥಾನ ಅಂದು ಮೊದಲು ಇಂದು ಕಡೆಯಾಗಿ' ಎಂದು ಹೇಳಿದುದನ್ನು ನಾವು ಚನ್ನಾಗಿ ಲಕ್ಷಿಸಬೇಕು. ಇದರಿಂದಲೂ ವೀರಶೈವ ಪ್ರಾಚೀನತ್ವವು ಬಲು ಸೊಗಸಾಗಿ ಚಿತ್ರಿತವಾಗಿದೆ. 'ಅಂದು ಮೊದಲು' ಅಂದರೆ ಯಾವಕಾಲ? 'ನಿಮ್ಮ ಭಕ್ತರು' ಎಂದರೆ ಯಾರು? 'ಜಂಗಮ' ಯಾರ ತತ್ವ? ಈ ಪ್ರಶ್ನೆಗಳಿಗೆ ಉತ್ತರವನ್ನು ಹೇಳುವಾಗಲೆ ವೀರಶೈವ ಪ್ರಾಚೀನತ್ವವೂ ಸಹ ಅದರೊಡನೆ ಉಕ್ತವಾಗುತ್ತದೆ.

"......ಕೃತಯುಗದಲ್ಲಿ ಸುವರ್ಣದ ಲಿಂಗವಾದಲ್ಲಿ ನಿನ್ನ ಹೆಸರೇನು? ತ್ರೇತಾಯುಗದಲ್ಲಿ ಬೆಳ್ಳಿಯ ಲಿಂಗವಾದಲ್ಲಿ ನಿನ್ನ ಹೆಸರೇನು? ದ್ವಾಪರಯುಗದಲ್ಲಿ ತಾಮ್ರದ ಲಿಂಗವಾದಲ್ಲಿ ನಿನ್ನ ಹೆಸರೇನು? ...... ಕಲಿಯುಗದಲ್ಲಿ ಕಲ್ಲು ಲಿಂಗವಾದಲ್ಲಿ ಇಕ್ಕಿದ ಬೋನವನುಣ್ಣದೇಕೊ? ಹಿಂದೆ ನಾಲ್ಕು ಯುಗದಲ್ಲಿ ಅಳಿದುಹೋದುದನರಿಯಿರೆ. ಇನ್ನೇಕೆ ದೇವರೆಂದು ಆಚರಿಸುವಿರೊ? ಸಾಕ್ಷಿ॥

"ಸ್ಥಾವರಂ ಜಂಗಮಶ್ಚೈವ ದ್ವಿವಿಧಂ ಲಿಂಗಮುಚ್ಯತೇ ।
ಜಂಗಮಸ್ಯೈವಮಾನೇನ ಸ್ಥಾವರಂ ನಿಷ್ಫಲಂ ಭವೇತ್ ॥
ಸ್ಥಾವರಾರ್ಪಿತ ನೈವೇದ್ಯಂ ನ ತೃಪ್ತಿಲಿಂಗಮೇವಚ ।
ಜಂಗಮಾರ್ಪಿತ ನೈವೇದ್ಯಂ ಮಮ ತೃಪ್ತಿಂತು ಪಾರ್ವತಿ ॥ "

ಇದುಕಾರಣವಾಗಿ ಕೂ. ಚ. ಸಂ. ದೇವಯ್ಯ ತಪ್ಪದೆ ನಾಲ್ಕು ಯುಗದಲ್ಲಿ ಜಂಗಮವೆ ಪ್ರಾಣಲಿಂಗವಾದ ಕಾರಣ ಸ್ಥಾವರವು ಜಂಗಮ ಪ್ರಸಾದಕ್ಕೆ ಯೋಗ್ಯವಾಯಿತ್ತು. "

ಕೃತಯುಗದಿಂದ ಇಂದಿನವರೆವಿಗೂ ಜಂಗಮವೇ ಘನವಾಗಿ, ಸ್ಥಾವರವಾದ ಇಷ್ಟಲಿಂಗಕ್ಕಿಂತಲೂ ಜಂಗಮವೇ ಅರ್ಪಣಕ್ಕೆ ಅರ್ಹತೆಯನ್ನು ಪಡೆದು, ನಾಲ್ಕು ಯುಗದಲ್ಲಿಯೂ ಜಂಗಮವೇ ಪ್ರಾಣಲಿಂಗವಾಗಿರುವುದನ್ನು ಸ್ಪಷ್ಟವಾಗಿ ವಿವರಿಸಿದ್ದಾನೆ. ವೀರಶೈವದ ಪ್ರಾಚೀನತ್ವಕ್ಕೆ ಇದಕ್ಕಿಂತಲೂ ನಿದರ್ಶನ ಬೇಕೆ?

ವೀರಶೈವವು ಬಸವಣ್ಣನಿಂದಲೆ ಹುಟ್ಟಿತೆಂದು ಹೇಳಲು ಹಲವರು ಹವಣಿಸುತ್ತಾರೆ. ಇದು ಸಿದ್ಧಿಗೆ ಮುಟ್ಟದ ಮಾತು. ಮೇಲ್ಕಂಡ ವಚನಗಳಿಂದ ಇದು ನೆಲೆ ನಿಲ್ಲುವುದಿಲ್ಲ. ಅಲ್ಲದೆ ಬಸವಣ್ಣನಿಂದಲೆ ಈ ಮತ ಹುಟ್ಟಿದ್ದರೆ ಇದಕ್ಕೆ "ಬಾಸವ ಮತ" ವೆಂದು ಧಾರಾಳವಾಗಿ ಹೆಸರು ಬರಬಹುದಾಗಿತ್ತು. ಬರಲು ಸಾಧ್ಯವಿತ್ತು; ಸಹಜವಿತ್ತು. ಏಕೆಂದರೆ ಇತರ ಮತಗಳು ಯಾವ ಯಾವ ವ್ಯಕ್ತಿಯಿಂದ ಜನಿಸಿವೆಯೋ ಆ ಆ ವ್ಯಕ್ತಿಗಳ ಹೆಸರುಗಳೇ ಅವಕ್ಕೆ ಪ್ರಚಲಿತವಾಗಿವೆ. ನಿದರ್ಶನಕ್ಕಾಗಿ ಬುದ್ಧನಿಂದ ಜನಿಸಿದುದು ಬೌದ್ಧಮತ. ಜಿನನಿಂದ ಜನಿಸಿದುದು ಜೈನಮತ. ಶಂಕರನಿಂದ ಸ್ಥಾಪಿತವಾದುದು ಶಾಂಕರ



ಮತ. ಮಧ್ವನಿಂದ ಬಂದುದು ಮಾಧ್ವಮತ. ರಾಮಾನುಜನಿಂದ ರಚಿತವಾದುದು ರಾಮಾನುಜಮತ. ಅಲ್ಲದೆ ಕ್ರಿಸ್ತನಿಂದ ಪ್ರತಿಪಾದಿತ ವಾದುದು ಕ್ರೈಸ್ತಮತ. ಮುಹಮ್ಮದ ಪೈಗಂಬರನಿಂದ ನ್ಯೈದೋರಿ ದುದು ಮುಹಮ್ಮದೀಯಮತ.— ಎಂಬುದಾಗಿಯೇ ವ್ಯವಹರಿಸಲಾಗು ತ್ತಿವೆ. ಈ ಪ್ರಸಕ್ತಿ ವೀರಶೈವಮತಕ್ಕಿಲ್ಲ. ಇದು ಉಳಿದ ಮತಗಳಂತೆ ಯಾವೊಬ್ಬ ವ್ಯಕ್ತಿಯಿಂದ ಸ್ಥಾಪಿತವಾದುದಲ್ಲ. ಇದು ಬಹು ಪುರಾತ ನದ್ದು. ಕಾಲಕಾಲಕ್ಕೂ ಅನೇಕ ಮಹಾಪುರುಷರ ಕೃಷಿಗೆ ಒಳಪ ಟ್ಟಿದ್ದು. ಆದ್ದರಿಂದ ಈ ವಿಚಾರದಲ್ಲಿ— "ಬೌದ್ಧ, ಕ್ರಿಶ್ಚನ್, ಮುಸ ಲ್ಮಾನ್ ಧರ್ಮಗಳಂತೆ ವೀರಶೈವ ಧರ್ಮವು ಒಬ್ಬಾನೊಬ್ಬ ವ್ಯಕ್ತಿ ಅಥವಾ ವ್ಯಕ್ತಿಗಳಿಂದ ಸ್ಥಾಪಿತವಾದುದಲ್ಲ. ಆದಕ್ಕೆ ಒಂದು ಪುರಾ ತನ ಪರಂಪರೆ ಇದೆ." ಎಂದು ಹೇಳುವ ಶ್ರೀಮಾನ್ ರಾ. ಬ. ಹಳ ಕಟ್ಟಿಯವರ ಅಭಿಪ್ರಾಯದೊಡನೆ ನಾವೂ ಏಕೀಕರಿಸುತ್ತೇವೆ.

## ಹೆಸರು ಎಂದಿನದು?

ವಚನಕಾರರಲ್ಲಿ "ವೀರಶೈವ" ಶಬ್ದವನ್ನು ಹೆಚ್ಚಾಗಿ ಬಳಸಿದವ ರಲ್ಲಿ ಚನ್ನಬಸವೇಶ್ವರನೇ ಸದ್ಯಕ್ಕೆ ಮುಂದಾಳು. ಈಗ ಸಿಕ್ಕಿರುವ ಈತನ ವಚನಗಳಲ್ಲಿ ವೀರಶೈವ ಶಬ್ದವು ಹನ್ನೊಂದುಸಲ ಬರುತ್ತದೆ. ಅಲ್ಲದೆ ಈ ಮತಕ್ಕೆ ಶಿವಾಚಾರ, ಶಿವಭಕ್ತ, ಶಿವಜನ್ಮ, ಶಿವಜಾತಿ, ಶಿವಕುಲ, ಶಿವಧರ್ಮ, ಲಿಂಗವಂತ, ಮುಂತಾದ ಪರ್ಯಾಯ ಹೆಸ ರುಗಳನ್ನೂ ಹೆಸರಿಸಿದ್ದಾನೆ. ಆದರೆ ಇವೆಲ್ಲ ವಿರಳವಾಗಿವೆ.

ಈಗ್ಗೂ ಕೆಲವೆಡೆಗಳಲ್ಲಿ ವೀರಶೈವರಿಗೆ ಶಿವಾಚಾರದವರೆಂದೆ ಹೆಚ್ಚು ವಾಡಿಕೆಯಾಗಿದೆ. ಇದೇ ತೆರನಾಗಿ ಆಗ್ಗೂ ಸಹ ಇದ್ದಿರಬೇಕು. ವೀರ ಶೈವ ಶಬ್ದವು ಹೆಚ್ಚು ವಾಡಿಕೆಯಾಗಿಲ್ಲದ ಮಾತ್ರದಿಂದ ಆಗ ಇದ್ದೇ ಇಲ್ಲೆಂದು ಹೇಳಲು ಸಾಧ್ಯವಿಲ್ಲ. ಒಟ್ಟಿನಲ್ಲಿ ಈ ವಿಷಯದಲ್ಲಿ ಇನ್ನೂ ಹೆಚ್ಚಿನ ಸಂಶೋಧಗಳು ಸಾಗಬೇಕಾಗಿವೆ. ಈಗಳೆ ಈ ವಿಷಯದಲ್ಲಿ 'ಇದಮಿತ್ಥಂ' ಎಂದು ನಿರ್ಧರಿಸಿ ಹೇಳಲು ಸಾಧ್ಯವಿಲ್ಲದಾಗಿದೆ.

## ವಚನಗಳು ಮುನ್ನಿನವು.

ವಚನವಾಙ್ಮಯದ ಉಗಮವು ೧೨ನೆಯ ಶತಮಾನವೆಂದು ಕೆಲವರ ಅಭಿಪ್ರಾಯವಿದೆ. ಶಿವಶರಣರ ವಚನಗಳ ಅಭ್ಯಾಸ ಮಾಡಿದಲ್ಲಿ ಆ ಅಭಿಪ್ರಾಯವು ನಿಲ್ಲುವದಿಲ್ಲ. ವಚನ ರಚನೆಯು ಬಹು ಪೂರ್ವದಿಂದಲೂ ಬಂದಂತೆ ವ್ಯಕ್ತವಾಗುತ್ತದೆ; ಚನ್ನಬಸವಣ್ಣನ ಈ ವಚನಗಳಲ್ಲಿಯೂ ಇದೇ ಅಭಿಪ್ರಾಯ ಅಭಿವ್ಯಕ್ತವಾಗುತ್ತದೆ.

"ಮುನ್ನಿನ ಆದ್ಯರ ವಚನವ ನೋಡಿರೋ! ಲಿಂಗದ ನಡೆ, ಲಿಂಗದ ನುಡಿ, ಜಂಗಮದ ನಡೆ, ಜಂಗಮದ ನುಡಿ, ಪ್ರಸಾದದ ನಡೆ, ಪ್ರಸಾದದ ನುಡಿ ಇದಕ್ಕೆ ಶೃತಿಯ ತೋರಿ ನುಡಿವರು. ಅದಲ್ಲದೆ ದೃಷ್ಟವ ತೋರಿ ನಡೆವರು. ವೇದವೆಂಬುದು ಓದಿ ಹೇಳುವ ಮಾತು. ಶೃತಿ ಪುರಾಣಾಗಮಂಗಳಾರಿಂದೊಡಾದವು? ಇದ ಬಲ್ಲೆವೆಂದು ನಮ್ಮ ಪುರಾತರ ವಚನಕ್ಕೆ ಸರಿಯಾಗಿ ಅನುಭಾವವ ಮಾಡುವೆವೆಂಬ ಕರ್ಮಕಾಂಡಿಗಳಿಗೆ ನಾನೇನೆಂಬೆನಯ್ಯ?......"

"ಹೊರವೇಷದಲಿ ವಿಭೂತಿ ರುದ್ರಾಕ್ಷಿಯ ನಳವಡಿಸಿಕೊಂಡು ವೇದ ಶಾಸ್ತ್ರ ಪುರಾಣಾಗಮ ಮೊದಲಾಗಿ ಪುರಾತರ ವಚನ ಬಹು ಪಾಠಕರು ಎನಿಸಿಕೊಂಡು......"

ಈ ವಚನಗಳಲ್ಲಿ ಬರುವ 'ಮುನ್ನಿನ ಆದ್ಯರ ವಚನ' 'ಪುರಾತರ ವಚನ' ಎಂಬ ಪದಗಳನ್ನು ನಿರೀಕ್ಷಿಸಬೇಕು. ಇವುಗಳಿಂದ ವಚನಗಳ ಉಗಮವು ಬಹು ಪುರಾತನದ್ದೆಂದು ತೋರುತ್ತದೆ. ಈಗ ಸಿಕ್ಕಿರುವ ವಚನಗಳಲ್ಲಿ ೧೧ನೇ ಶತಮಾನದ ದೇವರದಾಸಿಮಯ್ಯನ ವಚನಗಳೇ ಮುಂದಿನವು. ಅವಕ್ಕೆ ಮುಂದಿನ ವಚನಗಳು ಸಿಕ್ಕದಿರುವುದು ವೀರಶೈವರ ದುರಾದೃಷ್ಟ.

## ಈ ಲಿಂಗೈಕ್ಯರು ಮುನ್ನಿನವರಲ್ಲವೆ?

"......ಅನರ್ಪಿತವನುಂಡು ಅಚ್ಚಪ್ರಸಾದಿಗಳೆನಿಸುವರ ನೋಡಿ, ಮಹಾಲಿಂಗೈಕ್ಯರುಗಳು ಮೆಚ್ಚುವರೊ......"(ಪು–೫೮, ವ-೫)

"......ಅಪ್ಪಿನ ಘಟವ ಹೊತ್ತುಕೊಂಡು ಸುಳಿವ ಜಗದೊಳಗೆ ಅರೆಬಿರಿದು ನಿರಾಳದಲ್ಲಿ ನೆನೆವ ಭೇದವನಾರು ಬಲ್ಲರೋ? ನಮ್ಮ ಕೂ. ಚ. ಸಂ. ನಲ್ಲಿ ಲಿಂಗೈಕ್ಯರನು ಲಿಂಗೈಕ್ಯರೇ ಬಲ್ಲರು."

(ಪು. ೮೬, ವ-೭)

ಈ ವಚನಗಳಲ್ಲಿ ತೋರುವ ಲಿಂಗೈಕ್ಯರು ಯಾರೇ ಇರಲಿ ಅವರು ಮುನ್ನಿನವರು; ವೀರಶೈವರು. ೧೨ನೆಯ ಶತಮಾನದ ಹಿಂದೆ ವೀರ ಶೈವರೆ ಇರಲಿಲ್ಲೆಂದು ಹೇಳುವರು ಚನ್ನಬಸವಣ್ಣನು ಹೇಳಿರುವ ಲಿಂಗೈಕ್ಯರು - ಮಹಾಲಿಂಗೈಕ್ಯರು, ಎಂಬೀ ಪ್ರಯೋಗಗಳನ್ನು ಪರಿಶೀಲಿಸಬೇಕು.

—ಮುಂಬಪ್ಪದು.

---

## ಧರ್ಮದ ಕ್ರಿಯಾಚರಣೆಯು ಮಹತ್ವ.

( ಲೇಖಕ:—ಶ್ರೀಯುತ ವ್ಹಿ. ಬಿ. ಬ್ಯಾಹಟ್ಟಿ-ಬಿ. ಎ. ಬಿ. ಟಿ. ಬಾಗಲಕೋಟ. )

ವೇದಾಂತಿಗಳು ತತ್ ತ್ವಂ ಅಸಿ ಮಹಾವಾಕ್ಯಕ್ಕೆ ಅರ್ಥವಾದ ಶಿವಜೀವೈಕ್ಯ ಜ್ಞಾನವೇ ಮುಕ್ತಿಗೆ ಮಾರ್ಗವೆನ್ನುವರು. ಆದರೆ ಶಿವ ಶರಣರು ಮಾತ್ರ ಇಂಥ ಜ್ಞಾನವು ಮುಕ್ತಿಗೆ ಅವಶ್ಯವಿದ್ದಾಗ್ಯೂ ಜ್ಞಾನದ ಪರಿಣಾಮವಾದ ಶಿವಾನುಭವವು ಸಾಕ್ಷಾತ್ಕಾರದಂತೆ ಮಿಂಚಿ ಮರೆಯಾಗದೆ ಅಂಗಕ್ಕೆ ಅಳವಟ್ಟು ವ್ಯಸಿರಿಯಾಗಲಿಕ್ಕೆ—ಶೀಲವಾಗಲಿಕ್ಕೆ, ಕ್ರಿಯಾಚರಣೆಯ ಆಶ್ರಯವು ಅವಶ್ಯವಾಗಿ ಬೇಕೆನ್ನುವರು. ಅಂಗದ ಅಹಂಕಾರ ವಳಿದು ಲಿಂಗ ಸಾಮರಸ್ಯದೊರಕೊಳ್ಳಲು ಕ್ರಿಯಾಚರಣೆಯು ಬಹು ಸಹಕಾರಿಯಾದುದು. ಇದಕ್ಕೂ ಮುಂದೆ ಹೋಗಿ ಶಿವಶರಣರು ಅನ್ನುವದೇನಂದರೆ ನಿಷ್ಕಾಮ ಕ್ರಿಯಾಚರಣೆಯು ಜ್ಞಾನದ-ಮುಕ್ತಿಯ ಆಶ್ರಯವಿರುವದಲ್ಲದೆ. ಕ್ರಿಯಾಚರಣೆಯಲ್ಲಿಯೇ ಮುಕ್ತಿಯ ಪರಮಾನಂದ ಸಂಭ್ರಮ ಸಂಪತ್ತುಂಟು. ಕ್ರಿಯಾಚರಣೆ ಅಂದರೇನೇ ಮುಕ್ತಿಯ ಸುಖ,

ಮುಕ್ತಿಯ ಸುಖವೆಂದರೆ ಕ್ರಿಯಾಚರಣೆಯೇ. ಕ್ರಿಯಾಚರಣೆಯ ಸಂಭ್ರಮದ ಸಂಪತ್ತನ್ನು ಬಿಟ್ಟು ಮುಕ್ತಿಯ ಸುಖ ಬೇರಿಲ್ಲ. ಕ್ರಿಯಾಚರಣೆಯ ಕ್ರಮವೆಂದರೆ ಲಿಂಗಾಂಗ ಸಾಮರಸ್ಯದ ಜ್ಞಾನವನ್ನು—ಶಿವಜೀವೈಕ್ಯದ ಜ್ಞಾನವನ್ನು ಶಿವಾನಂದದ ಅನುಭವವನ್ನು—"ತತ್ ತ್ವಂ ಅಸಿ" ಮಹಾವಾಕ್ಯಾರ್ಥವನ್ನು ಕೇವಲ ವಿಚಾರದಿಂದ, ವಿವೇಕದಿಂದ ತರ್ಕದಿಂದ ಬುದ್ಧಿಗೆ ಮಾತ್ರ ಸಮ್ಯಕವಾಗುವಂತೆ ಹೇಳದೆ ಪಂಚ ಆಚಾರ ಪಾಲನೆ ಅಷ್ಟಾವರಣ ಸಹಿತ ಕ್ರಿಯಾಚರಣೆ ಪಂಚಾಕ್ಷರಿ ಮಂತ್ರ ಸಹಿತವಾದ ಪೂಜೆ ಪಾದೋದಕ ಸ್ವೀಕಾರ (ಜ್ಞಾನದಿಂದ ಸ್ವೀಕರಿಸಿದ್ದು ಜ್ಞಾನೋದಕವಾಗುವದು) ಷಟ್‌ಸ್ಥಲ ಆರೋಹಣದ ಅನುಭವ ಇವುಗಳನ್ನು ಮಾಡಿ ಚಿಲ್ಲಿಂಗ - ಜ್ಯೋತಿರ್ಲಿಂಗದ ಪ್ರಕಟಿಕೆಗೆ ಶಿವಾನಂದದ ಆವಿರ್ಭಾವಕ್ಕೆ ಆಣವಮಲ ಮಾಯಾಮಲ ಕಾರ್ಮಿಕಮಲ ಪರಿಹಾರದ್ವಾರಾ ತನು ಮನ ಭಾವಗಳನ್ನು ಪ್ರಸನ್ನಗೊಳಿಸುವದಕ್ಕೆ ಸಾಕಷ್ಟು ವಿಚಾರದಿಂದ ಯೋಜಿಸಿದ ಭಕ್ತಿ ಧ್ಯಾನ ಕ್ರಿಯಾ ಮಾರ್ಗವು. ಧರ್ಮದ ಕ್ರಿಯಾಚರಣೆಯನ್ನು ಇನ್ನೊಂದು ವಿಧವಾಗಿ ಹೇಳುವದಾದರೆ ಒಕ್ಕಲಿಗನು ತನ್ನ ಭೂಮಿಯನ್ನು ಬೀಜದ ಬೆಳೆಗೆ ಹಸನಮಾಡಿ ಹದಗೊಳಿಸುವಂತೆ ಭಕ್ತನು ತನ್ನ ತನು ಮನ ಭಾವಗಳನ್ನು ನಿರ್ಮಲಗೊಳಿಸಿ ಜ್ಞಾನೋದಯಕ್ಕೆ—ಶಿವಾನುಭವಕ್ಕೆ, ಶುದ್ಧ ಆನಂದದ ಆವಿರ್ಭಾವಕ್ಕೆ ಹದಗೊಳಿಸುವ ನಿತ್ಯ ಆಚರಿಸುವ ಕ್ರಿಯೆಯ ಕ್ರಮವು, ರೀತಿಯು—ವಿಧಾನವು. ಅದಕ್ಕೋಸ್ಕರವೇ ಲಿಂಗಾರ್ಚನೆಯ, ಆರಂಭದ, ಸಂಕಲ್ಪದಲ್ಲಿ "ಇಷ್ಟ-ಪ್ರಾಣ-ಭಾವಲಿಂಗ ಪೂಜಯಾ-ತನುತ್ರಯ ಶುದ್ಧಿದ್ವಾರಾ ಗುರು-ಲಿಂಗ ಜಂಗಮ ಪ್ರಸಾದ ಸಿದ್ಧ್ಯರ್ಥಂ ಅಹಂ ಯಥಾಶಕ್ತಿ ಶಿವಲಿಂಗ ಪೂಜಾಂ ಕರಿಷ್ಯೇ—" ಎಂಬ ವಿಧಾನವುಂಟು. ಹೀಗೆ ಇಷ್ಟ ಪ್ರಾಣ ಭಾವಲಿಂಗ ಪೂಜೆ—ಅನುಸಂಧಾನದಿಂದ ಸ್ಥೂಲ, ಸೂಕ್ಷ್ಮ, ಕಾರಣ ತನುಗಳ ಶುದ್ಧಿಯುಂಟಾಗಿ ಮಾಂಸಮಯ ಶರೀರವಳಿದು ಮಂತ್ರಮಯ ಶರೀರವಾಗಿ ಕಾಯಗುಣವಳಿದುದೇ ಗುರುವು. ಜೀವಗುಣವಳಿದುದೇ ಲಿಂಗ. ಪ್ರಾಣಗುಣವಳಿದುದೇ ಜಂಗಮವು. ಹೀಗೆ ಉತ್ತರೋತ್ತರ ಅಂತರ್ಯವಾದ ಸ್ಥಿರವಾದ ಗುರುಲಿಂಗ ಜಂಗಮ ಸ್ವರೂಪದ ಶಿವಾನುಭವವು ಅಂಗಕ್ಕೆ ಅಳವಡುವುದು. ತನು ಮಧ್ಯದಲ್ಲಿ ಗುಹೇಶ್ವರನೆಂಬ ಚಿಲ್ಲಿಂಗ-ಜ್ಯೋತಿರ್ಲಿಂಗದ ಸೋಂಕಿನಿಂದ ತನು ಮನ ಭಾವಗಳು ಕ್ರಮ

ವಾಗಿ ಮಹಾತನು, ಘನಮನ, ನಿರ್ಭಾವಗಳಾಗಿ ಒಬ್ಬ ಅಂಗನೇ ಕ್ರಮೇಣ ಅನುಸಂಧಾನವು ಬಲಿತಂತೆ-ಆನಂದವು ಹೆಚ್ಚು ಸ್ಫುಟವಾದಂತೆ ಗುರು ಲಿಂಗ ಜಂಗಮ ಸ್ವರೂಪಾನಂದಮಯನಾಗುವನು. ಹೀಗೆ ಗುರು ಲಿಂಗ ಜಂಗಮ ತತ್ವವು ತನು ಮನ ಭಾವಗಳನ್ನು ಬಯಲುಗೊಳಿಸಿದ ಶುದ್ಧವಾದ ಪಾರಮಾರ್ಥಿಕ ಶಿವಾನುಭವದ ಆನಂದವು. ಅಂದ ಮೇಲೆ ಇಷ್ಟಲಿಂಗ ಅನುಸಂಧಾನ ಮಾಡುವಾತನು ಭಕ್ತನು. ಪ್ರಾಣಲಿಂಗಾನು ಸಂಧಾನ ಮಾಡುವಾತನು ಗುರುವು. ಭಾವಲಿಂಗಾನು ಸಂಧಾನಗೈಯುವವನು ಜಂಗಮನು. ಈ ಪ್ರಕಾರ ಇಷ್ಟ, ಪ್ರಾಣ, ಭಾವಲಿಂಗ ಅನುಸಂಧಾನದಿಂದ ಯಾವನೇ ಆಗಲಿ ಕ್ರಮದಿಂದ ಭಕ್ತ ಗುರು ಜಂಗಮಸ್ವರೂಪವನ್ನು ಸ್ಥಿತಿಯನ್ನು-ಅನುಭವವನ್ನು ಪಡೆಯುವನು. ಆದರೆ ಆ ಸ್ಥಿತಿಯನ್ನು ಪಡೆಯಲಿಕ್ಕೆ ಅದನ್ನು ಅನುಭವಿಸಿದಂಥ ಶಿವಶರಣರ ಶಿವಯೋಗಿಗಳ—ಗುರುಜಂಗಮರ, ಸಹಾಯವು ಬೇಕು. ಅದ್ದರಿಂದ ಗುರು ಜಂಗಮರು ಅಚ್ಚ ಶಿವಾನುಭವಿಗಳಿರುವುದು ಅವಶ್ಯ. ಇಷ್ಟೇ ಅಲ್ಲ ಯೋಗ್ಯತೆ ಪಡೆದ ಪ್ರಾಣ ಭಾವಲಿಂಗಾನು ಸಂಧಾನಿಗಳಾದ ಗುರು ಜಂಗಮರು ತಾವು ಅನುಭವಿಸುತ್ತಿರುವ ಶಿವಾನಂದವನ್ನು ಪ್ರಾಣ ಭಾವಲಿಂಗಗಳ ಸಕೀಲವನ್ನು ಉತ್ಕಟೇಚ್ಛೆಯುಳ್ಳಂಥ ಇಷ್ಟ ಲಿಂಗಾನು ಸಂಧಾನಿಗಳಿಗೆ ನಿರ್ವಂಚನೆಯಿಂದ, ಅನುಗ್ರಹಪೂರ್ವಕ ತಿಳಿಸಿಕೊಡುವ ಶಕ್ತಿಯುಳ್ಳವರು, ಅನುಭವಿಗಳು ಇರುವದು ಅತ್ಯಾವಶ್ಯವಿದ್ದು ಅವರು ವರ್ಗಗಳ ತಾರತಮ್ಯವನ್ನು ಎಣಿಸದೆ ತಮ್ಮ ಅನುಭವವನ್ನು ಬಚ್ಚಿಡದೆ ಅನುಗ್ರಹಿಸಬೇಕು-ಬೀರಬೇಕು—ತೂರಬೇಕು. ಅದರಿಂದ ಶಿವಾನುಭವಿಗಳ ಸಂಖ್ಯೆಬೆಳೆದು ಸಮಾಜದ ಜ್ಞಾನಬಲವು ಹೆಚ್ಚುವದು. ಶಿವಾನುಭವದ ಒಲವು ಅಂತರ್ಮುಖವಾಗುವ ಒಲವು ಹಂಬಲವು ವಿಶಿಷ್ಟ ವರ್ಗದ ವ್ಯಕ್ತಿಗಳಿಗೇ ಹುಟ್ಟುತ್ತದೆ, ಮತ್ತೊಂದು ವರ್ಗದ ವ್ಯಕ್ತಿಗಳಲ್ಲಿ ಹುಟ್ಟಲಾರದೆಂದು ಯಾರಿಗೂ ಹೇಳಲು ಸಾಧ್ಯವಿಲ್ಲ. ಶಿವಾನುಭವಕ್ಕೆ ಹಂಬಲಿಸಿದ ವ್ಯಕ್ತಿಗಳು, ಯಾವ ಬೇರಾದ ವರ್ಗದಲ್ಲಿ, ಕಾಯಕದವರಲ್ಲಿ ವರ್ಣದವರಲ್ಲಿ ಕಂಡು ಬಂದ ಉದಾಹರಣೆಗಳು ಅನೇಕುಂಟು. ಭಿನ್ನ ಭಿನ್ನ ಕಾಯಕದ ಶಿವಶರಣರ—ಹರಿದಾಸರ ಹೆಸರುಗಳನ್ನು ಉದಹರಿಸಬಹುದು. ಅದ್ದರಿಂದ ಈಗಿದ್ದಂತೆ ಕೇವಲ ಮೂಢ ಭಕ್ತಿಯನ್ನೇ ಬೆಳೆಸುತ್ತ ಹೋಗದೆ ಶಿವಾನುಭವವನ್ನು

ಪ್ರಾಣ—ಭಾವ ಲಿಂಗಾನುಷ್ಠಾನವನ್ನು ಗೌಪ್ಯವಾಗಿ ಬಚ್ಚಿಡದೆ ಪಾರ
ಮಾರ್ಥದ ಹಸಿವೆಯಿಂದ ಹಂಬಲಿಸುವಂಥವರಿಗೆಲ್ಲ ಬಿಚ್ಚು ಹೃದಯ
ದಿಂದ ತಿಳಿಸಿಕೊಡುವ ಸಮಾಜ ಸೇವೆಗೈಯ್ದರೆ ತಮ್ಮ ಶಿವಾನುಭ
ವವೂ ಉಕ್ಕೇರುತ್ತ ವೃದ್ಧಿಯಾಗುವದು. ಮತ್ತು ಸಮಾಜದ ಜನರು
ಜ್ಞಾನಯುಕ್ತ ಕ್ರಿಯೆಯನ್ನು ಆಚರಿಸಿ ಶಿವಜ್ಞಾನಿಗಳಾಗುವರು. ಸಮಾ
ಜಕ್ಕೆ ಇದಕ್ಕಿಂತಲೂ ಹೆಚ್ಚಿನ ಲಾಭವಾವುದು? ವಿಚಾರ ಪ್ರಧಾನ
ಬುದ್ಧಿಪ್ರಧಾನವಾದ ಈ ಇಪ್ಪತ್ತನೆಯ ಶತಮಾನದಲ್ಲಿ ಕೇವಲ ಶ್ರದ್ಧೆ
ಮಾತ್ರದಿಂದ ಆಚರಿಸುವ ಇಷ್ಟಲಿಂಗ ಪೂಜೆಯಿಂದ ಆರಂಭಿಸಿ ಅದರ
ಲ್ಲಿಯೇ ಮುಗಿಸುವ ಅಂಧಭಕ್ತಿಯು ಧರ್ಮವನ್ನು ಆಚರಿಸಲು ಮಾತ್ರ
ಹೇಳುತ್ತ ನಡೆದರೆ ಕೇವಲ ಪುರಾಣ ಕಥೆಗಳನ್ನು ಮಾತ್ರ ಕೀರ್ತನ
ದ್ವಾರಾ ಹೇಳಿದರೆ ಹೆಬ್ಬಟ್ಟಿನ ಗುರ್ತು ಮಾಡುವವರು ಮಾತ್ರ ಅಡ್ಡ
ಉದ್ದ ಬಿದ್ದು ಜಗಲಿಯ ಮೇಲೆಯೋ ನೆಲುವಿಗೋ ಲಿಂಗವನ್ನು ಇಟ್ಟು
ತಮ್ಮ ಕಾಯಕದಲ್ಲಿ ತೊಡಗುವರು. ಇಂಗ್ಲೀಷ ವಿದ್ಯಾಭ್ಯಾಸಿಗಳು ಗುರು
ಗಳ ಸಮೀಪ ಸಹ ಹಾಯದೆ ಟ್ರಂಕುಗಳಲ್ಲಿ ತಮ್ಮ ಗುಂಡುಗಡಿಗೆಗ
ಳನ್ನು ಇಟ್ಟು ತಮ್ಮ ವಿದ್ಯಾಭ್ಯಾಸದಲ್ಲಿ ತೊಡಗುವರು. ಇದರಿಂದ
ಧರ್ಮದ ಕ್ರಿಯಾಚರಣೆಯು ಬುದ್ಧಿಗೆ ಪ್ರಾಬಲ್ಯವುಳ್ಳ ಈ ಕಾಲದಲ್ಲಿ
ಬಹುಜನ ಸಮಾಜಕ್ಕೆ ಒಗ್ಗದೆ ಅವರನ್ನು ಆಕರ್ಷಿಸದೆ ಅವರ ಮೇಲೆ
ಯಾವದೊಂದೂ ಒಳ್ಳೇ ಪರಿಣಾಮವನ್ನುಂಟುಮಾಡದೆ ಅವರ ಅನಾದ
ರಕ್ಕೆ ತಿರಸ್ಕಾರಕ್ಕೆ ಕಾರಣವಾಗುವದು. ಹೀಗಾಗಲು ಈಗಿನ ತರುಣರು
ವಿದ್ಯಾವಂತರು ಬಲು ಅನಾಚಾರಿಗಳು ಅಧರ್ಮಿಗಳು ಎಂದು ಹಳಿ
ಯುತ್ತ ಕೂಡ್ರಬೇಕಾಗುವದು.

ತದ್ವಿರುದ್ಧವಾಗಿ ಪ್ರಾಣ ಭಾವಲಿಂಗಗಳ ಸ್ವರೂಪವನ್ನೂ ಅವುಗಳ
ವಿಚಾರವನ್ನೂ ಅನುಸಂಧಾನವನ್ನೂ ಅದರಿಂದುಂಟಾಗುವ
ಘನಮನ, ನಿರ್ಭಾವಗಳ ಆನಂದಮಯ ಸ್ಥಿತಿಯನ್ನೂ, ಶುದ್ಧ ಸ್ವತಂತ್ರ
ಶಾಶ್ವತವಾದ ಶಿವಾನುಭವದ ಅಭಿರುಚಿಯನ್ನೂ ಉಂಟುಮಾಡಲಿಕ್ಕೆ
ವಚನ ಶಾಸ್ತ್ರ ಮತ್ತು ಅದರಲ್ಲಿರುವ ನೂರೊಂದು ಸ್ಥಲಗಳ ವಿಚಾರ
ವನ್ನು ತಿಳಿಸಿಕೊಡಲು ಪ್ರಯತ್ನ ಮಾಡುವದರಿಂದ ಧರ್ಮದ ಇಂಗಿತ,
ಮರ್ಮ-ಮಹತ್ವ ನಿರತಿಶಯ ಲಾಭಗಳು ತಿಳಿದು ಧರ್ಮದ ಕ್ರಿಯಾಚ
ರಣೆಯನ್ನು ತಿಳುವಳಿಕೆಯಿಂದ ನಂಬಿ ಆಚರಿಸಿ ಆನಂದ ಪಡೆದು ಶಿವ

ಜ್ಞಾನಿಗಳಾಗುವ ಸಂಭವ ಹೆಚ್ಚುಂಟು. ಕೆಲವು ವ್ಯಕ್ತಿಗಳು ತಪ್ಪಿ ನಡೆದರೆ ಅದರಿಂದೇನೂ ಘಾತವಾಗಲಾರದು. ಸ್ತ್ರೀ ಶಿಕ್ಷಣ ಕೊಡುವದರಿಂದ ಕೆಲವರು ಅದರ ದುರುಪಯೋಗ ಮಾಡಿಕೊಳ್ಳಬಹುದು. ಆದರೆ ಬಹುಜನ ಸ್ತ್ರೀಯರು ವಿದ್ಯಾವಂತರಾಗಿ ಉತ್ತಮ ಗೃಹಿಣಿಗಳಾದರೆ ಸಮಾಜಕ್ಕೆ ಎಷ್ಟು ಲಾಭವಾಗಬಹುದು!! ಅದರಂತೆ ಸಮಾಜದ ಬಹುಜನರು ನಿಜವಾದ ಧರ್ಮದ ಜ್ಞಾನವನ್ನು ಪಡೆದು ಕ್ರಿಯಾಚರಣೆಯನ್ನು ಮಾಡುವ ಅಭಿರುಚಿಯುಳ್ಳವರಾದರೆ ಸಮಾಜದ ಉದ್ಧಾರವಾಗುವದಿಲ್ಲವೇ! ಆದ್ದರಿಂದ ಶಿವಾನುಭವಿಗಳು-ಶಿವಶರಣರು-ಪ್ರಾಣ ಭಾವಲಿಂಗಾನು ಸಂಧಾನಿಗಳು ನಿಸ್ವಾರ್ಥಬುದ್ಧಿಯಿಂದ ವರ್ಗಗಳಿಗೆ ಮಹತ್ವಕೊಡದೆ ಅವು ಕಾಲಮಾನಕ್ಕೆ ಸರಿಯಾಗಿ ಕಲ್ಪಿಸಲ್ಪಟ್ಟವುಗಳೆಂದು ತಿಳಿದು ಧರ್ಮದ ಜಿಜ್ಞಾಸೆಯುಳ್ಳವರಿಗೆಲ್ಲ, ಪಾರಮಾರ್ಥಿಕ ಸಾಧನೆಮಾಡಬೇಕೆಂಬ ಕುತೂಹಲವುಳ್ಳಂಥವರಿಗೆಲ್ಲ ಧರ್ಮದ ತಿರುಳನ್ನು ಅದರಿಂದುಂಟಾಗುವ ನಿರತಿಶಯ ಆನಂದ ಪ್ರಾಪ್ತಿಯನ್ನು ತಿಳಿಸಿ ಧರ್ಮದ ಕ್ರಿಯೆಯನ್ನು ಆಚರಿಸಲು ಅಭಿರುಚಿ ಹುಟ್ಟಿಸಬೇಕು. ಹೀಗೆ ಕಾಲಕ್ಕೆ ಸರಿಯಾಗಿ ಧರ್ಮದ ಕ್ರಿಯೆಯು ಹಿನ್ನೆಲೆಯಾದ ಜ್ಞಾನದ ಬೆಂಬಲವನ್ನು ತೆಗೆದುಕೊಳ್ಳದ ಹೊರತು ಧರ್ಮವು ಗೊಡ್ಡು ವೇದಾಂತ ಮಡ್ಡು ಸಿದ್ಧಾಂತವೆನಿಸದಿರಲಾರದು. ಗುರು ಜಂಗಮರು ಸ್ವಾರ್ಥದ ಮೂಲಕ ಹಳೇ ವಿಚಾರಗಳಿಗೆ ಅಂಟಿಕೊಂಡು, ಸಮಾಜದ ಸೇವೆ ಎಂದು ಧರ್ಮದ ತತ್ವಗಳನ್ನು ತಿಳಿಸಿಕೊಡುವ ಕಾರ್ಯವನ್ನು ಕೈಕೊಳ್ಳಲು ಮುಂದುವರಿಯಲಿಕ್ಕಿಲ್ಲ. ಆದ್ದರಿಂದ ಶಿವಾನುಭವವುಳ್ಳ ಭಕ್ತರೇ ಸಮಾಜದ ಹಿತದೃಷ್ಟಿಯಿಂದ ಇಂಥ ಧರ್ಮದ ಕಾರ್ಯವನ್ನು ಶಿವಾನುಭವ ಸಂಘಗಳನ್ನು ಊರೂರಿಗೆ ಸ್ಥಾಪಿಸಿ ಕೈಕೊಳ್ಳಲು ಮುಂದೆ ಬಂದು ಸಮಾಜದ ಅಭಿನಂದನೆಗಳಿಗೆ ಪಾತ್ರರಾಗಿ ಧನ್ಯರಾಗಬೇಕು. ಈ ವಿಜ್ಞಾನಯುಗವಾದ ಇಪ್ಪತ್ತನೆಯ ಶತಮಾನದಲ್ಲಿ, ಜ್ಞಾನಮಾರ್ಗವು ಕಠಿಣ. ಆದ್ದರಿಂದ ಯಾಕೆ ಮಾಡಬೇಕೆಂಬದನ್ನು ತಿಳಿಯದೆ ಧರ್ಮದ ಕ್ರಿಯಾಚರಣೆಯನ್ನು ಮಾಡುತ್ತ ಹೋಗಿರೆಂದು ಮೂಢ ಭಕ್ತಿಯನ್ನು ಕಲಿಸಿದರೆ ಯಾವ ಫಲವೂ ದೊರೆಯುವದಿಲ್ಲ.

---

# ಸುಖದ ಬೀಡು.

(ಬರೆಹಗಾರತಿ—ಶ್ರೀಮತಿ ಸಿದ್ಧಲಿಂಗವ್ವ ಅಡಿಗಿ ಮು. ಗೋಕಾಕ.)

---

ಮನುಷ್ಯನು ಸುಖದಲ್ಲಿರುವನೋ ದುಃಖದಲ್ಲಿರುವನೋ ಎಂಬದು ಆತನ ಮೋರೆಯ ಮೇಲಿಂದಲೇ ಗೊತ್ತಾಗುವದು. ಮೋರೆಯು ಮನೋವಿಕಾರಗಳನ್ನು ಹೊರಗೆಡಹುವ ಆದರ್ಶ. ಅದ್ದರಿಂದ ಅದನ್ನು ಕಂಡ ಬಳಿಕ ಪ್ರತ್ಯಕ್ಷ ಹೇಳಕೇಳುವ ಅವಶ್ಯಕತೆಯಿರುವದಿಲ್ಲ. ಆದರೂ ಕೆಲವರು ಅಭ್ಯಾಸಬಲದಿಂದ ತಮ್ಮ ಭಾವಗಳನ್ನು ಹೊರಗೆ ತೋರಗೊಡದಷ್ಟು ಮಾನಸಿಕ ಸಾಮರ್ಥ್ಯವನ್ನು ಪಡೆದಿರುವರು. ಅಂಥವರು ಸುಖದಲ್ಲಿರುವರೋ ದುಃಖದಲ್ಲಿರುವರೋ ಎಂಬದನ್ನು ಗೊತ್ತುಪಡಿಸಬೇಕಾದರೆ ಈ ಮುಖಮುದ್ರೆಯು ಸಹಾಯಕಾರಿಯಾಗದು. ಅಂಥವರ ಮುಖದ ಮೇಲಿನ ಪ್ರಸನ್ನತೆಯು ನಿಜವಾದ ಪ್ರಸನ್ನತೆಯಲ್ಲ. ಮನುಷ್ಯನು ಸ್ವಭಾವತಃ ಪ್ರಸನ್ನನಿರಬಯಸುವನು. ಈ ಪ್ರಸನ್ನತೆಯೇ ಸುಖದ ಬಾಹ್ಯ ಲಕ್ಷಣವು. ಆದರೆ ನಿಜವಾದ ಸುಖವು ಯಾವದೆಂಬದರ ಅರಿವು ಆತನಿಗಿರದ ಮೂಲಕ ಸುಖಕ್ಕೆ ವಿರುದ್ಧವಿರುವ ಸಂಗತಿಗಳನ್ನು ಬಯಸಿ ದುಃಖಕ್ಕೆ ಆಸರವನ್ನೀಯುವನು.

ವಿಶಿಷ್ಟ ವಸ್ತುವಿನ ಪ್ರಾಪ್ತಿಯಿಂದ ವಿಶಿಷ್ಟೇಂದ್ರಿಯವು ಕೆಲವು ಹೊತ್ತು ಸುಖಪಡುವದು; ಆ ವಸ್ತುವು ದೊರೆಯದಿದ್ದರೆ ಇಂದ್ರಿಯವು ದುಃಖಗೊಳ್ಳುವದು. ಈ ಇಂದ್ರಿಯವನ್ನು ತುಷ್ಟಿಗೊಳಿಸುವ ವಸ್ತುಪ್ರಾಪ್ತಿಯೇ ಸುಖವೆಂದೂ, ಅದು ದೊರೆಯದಿದ್ದರೆ ಇಲ್ಲವೆ ದೊರೆತು ನಷ್ಟವಾದರೆ ದುಃಖವೆಂದೂ ಮಾನವನು ತಿಳಕೊಳ್ಳುವನು. ಅಲ್ಪಕಾಲ ಸುಖಗೊಡುವ ವಸ್ತುವಾಗಲಿ, ಸಂಗತಿಯಾಗಲಿ, ನಿಜವಾಗಿ ಸುಖದಾಯಕವಿರುವದಿಲ್ಲ. ಅದೊಂದು ಟೌಳಿಗತನ (ಇಂದ್ರಜಾಲ). ಈ ಅತ್ಯಲ್ಪ ಸುಖಾಭಿಲಾಷೆಯಿಂದ ಮನುಷ್ಯಜೀವನದ ಸೌಂದರ್ಯವೇ ನಷ್ಟವಾಗಿ ಹೋಗಿದೆ. ಇದರ ಬೆನ್ನುಹತ್ತುವದನ್ನು ಬಿಟ್ಟರೆಯೇ ಮನುಷ್ಯನು ನಿಜವಾದ ಸುಖಪ್ರಾಪ್ತಿ ಮಾಡಿಕೊಳ್ಳುವದು ಶಕ್ಯವು.

ಸಂಸಾರದೊಳಗಿನ ವಸ್ತುಗಳಲ್ಲಿ ಸುಖವನ್ನೀಯುವ ಸಾಮರ್ಥ್ಯ ವಿದೆಯೆಂದು ತಿಳಿಯುವದು ಅಜ್ಞಾನವು. ನಿಜವಾದ ಸುಖಸಾಮರ್ಥ್ಯವು ಆ ಪದಾರ್ಥಗಳಲ್ಲಿಲ್ಲ; ಮನುಷ್ಯನ ಮನಸ್ಸಿನಲ್ಲಿದೆ. ಈ ಶಕ್ತಿಯೆಂದರೆ ಮನಸ್ಸಿನ ನಿರ್ಮಲತೆ. ಮನಸ್ಸು ಶುದ್ಧವಾದ ಹೊರತು ಬೇಕಾದಷ್ಟು ಪ್ರಯತ್ನಿಸಿದರೂ ಸುಖವು ಲಭಿಸಲಾರದು. ಇಂತಹದೊಂದು ಒಡವೆ ಯಲ್ಲಿ ಸುಖಬಡಿಸುವ ಸಾಮರ್ಥ್ಯವಿದೆಯೆಂಬ ತಪ್ಪು ತಿಳುವಳಿಕೆಗೆ ಮನು ಷ್ಯನು ಅಧೀನನಾದನೆಂದರೆ ಅವನು ದುಃಖ ಪರಂಪರೆಯಲ್ಲಿ ಮುಳುಗಿದ ನೆಂದೇ ತಿಳಿಯಬೇಕು. ಜೇನುನೊಣವು ಜೇನುತುಪ್ಪಿನ ಆಸಕ್ತಿಯಿಂದ ಜೀವಕ್ಕೂ ಎರವಾಗುವಂತೆ, ಮನುಷ್ಯನು ತಪ್ಪಾದ ಸುಖಾಭಿಲಾಷೆಯಿಂದ ಬಂಧನದಲ್ಲಿ ಸಿಕ್ಕು ದುಃಖಭೋಗಕ್ಕೊಳಪಡುವನು! ಈ ಜಗತ್ತಿನಲ್ಲಿ ಮೋಹಗೊಳಿಸುವ ಸಂಗತಿಗಳು ಎಣಿಕೆಯಿಲ್ಲದಷ್ಟಿವೆ. ಅಜ್ಞಾನಿಯು ಹೆಜ್ಜೆಹೆಜ್ಜೆಗೆ ಲೋಭದಲ್ಲಿ ಸಿಕ್ಕುಬೀಳುವನು. ಆತನು ನೋಡಿದತ್ತ ಆತ ನಿಗೆ ಲೋಭನೀಯ ವಸ್ತುಗಳ ದರ್ಶನವಿರುತ್ತದೆ. ಅವು ಆತನನ್ನು ತಮ್ಮ ಕಡೆಗೆ ಸೆಳೆಯುತ್ತವೆ, ಕರೆಯುತ್ತವೆ. ಆತನು ಅವುಗಳ ಬಲೆಯಲ್ಲಿ ಸಿಕ್ಕಿ ಕೊಳ್ಳುತ್ತಾನೆ. ಮತ್ತು ದುಃಖಭಾಜನನಾಗುತ್ತಾನೆ.

ಇಂಥ ಲೋಭನೀಯ ವಸ್ತುಗಳನ್ನು ಪರಮಾತ್ಮನು ನಿರ್ಮಿಸಿದು ದರ ಕಾರಣವುಃ— ಅವುಗಳನ್ನು ನೋಡುವದರಿಂದುಂಟಾಗುವ ಉತ್ಸು ಕತೆ, ದುರ್ಬಲತೆಗಳೊಡನೆ ಹೋರಾಡಿ ಮನುಷ್ಯನು ತನ್ನ ಆತ್ಮಸಾಮ ರ್ಥ್ಯವನ್ನು ಬೆಳೆಯಿಸಿಕೊಂಡು ನಿಜವಾದ ಸುಖಪ್ರಾಪ್ತಿ ಮಾಡಿಕೊಳ್ಳ ಬೇಕೆಂದು. ಅಜ್ಞಾನಿಗೆ ಜಗದ್ರಚನೆಯಲ್ಲಿರುವ ಪರಮಾತ್ಮನ ಈ ಇಚ್ಛೆಯ ಕಲ್ಪನೆಯಾಗುವದಿಲ್ಲ. ಆತನು ತನ್ನ ಮನಸ್ಸನ್ನು ಸಿಕ್ಕಂತೆ ಹರಿಬಿಡು ವನು; ಅವುಗಳ ಉಪಭೋಗವೇ ತನ್ನ ಧ್ಯೇಯವೆಂದು ತಿಳಿಯುವನು. ಮತ್ತು ಅವುಗಳ ಬಗ್ಗೆ ಧಡಪಡಿಸಿ ಅವು ದೊರೆತರೂ ಸುಖದಿಂದ ವಂಚಿ ತನಾಗುವನು. ದೊರೆಯದಿದ್ದರೂ ವಂಚಿತನಾಗುವನು. ಕಣ್ಣಿಗೆ ಸುಂದರ ಕಾಣುವ, ಕೈಗೆ ಮಿದುವೆನಿಸುವ, ನಾಲಿಗೆಗೆ ರುಚಿಕೊಡುವ ಗುಣಗಳಿಗೆ ಅಂದರೆ ಹೊರಗಿನ ಸೊಬಗಿಗೆ ಮರುಳಾಗಿ ಮುಂದಿನ ವಿಚಾರಕ್ಕೆಳಸದೆ ಬಲೆಯಲ್ಲಿ ಬಿದ್ದು ತೊಳಲಾಡುವನೀಯಜ್ಞಾನಿ!

ಆತನು ತುಸು ವಿಚಾರಿಯಾದರೆ ಕಣ್ಣು ಕಿವಿ ಮೂಗು ತೊವಲು ಮೊದಲಾದ ಇಂದ್ರಿಯಗಳಿಗೆ ಸುಖವೀವ ಒಡವೆಗಳು ಕೆಲಹೊತ್ತು ಆ

ಇಂದ್ರಿಯಗಳನ್ನು ತಣಿಸಬಹುದಾದರೂ ಮನಸ್ಸಿನ ಸ್ವಾಸ್ಥ್ಯವನ್ನು ಸೆಳಕೊಳ್ಳುವವೆಂಬದು ಆತನಿಗೆ ಕಂಡು ಬರುವದು. ಇಂದ್ರಿಯ ಸುಖಕ್ಕಿಂತ ಮನಸ್ಸು ಸುಖಿಯಾಗುವದು ಹೆಚ್ಚು ಮಹತ್ವದ್ದು. ಆದರೆ ಇಂದ್ರಿಯಗಳನ್ನು ಸುಖಪಡಿಸುವಂಥ ಸಂಗತಿಗಳು ಮನಸ್ಸನ್ನು ಚಂಚಲಗೊಳಿಸಿ ದುಃಖಕ್ಕೀಡುಮಾಡುತ್ತವೆ. ಮನಸ್ಸು ಚಂಚಲವಾಗುವದೇ ದುಃಖದ ವಾಸ್ತವಸ್ವರೂಪವು. ನಮ್ಮ ಜೀವನವು ಸುಖದಲ್ಲಿ ವ್ಯತಿತವಾಗಬೇಕಾದರೆ ನಾವು ಮೊದಲು ಈ ಮನಶ್ಚಂಚಲತೆಯೆಂಬ ದುಃಖವನ್ನು ಅರಿತುಕೊಳ್ಳಲಿಕ್ಕೆ ಬೇಕು. ಆ ಚಂಚಲತೆಯನ್ನು ದೂರೀಕರಿಸುವದೇ ದುಃಖನಾಶನದ ಉಪಾಯವು. ಈ ದುಃಖವು ಹೊರಗಿರುವದಿಲ್ಲ; ಅಂತರ್ಯಾಮದಲ್ಲಿಯೇ ಇರುವದು. ಅದ್ದರಿಂದ ಅವನ್ನು ನೀಗಲಿಕ್ಕೆ ಮನಸ್ಸು ಅಂತರ್ಮುಖವಾಗಲಿಕ್ಕೆ ಬೇಕು.

ದಾಸರು ಒಂದೆಡೆ ಹೇಳಿದ "ಅನುಗಾಲ ಚಿಂತೆಯನುಗಾಲ" ಎಂಬುದು ಸುಳ್ಳಲ್ಲ. ಮನಸ್ಸು ತನ್ನ ಇಚ್ಛಿತವಸ್ತು ದೊರೆಯುವ ತನಕ ಚಂಚಲ ಅರ್ಥಾತ್ ದುಃಖಿತವಿರುತ್ತದೆ; ಅದು ದೊರೆಯಲು ಅದರ ಉಪಯೋಗಕ್ಕಾಗಿ ಚಂಚಲವಾಗುತ್ತದೆ; ಉಪಭೋಗದ ತರುವಾಯ ಅದು ನಷ್ಟವಾದೀತೆಂಬ ಚಿಂತೆಗೆ ಒಳಗಾಗುತ್ತದೆ; ಅದು ಹೊರಟು ಹೋಗಲು ಮತ್ತೆ ದೊರಕಿಸುವ ಚಿಂತೆಯಲ್ಲಿ ಮುಳುಗುತ್ತದೆ. ಹೀಗೆ ಅದನ್ನು ಆಶಿಸುವಾಗ ದುಃಖಿತ, ದೊರೆತಾಗ ದುಃಖಿತ, ನಷ್ಟವಾದಾಗಲೂ ದುಃಖಿತವಾಗಿರುವದು. ಒಟ್ಟಿಗೆ ಆಶೆಯೇ ದುಃಖಕ್ಕೆ ಮೂಲವು. ಆಶೆ-ಆಸಕ್ತಿ ಮಾನವನ ಮನಸ್ಸಿನ ಹಿರಿದಾದ ರುಜೆ, ಕಡು ಹಗೆ ಆಗಿದೆ. ಇದರ ಬಹಿಸ್ವರೂಪವು ಬಲು ಸವಿಕಟ್ಟು. ಇದರ ಬಲೆಯಲ್ಲಿ ಸಿಕ್ಕವನು ಸುಖದ ದಾರಿಯನ್ನು ಮರೆತುಬಿಡುವನು. ತಾನು ಮನುಷ್ಯನಿರುವನೆಂಬದನ್ನು ಮರೆಯುವನು! ಆದರಿಂದ ಮನುಷ್ಯನಾಗಿ ಹುಟ್ಟಿಬಂದು ಗಳಿಸಬೇಕಾದ ಉಚ್ಚಧ್ಯೇಯದಿಂದ ವಂಚಿತನಾಗುವನು. ಅದ್ದರಿಂದ ಸುಖ, ನಿಜವಾದ ಸುಖ, ಬಯಸುವವನು ಆಶೆಯನ್ನು ಮನಸ್ಸಿನಿಂದ ಹೊರದೂಡಲಿಕ್ಕೆ ಬೇಕು. ಸುಖಪ್ರಾಪ್ತಿಗೆ ಅನಾಸಕ್ತಿಯು ಹೊರತು ಬೇರೆ ಸಾಧನವು ಇನ್ನೂ ವರೆಗೆ ದೊರೆತಿರುವದಿಲ್ಲ. ಮಾಡತಕ್ಕ ಎಲ್ಲ ಸಂಗತಿಗಳನ್ನು ಲಿಂಗಾರ್ಪಣ ಬುದ್ಧಿಯಿಂದ ಮಾಡುವದು, 'ತಾನು ಮಾಡುವೆನು' 'ತನಗಾಗಿ ಮಾಡುವೆನು' ಎಂಬ ಅಹಂಕಾರ ಮಮಕಾರಗಳನ್ನು

ತ್ಯಜಿಸುವದು ಅನಾಸಕ್ತಿಯ ಸಾಧನಗಳು. ಇದೇ ಸುಖಕ್ಕೆ ಮುಟ್ಟುವ ಒಂದೇ ಒಂದಾದ ದಾರಿ.

ಸುಖೇಚ್ಛೆಯು ನಿಜವಾದ ಸುಖಕ್ಕೆ ಮುಟ್ಟಿಸುವದಿಲ್ಲ; ಅದು ದುಃಖಕ್ಕೆ ಔತಣ ಕೊಡುತ್ತದೆ. ನಾವು ಸುಖವೆನ್ನುವದೂ, ತಿಳಿಯುವದೂ ಇಂದ್ರಿಯ ಜನ್ಯಸುಖ. ಈ ಸುಖವನ್ನು ಗಳಿಸಲು ಧಡಪಡಿಸುವವನಿಗೆ ಮನುಷ್ಯನಿಗೆ ತಕ್ಕ ಕರ್ತವ್ಯ ಮಾಡುವ ಮನಸ್ಸಾಗುವದಿಲ್ಲ; ಒಳ್ಳೆಯ ಕೆಲಸವೂ ಆತನಿಂದ ಜರಗುವದಿಲ್ಲ. ಈ ಸುಖೇಚ್ಛೆಯಿಂದಲೇ ಸಂಸಾರದಲ್ಲಿ ಅಶಾಂತಿಯು ಹಬ್ಬಿದೆ. ಇದಕ್ಕಾಗಿ ಮಾನವನು ನಿರಪರಾಧಿಗಳ ಕತ್ತುಹಿಚುಕಲೂ ಹಿಂದೆಗೆಯನು! 'ಆಹಾರ-ನಿದ್ರಾ-ಭಯ-ಮೈಥುನ'ಗಳು ಮನುಷ್ಯೋಚಿತ ಕರ್ತವ್ಯಗಳಲ್ಲ. ಪಶುಗಳೂ ಅವನ್ನು ಮಾಡುತ್ತವೆ. ಪ್ರಪಂಚದಲ್ಲಿ ಶಾಂತಿಯು ನೆಲಿಸಬೇಕಾದರೆ ಈ ಇಂದ್ರಿಯಜನ್ಯ ಸುಖಾಪೇಕ್ಷೆಯನ್ನು ಹತ್ತಿಕ್ಕಲಿಕ್ಕೆ ಬೇಕು. ಈ ಸುಖಾಪೇಕ್ಷೆಯಿಂದ ದೂರಾದವರಿಂದಲೇ ಸಂಸಾರದಲ್ಲಿಯೂ, ಸಮಾಜದಲ್ಲಿಯೂ ಶಾಂತಿಯು ನೆಲೆಗೊಳ್ಳುತ್ತದೆ.

ಮೊದಲು ಮನಸ್ಸಿನಲ್ಲಿ ಇಚ್ಛೆಯುತ್ಪನ್ನವಾಗಲಿಕ್ಕೆ ಇಂಬುಗೊಡುವದೂ, ಬಳಿಕ ಅದನ್ನು ಪೂರ್ಣಮಾಡಲು ಒದ್ದಾಡುವದೂ ಮೂಢತನವು. ರೊಜ್ಜಿನಿಂದ ಮೈತುಂಬಿಕೊಂಡು ಬಳಿಕ ಅದನ್ನು ತೊಳೆಯಲು ಯತ್ನಿಸಿದಂತಹದಿದು! ರೊಜ್ಜು ಮೈಗೆ ಮೆತ್ತದಂತೆ ನಡೆಯುವದೇ ಜಾಣತನವಲ್ಲವೇ? ಯಾವದರ ಸಂತೃಪ್ತಿ ಮಾಡಬೇಕಾಗುವದು, ಅದು ಮೂಲತಃ ಹುಟ್ಟದಂತೆ ಮಾಡುವದೇ ಬುದ್ಧಿವಂತಿಕೆ. ಆಶೆಯುತ್ಪನ್ನವಾಗಬೇಕು, ಬಳಿಕ ಅದನ್ನು ಪೂರೈಸುವ ಹಳವಂಡದಲ್ಲಿ ಬೀಳಬೇಕು, ಇದಕ್ಕೂ ಆಶೆ ಹುಟ್ಟದಂತೆ ಯತ್ನಿಸುವದೇ ಒಳಿತಲ್ಲವೇ? ಜೀವನದಲ್ಲಿ ಆಶೆಯನ್ನು ಒಮ್ಮೆಯೇ ಹೊಡೆದೋಡಿಸಿದರೆ ಸಾಕು! ಅದು ಎಂದೆಂದೂ ಸನಿಯಕ್ಕೆ ಬಾರದು! ಬಳಿಕ ಆನಂದ ವೃತ್ತಿಯು ತಾನಾಗಿ ಸೇರಿಕೊಂಡು ಬಿಡುವದು. ಹೀಗೆ ಸದಾನಂದ ಸ್ಥಿತಿಯಲ್ಲಿರುವದೇ ಜಾಣತನವೂ, ಶ್ರೇಷ್ಠ ಕೃತ್ಯವೂ ಆಗಿದೆ.

ತನ್ನ ಆನಂದವೃತ್ತಿಯನ್ನು ಸ್ಥಿರವಾಗಿ ಕಾಯ್ದುಕೊಳ್ಳುವದು ಮನುಷ್ಯನ ಮುಖ್ಯ ಕರ್ತವ್ಯವಾಗಿದೆ. ಆನಂದರಹಿತ ಮನುಷ್ಯನು ಯಾರೊ

ಡನೆಯೂ ಸರಿಯಾಗಿ ವರ್ತಿಸನು. ಅದರಿಂದ ದ್ವೇಷ, ಅಸೂಯಾದಿ ದುರ್ಭಾವನೆಗಳಿಗೆ ಆಶ್ರಯ ದೊರಕುವದು. ಇದು ಮಹಾಪಾಪವು; ಆತ್ಮಘಾತವು! ಇಚ್ಛಾತೃಪ್ತಿಗಾಗಿ ಎರಡನೆಯವರೊಡನೆ ವರ್ತಿಸುವವನು ಅವರನ್ನು ತನ್ನ ಇಚ್ಛಾಪೂರ್ತಿಯ ಸಾಧನಗಳೆಂದು ತಿಳಕೊಳ್ಳುವನು! ಅವರಿಂದ ಭೌತಿಕಲಾಭ ಪಡೆಯುವದಕ್ಕಾಗಿ ಅವರ ಕೆಲವೊಂದು ವಸ್ತುವನ್ನು ಅಪಹರಿಸಲೂ ಹಿಂದೆಮುಂದೆ ನೋಡನು! ಈ ಭಾವನೆಯೇ 'ಸ್ವಾರ್ಥ'ವು! ಸ್ವಾರ್ಥ, ಇಚ್ಛೆ, ಅಸಂತುಷ್ಟಿ ಇವೆಲ್ಲ ಸಮಾನಾರ್ಥಕ ಶಬ್ದಗಳು. ಆಶೆಯ ತೃಪ್ತಿಗೆ ಯತ್ನಿಸಿದಂತೆ ಅದು ಬೆಳೆಯುವದು; ಪ್ರಖರವಾಗುವದು.

ಆಶಾಪರನು ಧನಕ್ಕಾಗಿ ಹೆಣಗುವನು; ಹರ್ಮ್ಯಗಳನ್ನೂ, ಸಾಧನಗಳನ್ನೂ ಬಯಸುವನು; ಮೇಲ್ತರದ ಅಶನವಸನಗಳಿಗೆ ಹಾತೊರೆಯುವನು; ಮಡದಿ ಮಕ್ಕಳಿಗಾಗಿ ತಳಮಳಿಸುವನು. ಹೀಗೆ ಸುಖಕ್ಕಾಗಿ ಯತ್ನಿಸಿದಂತೆ ನಿಜವಾದ ಸುಖವು ಆತನಿಂದ ದೂರದೂರ ಹೋಗುವದು. ಆತನು ಸದಾಕಾಲ ದುಃಖಿತನಾಗಿರುವನು. ಸುಖಾಪೇಕ್ಷೆಯು ನಿಜವಾದ ಸುಖದ ಸಾಧನವಲ್ಲ. ನಿಜವಾದ ಸುಖ ದೊರಕಿಸಲು ಮನುಷ್ಯನು ಶಾಂತನೂ, ಸ್ಥಿರಮನಸ್ಕನೂ ಆಗಲಿಕ್ಕೆ ಬೇಕು. ಶಾಂತತೆ ಹಾಗು ಬುದ್ಧಿಯ ಸ್ಥಿರತ್ವ ದೊರೆಯುವ ತನಕ ನಿಜವಾದ ಸುಖವು ಲಭಿಸದೆಂಬದನ್ನು ನಿಶ್ಚಿತವಾಗಿ ತಿಳಿಯಬೇಕು. ದುಃಖ, ಚಿಂತೆ ಎರಡೂ ಒಂದೇ ಭೋಗಸಂತೃಪ್ತಿಯನ್ನು—ಸುಖೇಚ್ಛೆಯನ್ನು ಪೂರ್ಣ ಮಾಡುವ ಪದಾರ್ಥಗಳು ಹೇಗೆ ದೊರೆತಾವು? ಹೇಗೆ ತನ್ನ ಹತ್ತರ ಉಳಿದಾವು? ಎಂಬ ಚಿಂತೆಯನ್ನು ಮನಸ್ಸಿನಲ್ಲಿ ಕಾಯ್ದಿಟ್ಟುಕೊಳ್ಳುವದೇ ದುಃಖ. ಇದರಿಂದ ಮುಕ್ತವಾಗುವದೇ ಮನುಷ್ಯಜನ್ಮದ ಗುರಿ. ಸುಖ ದುಃಖಗಳು ಶಾರೀರಿಕ ವಸ್ತುಗಳಲ್ಲ; ಮಾನಸಿಕ ವಸ್ತುಗಳು. ಅವೆರಡೂ ಒಂದೆಡೆಯಲ್ಲಿರಲಾರವು. ಒಂದರ ಅಭಾವ, ಇನ್ನೊಂದಕ್ಕಾಶ್ರಯ. ಇಂದ್ರಿಯಜನ್ಯ ಸುಖಾಪೇಕ್ಷೆಯು ಒಂದು ತರದ ಲೋಭವು. 'ಲೋಭಮೂಲಾನಿ ಪಾಪಾನಿ' ಲೋಭಿಯು ನಿಜವಾದ ಡಕಾಯಿತ—ದರೋಡೆಖೋರ. ಚಿಕ್ಕ ಮೀನನ್ನು ದೊಡ್ಡಮೀನು, ದೊಡ್ಡ ಮೀನನ್ನು ತಿಮಿತಿಮಿಂಗಲ ನುಂಗುವಂತೆ ಒಬ್ಬ ಲೋಭಿಯು ಮತ್ತೊಬ್ಬ ಲೋಭಿಯ ತುತ್ತು ಆಗುವನು! ಹೀಗೆ ಒಬ್ಬರನ್ನೊಬ್ಬರು ನುಂಗುವ ಆಶೆಯೇ ಎಲ್ಲರಲ್ಲಿ! ಒಂದೇ ಬಗೆಯ ಚಿಂತೆ

ಹೀಗೆ ಅರಸನು ರಾಜಧಾನಿಯನ್ನು ಬಿಟ್ಟುಹೋಗಲು ಜೈನರು ಅವನ ಶಿವಭಕ್ತಿಯನ್ನು ನೋಡಿ ಅತ್ಯಂತ ಸಂತಾಪಗೊಂಡು ಅವರು ತಮ್ಮ ಮನದಲ್ಲಿ ಒಂದು ದುರ್ಬುದ್ಧಿಯನ್ನು ನೆನೆದು. ಒಬ್ಬ ಶ್ರವಣನಿಗೆ ಭಕ್ತನ ವೇಷವನ್ನು ಹಾಕಿ, ಅವನನ್ನು ಅರಮನೆಗೆ ಕಳಿಸಿದರು. ಅವನು ಅರಮನೆಯನ್ನು ಪ್ರವೇಶಿಸಿ ಮಲ್ಲಿದೇವನನ್ನು ಕಾಣಲು, ರಾಜಕುಮಾರನು ಅವನು ಶಿವಭಕ್ತನೆಂದು ತಿಳಿದು ಅತ್ಯಂತ ಭಕ್ತಿಯಿಂದ ಮಣಿದು ನಮಸ್ಕಾರವನ್ನು ಮಾಡಲು, ಆ ಕಪಟ ವೇಷಧಾರಿಯಾದ ಜೈನನು ಆ ಸ್ಥಳದಲ್ಲಿ ಯಾರೂ ಇಲ್ಲದ್ದನ್ನು ಕಂಡು ತನ್ನಲ್ಲಿ ಗುಪ್ತವಾಗಿ ಇಟ್ಟುಕೊಂಡಿದ್ದ ಕಠಾರಿಯನ್ನು ತೆಗೆದು ಅದರಿಂದ ಆ ಕುಮಾರನನ್ನು ಇರಿದು ಕೊಂದುಹಾಕಿದನು. ಹೀಗೆ ಮಾಡಿ ಕೂಡಲೆ ಅವನು ಅರಮನೆಯಿಂದ ಜಾರಿ ಹೋಗಿಬಿಟ್ಟನು.

ಸ್ವಲ್ಪ ಹೊತ್ತಿನ ಮೇಲೆ ಕಳಾವತಿಯು ತನ್ನ ಕುಮಾರನು ಸತ್ತು ಬಿದ್ದ ಸ್ಥಳಕ್ಕೆ ಬಂದಳು. ಮಗನ ಮೃತದೇಹವನ್ನು ನೋಡಿ ಅವಳಿಗುಂಟಾದ ದುಃಖಕ್ಕೆ ಪಾರಾವಾರವಿರಲಿಲ್ಲ. ಆದರೆ ಅವಳು ಶಿವಾನುಭವಿಯು. ಅವಳು ತನ್ನ ದುಃಖವನ್ನು ಕೂಡಲೆ ನುಂಗಿಕೊಂಡು ಈ ಅನಾಹುತವನ್ನು ಮಾಡಿದವರಾರೆಂಬುದನ್ನು ಶೋಧಿಸಹತ್ತಿದಳು. ಆಗ ಈ ಘೋರ ಕಾರ್ಯವನ್ನು ಮಾಡಿದವರು ಜೈನರು, ರಾಜನು ನಡಿಸಿರುವ ಧರ್ಮಕಾರ್ಯವನ್ನು ಕೆಡಿಸಲು ಅವರು ಹೀಗೆ ಮಾಡಿದ್ದಾರೆ, ಎಂದು ಅವಳಿಗೆ ತಿಳಿದುಬಂದಿತು. ಅವಳ ಮನಸ್ಸಿನಲ್ಲಿ ದುಃಖವು ಉಕ್ಕೇರಿ ಬಂದಿತ್ತು. ಆದರೆ ಅವಳು ಅದನ್ನು ತಡೆದು ಯೋಚಿಸಿದ್ದೇನೆಂದರೆ— ಹೀಗಾದುದನ್ನು ಅರಸನಿಗೆ ತಿಳಿಸಿದರೆ ಅವನು ನಡಿಸಿರುವ ಮಹಾಪರ್ವಕ್ಕೆ ಹಾನಿಬರುವದು. ಅವನು ಉದ್ವಿಗ್ನನಾಗುವನು. ರಾಜ್ಯದಲ್ಲಿ ಏನು ಘಟಿಸಿದರೂ ತನಗೆ ತಿಳಿಸಕೂಡದು ಎಂದು ಅವನು ಕಟ್ಟಪ್ಪಣೆಯನ್ನಿತ್ತಿದ್ದಾನೆ ಎಂಬುದನ್ನು ಸ್ಮರಿಸಿ, ಆ ಶಿವಶರಣೆಯು ತನ್ನ ಮಗನು ಮಡಿದನೆಂಬುದರ ದುಃಖವನ್ನು ತಡೆದು ಅರಮನೆಯನ್ನು ಶೃಂಗರಿಸಿದಳು ಮತ್ತು ತನ್ನ ಮಗನ ಶವವನ್ನು ತನ್ನ ಪತಿಯು ಬರುವ ವರೆಗೆ ಹಾಗೆಯೇ ಇಡಬೇಕೆಂದು ಯೋಚಿಸಿ ಅದನ್ನು ಅರಮನೆಯಲ್ಲಿಯೇ ಒಂದು ಭದ್ರವಾದ ಉಚಿತಸ್ಥಳದಲ್ಲಿ ಇರಿಸಿದಳು. ಮರಣವಾದರೆ ದುಃಖಿಸಕೂಡದೆಂಬ ಶಿವಶರಣರ ನಡೆಯು ಇದೆ. ಇದರಂತೆಯೇ ಆ ಸಾಧ್ವಿಯು ಆ ಕಾಲದಲ್ಲಿ ಆಚರಿಸಿದಳು.

## ಶಿವಾನುಭವ ಪತ್ರಿಕೆಗೆ ಸಹಾಯ.

ಶಿವಾನುಭವ ಪತ್ರಿಕೆಗೆ ಕೆಳಗೆ ಕಾಣಿಸಿದ ಮಹನೀಯರು ಸಹಾಯ ಧನವನ್ನು ಕೊಟ್ಟದ್ದು ಇದಕ್ಕೋಸ್ಕರ ನಾವು ಅವರಿಗೆ ಅತ್ಯಂತ ಕೃತಜ್ಞರಾಗಿದ್ದೇವೆ. ಅವರೆಲ್ಲರೂ ಧಾರವಾಡ ಜಿಲ್ಲೆಯ ವನಸಿಗ್ಗಲಿಯ ಬಸವಮಂಟಪದ ಸಭಾಸದರು ಇದ್ದಾರೆ.

(೧) ಸೂರ್ಯಪ್ಪ ಗುರುಪ್ಪಾದಪ್ಪ ಕೆರಿ. ೧ ರೂ. (೨) ಶಂಕರೆಪ್ಪ ವೀರಪ್ಪ ನೆಲಗುಡ್ಡ. ೧ ರೂ. (೩) ಪ್ರಭಪ್ಪ ಕೊಟ್ರಪ್ಪ ಕುರ್ದಕೊಡಟಿ ೧ ರೂ. (೪) ಅಮಾತೆಪ್ಪ ಗಂಗಪ್ಪ ನವಲಗುಂದ ೧ ರೂ. (೫) ಬಸವಣ್ಣೆಪ್ಪ ಚನ್ನಪ್ಪ ನೂಲವಿ ೧ ರೂ. (೬) ವೀರವ್ವತಾಯಿ ಶಾಂತಕ್ಕಾತಾಯಿ ಲಕ್ಕುಂಡಿ ೨ ರೂ.

## ಶಿವಾನುಭವ ಗ್ರಂಥಮಾಲೆಗೆ ಸಹಾಯ.

ಶಿವಾನುಭವ ಗ್ರಂಥಮಾಲೆಯಲ್ಲಿಯ ಅನೇಕ ಗ್ರಂಥಗಳ ಪ್ರತಿಗಳು ತೀರಿದ್ದು ಅವುಗಳ ಪುನರ್ಮುದ್ರಣವನ್ನು ಕೈಕೊಳ್ಳಬೇಕಾಗಿರುತ್ತದೆ. ಈಗಿನ ಕಾಲದಲ್ಲಿ ಇದು ಬಹಳ ವೆಚ್ಚದ ಕೆಲಸವಾಗಿರುತ್ತದೆ. ಈ ಕಾರ್ಯಕ್ಕೋಸ್ಕರ ರಾಜಧರ್ಮ ಪ್ರವೀಣ ದಿವಾನಬಹಾದ್ದೂರ ಪಿ. ಮಹಾದೇವಯ್ಯನವರು ಬಿ. ಏ. ಬಿ. ಎಲ್, ನಿವೃತ್ತ ಮುಖ್ಯ ನ್ಯಾಯಾಧೀಶರು ಮು. ಬೆಂಗಳೂರ ಇವರು ೨೫ ರೂಪಾಯಿ ಗಳ ಕಾಣಿಕೆಯನ್ನು ಕೊಟ್ಟದ್ದಾರೆ. ಅಲ್ಲದೆ ಇನ್ನೊಬ್ಬ ಮಹನೀಯರು ಒಂದು ನೂರು ರೂಪಾಯಿಗಳನ್ನು ಕೊಟ್ಟದ್ದು ಅವರು ತಮ್ಮ ಹೆಸರನ್ನು ಪ್ರಕಟ ಮಾಡಬಾರದೆಂದು ತಿಳಿಸಿದ್ದಾರೆ. ಆದ್ದರಿಂದ ಅವರ ಹೆಸರನ್ನು ನಾವು ಇಲ್ಲಿ ಕಾಣಿಸಿರುವದಿಲ್ಲ. ಈ ಮಹನೀಯರೆಲ್ಲರಿಗೂ ನಾವು ನಮ್ಮ ಕೃತಜ್ಞತೆಯನ್ನು ಅರ್ಪಿಸುತ್ತೇವೆ.

ಹೀಗೆಯೇ ಶಿವಾನುಭವ ಗ್ರಂಥಗಳಿಗೋಸ್ಕರ ಪ್ರೀತಿ ಇದ್ದ ಮಹನೀಯರೆಲ್ಲರೂ ಸಹಾಯ ಮಾಡಿದಲ್ಲಿ ಒಂದು ಮಹತ್ವದ ಕಾರ್ಯಕ್ಕೆ ಅವರು ಸಹಾಯ ಮಾಡಿದಂತಾಗುವದು.

ಪಿ. ಜಿ. ಹಳಕಟ್ಟಿ.
ಸಂಪಾದಕ—ಶಿವಾನುಭವ.



From,
Shivanubhava
Office
Bijapur.

BOOK-POST.

(M. S. M. Ry.)

R. N. B. 2[illegible]64



ಈ ಪತ್ರಿಕೆಯನ್ನು ಇದರ ಸಂಪಾದಕರಾದ, ರಾ॥ ಬ॥ ಪಿ. ಜಿ.
ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ವಿಜಾಪುರ ಇವರು ವಿಜಾಪುರದಲ್ಲಿ
ತಮ್ಮ ಹಿತಚಿಂತಕ ಪ್ರಿಂ. ಪ್ರೆಸ್ಸಿನಲ್ಲಿ ಮುದ್ರಿಸಿ ಅಲ್ಲಿಯೇ ಪ್ರಸಿದ
ಸಿದರು.

೧.




ಸಂಪುಟ ೨೦ ]  ಮಾರ್ಚ-ಎಪ್ರೆಲ್ ೧೯೪೬.  [ ಸಂಚಿಕೆ ೬--೭

## ವಿಷಯಾನುಕ್ರಮಣಿಕೆ.

# ಶಿವಾನುಭವ

| ವರ್ಷ ೨೦ | ಮಾರ್ಚ-ಏಪ್ರೀಲ ೧೯೪೬. | ಸಂಚಿಕೆ ೬ |
| --- | --- | --- |

## ಶಿವಾನುಭವದ ಸೊಗಸು.

(ಕಥಾರೂಪವಾದುದು)

(ಲೇಖಕ:— ಶ್ರೀಯುತ ಸಿ. ನಾ. ಮಹಾಂತಣ್ಣವರ ರಿಟಾಯರ್ಡ ಅಸಿ॥
ಎಜ್ಯುಕೇಶನಲ್ ಇನಸ್ಪೆಕ್ಟರ, ಪುಣೆ)

—→o←—

ಅದು ಬ್ರಿಟಿಷ—ಮೊಗಲಾಯಿಗಳ ನಡುವಿನ ಹದ್ದು. ವಿಜಾಪುರ ಜಿಲ್ಲೆಯ ಪೂರ್ವಭಾಗ. ಹುನಗುಂದ ತಾಲೂಕಿನಲ್ಲಿಯ ಒಂದು ಗ್ರಾಮ. ಆ ಗ್ರಾಮದ ಹೆಸರು ಕೋಡೀಹಾಳ. ಗ್ರಾಮಕ್ಕೆ ಒಂದೇ ಮೈಲಿನ ಅಂತರದ ಮೇಲೆ ಸಜ್ಜನಗುಡ್ಡೆಂಬ ಮೊಗಲಾಯಿಯ ಹಳ್ಳಿ. ಅದು ಇನಾಮು ಗ್ರಾಮ. ಆ ಇನಾಮುದಾರರ ಊರ ಹೊರಗೆ ಸಣ್ಣ ದೇವಾಲಯ. ಆ ದೇವಾಲಯದಲ್ಲಿ ಸದ್ಯಕ್ಕೆ ಪ್ರಸಿದ್ಧರಾದ ಶರಣಮ್ಮನವರ ವಾಸ. ಇವರ ಹುಟ್ಟು ಹಾಲುಮತವಾದರೂ ನಡೆ ವೀರಶೈವತ್ವ. ಇವರ ಈಗಿನ ವಯಸ್ಸು ಅಜಮಾಸು ಅರವತ್ತು ವರುಷ. ಬಾಲ್ಯದಲ್ಲಿ ತಂದೆಯನ್ನೂ ತಾರುಣ್ಯದಲ್ಲಿ ತಾಯಿಯನ್ನೂ ಕಳಕೊಂಡರು. ಬ್ರಹ್ಮಚರ್ಯ ವ್ರತವನ್ನು ಪಾಲಿಸುವವರು. ಗುಡುದೂರು ಗುರುಗಳಿಂದ ಲಿಂಗವನ್ನು ಪಡೆದವರು. ಶಿವಾಚಾರ ಶಿವಪೂಜೆ ಶಿವಭಕ್ತಿ ಶಿವಧ್ಯಾನ ಶಿವಜ್ಞಾನಗಳನ್ನು ಬೆಳೆಯಿಸುತ್ತ ಶಿವಶರಣೆಯೆಂಬ ಹೆಸರು ಪಡೆದವರು. ಇವರ ಸನ್ನಿಧಿಗೆ ದಿನಂಪ್ರತಿ ಬರುವ ಬಾಲಬಾಲಿಕೆಯರು ಗುರುಹಿರಿಯರು ಭಕ್ತಿಭಾವವನ್ನರಿತು ಶಿವಾಚಾರದ ನಡೆನುಡಿಗಳನ್ನು ಬೀರುವವರು.

ಇಂಥ ಶಿವಶರಣೆಯ ಸನ್ನಿಧಿಯ ಮೂಲಕ ಕೋಡೀಹಾಳ ಗ್ರಾಮವು ಶಿವಾಚಾರ ಸಂಪತ್ತಿನಿಂದ ತುಂಬಿ ತುಳುಕುವದು ಆಶ್ಚರ್ಯ

ಶರಣಮ್ಮನವರ ಶಿಶುವಾದ ನೀಲಮ್ಮನು ಹೇಳಿದ್ದು — ನಾನು ಮನೆಯಿಂದ ಇಲ್ಲಿಗೆ ಬರುವಾಗ ದಾರಿಯಲ್ಲಿ ಕುಂಬಾರ ಕಲ್ಲವ್ವನು ತನ್ನ ಮನೆಯ ಕಟ್ಟೆಯ ಮೇಲೆ ಕುಳಿತು ಕೆಸರನ್ನು ಹದ ಮಾಡುತ್ತಿದ್ದಳು. ಒಂದು ಮಣೆ ಇಟ್ಟು ನನಗೆ ಸಹಜ ಕುಳ್ಳಿರ ಹೇಳಿದಳು. ಅವಳ ಮನದಲ್ಲಿ ನನ್ನನ್ನು ಕರೆಯಬೇಕೆಂಬುದು ಇದ್ದಿಲ್ಲ. ನಾನು ಅಲ್ಲಿ ಕೂತೇ ಇಲ್ಲಿಗೆ ಬರಬೇಕೆಂಬುದಿದ್ದಿಲ್ಲ. ನಾನು ಸಹಜ ಹೋಗಿ ನಿಂತರೂ ಮಣೆಯನ್ನು ಆಶ್ರಯಿಸಬೇಕಾಯಿತು. ಮುಂದೆ ನಾನು ಕಿಟಕಿಯೊಳಗಿಂದ ಕಲ್ಲವ್ವನ ಗಂಡನು ತಿಗರಿಯ ಮೇಲೆ ಕೆಸರು ಇಟ್ಟು ಕೈಚಾತುರ್ಯದಿಂದ ಗಡಿಗೆ ಮಾಡುವದನ್ನು ಕೂತಲ್ಲೇ ಕಂಡೆನು. ಆಗ ನನ್ನ ವಿಚಾರಾಂತ್ಯದಲ್ಲಿ ಕುಂಬಾರ ಕಲ್ಲವ್ವನು ನನ್ನನ್ನು ಯಾವ ಉದ್ದೇಶದಿಂದಲೂ ಕರೆದಿಲ್ಲ. ನಾನಾದರೂ ಯಾವ ಕಾರಣಾಂತರದಿಂದ ಅಲ್ಲಿ ಕೂತಿಲ್ಲ. ಇದೇ ಸಹಜವು. ನಾನು ಕುಳಿತದ್ದು ನಿರಾಲಂಬ ಸ್ಥಿತಿಯು, ಆಗ ನನ್ನ ಮನಸ್ಸಿನಲ್ಲಿ ಯಾವ ಕಲ್ಪನೆಯೂ ಇರಲಿಲ್ಲ. ಇದೇ ನಿರಾಳ ಸ್ಥಿತಿಯು. ಕೋಣೆಯೊಳಗೆ ಹಣಿಕಿ ನೋಡಿದಾಗ ನಿರವಯವು. ಕೆಸರು ಆದಿಯು. ಘಟವನ್ನು ರಚಿಸುವ ಕಲ್ಪನೆಯೇ ಶರಣಸ್ಥಿತಿಯು. ಘಟವು ಪರಮೇಶ್ವರ. ಘಟದೊಳಗಿನ ಬೈಲು ಸದಾಶಿವಸ್ಥಿತಿಯು. ಘಟದೊಳಗಿನ ವಾಯುವೇ ಈಶ್ವರ. ಗಡಿಗೆಯ ರೂಪೇ ರುದ್ರ. ಗಡಿಗೆಯ ಇರುವಿಕೆಯೇ ವಿಷ್ಣು. ಗಡಿಗೆಯ ಹುಟ್ಟುವಿಕೆಯು ಬ್ರಹ್ಮ. ಈ ಪ್ರಕಾರ ಆಗ್ಗೆ ಅವಳು ಶಿವಾನುಭವದ ತತ್ವಗಳಿಂದ ಆಕೆಗೆ ತೋಚಿದ ಅನುಭವವನ್ನು ವಿವೇಚಿಸಿದಳು.

ತೋರುವ ಜಗತ್ತು ಜಗದೀಶನ ಲೀಲೆಯೆಂದೂ ಅದು ಪೃಥ್ವಿ, ಅಪ್, ತೇಜ, ವಾಯು, ಆಕಾಶ ಸೂರ್ಯ ಚಂದ್ರ ಆತ್ಮರುಗಳಿಂದೊಡಗೂಡಿ ನಾಮರೂಪಕ್ರಿಯೆಗಳಿಂದ ಕಂಗೊಳಿಸುವದೆಂದೂ ಬ್ರಹ್ಮಾಂಡದಂತೆ ಪಿಂಡಾಂಡವೆಂದೂ ಪಿಂಡಸ್ಥಲದೊಳಗೆ ನಾವೆಲ್ಲ ನಿಂತು ನಿರೀಕ್ಷಿಸುವಾ ಎಂದೂ ಮರುದಿನದ ವಿಷಯದ ಉಪೋದ್ಘಾತವು ಉದ್ಘೋಷಿಸಲ್ಪಟ್ಟಿತು.

“ಮಣಿಗಳ ಸೂತ್ರದಂತೆ ತ್ರಿನಯನ ನೀನಿಪ್ಪೆಯಯ್ಯಾ. ಎಣಿಸುವಡೆ ತನು ಭಿನ್ನ. ಆತ್ಮನೊಬ್ಬನೇ. ಅಣುರೇಣು ಮಧ್ಯದೊಳು ಗುಣಭರಿತ ನೀನೆಂದು ಮಣಿಯುತಿಪ್ಪೆನಯ್ಯ ರಾಮನಾಥಾ.”

ಆತ್ಮವು ಅಮರವಿದ್ದರೂ ಶರೀರವು ನಶಿಸಿದಾಗ ಅಂತರಿಕ್ಷದೊಳಗೆ ಅಲೆದಾಡಿ ಈಶ್ವರನ ತಿರೋಧಾನ ಕೃತ್ಯದಿಂದ ಮಳೆಯ ಹನಿಗಳೊಳು ಬೆರೆತು ಭೂಮಿಯೊಳು ಬಿದ್ದು ಆ ಭೂಮಿಯೊಳು ಬೆಳೆದ ಫಲಗಳ ಸ್ವೀಕಾರದಿಂದ ದಂಪತಿಗಳ ನಿಮಿತ್ತಮಾಡಿ ಆತ್ಮಜನು ಲಿಂಗರೂಪನಾಗಿ ನಿರ್ಮಾಣನಾಗುವನು. ಇದರಂತೆ ಅಂಡಜ ಪಿಂಡಜ ಜರಾಯುಜ ಉದ್ಭಿಜ್ಜಗಳ ಉತ್ಪತ್ತಿಯಾಗುವದು. ಇದಕ್ಕೆ ಪಂಚತತ್ವಗಳೂ ಶಿವನ ಅಗಾಧವಾದ ಮಹಾಕೃತ್ಯಗಳ ಮಹಿಮೆಯೂ ಕಾರಣಗಳೆಂದು ಹೇಳ ಬಹುದು. ಆದರೂ ಅಣುರೇಣುಗಳಲ್ಲಿ ಶಿವನು ಇರುವನೋ ಇಲ್ಲವೋ ಎಂಬುದನ್ನು ವಿಚಾರದಲ್ಲಿ ತರುವಾ. ಒಂದು ಬಿದಿರು ಕಂಬಿಯು ಅನೇಕ ಅಣುರೇಣುಗಳಿಂದ ಕೂಡಿ ಗಟ್ಟಿಯಾದ ಬಿದಿರಾಗಿದೆ. ಒಂದು ಉದ್ದವಾದ ಕೋಲನ್ನು ತೆಗೆದುಕೊಂಡು ನಿಡಿದಾಗಿ ಸೀಳಿ ಎರಡು ಮಾಡಿ ಒಂದನ್ನು ಕೆಳಗಿಟ್ಟು ಮತ್ತೊಂದರಿಂದ ಮಸೆಯಲು ಕಿಡಿಯು ಹುಟ್ಟು ವದು. ಆ ಕಿಡಿಯೇ ಆತ್ಮಾಂಶವೆಂದು ಯಾಕೆ ಅನ್ನಬಾರದು? ಇದನ್ನರಿತು ನಮ್ಮ ದೇವರ ದಾಸಿಮಾರ್ಯರು "ನಿಡಿದೊಂದು ಕೋಲನು ಕಡಿದು ಎರಡು ಮಾಡಿ, ಅಡಿಯ ಹೆಣ್ಣುಮಾಡಿ ಒಡೆತನವ ಗಂಡು ಮಾಡಿ ನಡುವೆ ಹೊಸೆದೊಡೆ ಹುಟ್ಟುವ ಕಿಚ್ಚು ಗಂಡೋ ಹೆಣ್ಣೋ ಹೇಳಾ ರಾಮನಾಥಾ" ಎಂದು ಹಾಡಿಕೊಂಡಿದ್ದಾರೆ. ಇದಲ್ಲದೆ ಮರದೊಳಗೆ ಮಂದಾಗ್ನಿಯು ಉರಿಯದಂತಿರಿಸಿದೆ. ನೊರೆವಾಲೊಳಗೆ ತುಪ್ಪವ ಕಂಪಿಲ್ಲದಂತಿರಿಸಿದೆ. ಶರೀರದೊಳಗೆ ಆತ್ಮನ ಆರುಕಾಣದಂತಿರಿಸಿದೆ. ನೀನು ಬೆರಸಿದ ಭೇದಕ್ಕೆ ಬೆರಗಾದೆನಯ್ಯ ರಾಮನಾಥಾ." ಎಂದು ಶಿವನಿರುವ ಕುರುಹನ್ನು ಸ್ಥೂಲಕ್ಕೆ ಸ್ಥೂಲವಾಗಿಯೂ ಸೂಕ್ಷ್ಮಕ್ಕೆ ಸೂಕ್ಷ್ಮವಾಗಿಯೂ ನಿರೂಪಿಸಿದ್ದಾರೆ. ಇದನ್ನೆಲ್ಲ ಮನದಂದು ನೀಲಮ್ಮನು ಪಿಂಡಸ್ಥಲವನ್ನು ಇನ್ನೂ ಹೆಚ್ಚಾಗಿ ಮಂಡಿಸಿದಳು.

ನನೆಯೊಳಗೆ ಮನೆಮಾಡಿ ನಿಂತ ಪರಿಮಳದ ಪುಂಜದ ತೆರವಿದು. ಕಾರಮೇಘ ಮಾಲೆಯೊಳು ಮುಳುಮುಳುಗಿ ಏಳುವ ಮಿಂಚಿನ ಸಂಚಯದ ಹೋಲಿಕೆಯಿದು. ಸಾಗರವನೇ ಆಗರವ ಮಾಡಿಕೊಂಡ ಕಿಚ್ಚಿನ ಕೆಚ್ಚನ್ನು ಪೋಲುವದಿದು. ಕನ್ನೆಯೊಳು ಮುಂದೋರದೆ ಸಂದಿರ್ದ ಸ್ನೇಹದ ಪರಿಯಿದು. ನೊರೆವಾಲೊಳಗೆ ಒದಗಿರ್ದ ಮಾನವರಿಗೆಲ್ಲ ಮಾಜದೆ ಅರುಹುವ ಅಚ್ಚ ತುಪ್ಪಿನ ಕಂಪಿನ ಪರಿಯಿದು. ಬಗೆಬಗೆಯ

ಬಣ್ಣದ ಹಣ್ಣುಗಳೊಳು ಹರಿದಾಡುವ ರಸದ ರುಚಿಯಂತಿದು. ಚಂದ್ರ ಕಾಂತ ಶಿಲೆಯೊಳಡಗಿ ನಿಂದಿರ್ದ ಉದಕದ ಪರಿಯಿದು. ಚಿನ್ಮಾದ ದೊಳು ಚಿಮುಕುವ ಆನಂದದ ಅಂದವಹ ಮಂದಿರವಿದು. ಧಾತ್ರಿ ಯನೆ ವ್ಯಾಪಿಸಿದ ನೇತ್ರಬಿಂದುವಿನೊಳು ಸಂದಿರ್ದ ಸುಖದ ಸಾಗರ ವಿದು. ಶ್ರೋತ್ರದೊಳು ಸುಳಿದಾಡಿ ಮನದೊಳು ಮೂಡಿ ನಾಲಿಗೆ ಯೊಳು ನಲಿದಾಡುವ ಮೂಲಮಂತ್ರವಿದು. ನಾಸಿಕದೊಳು ನುಸುನು ಸುಳಿ ಮುಸುಮುಸುಳಿ ಮುತ್ತುವ ವಾಸನೆಯ ಆಸನವಿದು. ಲೀಲೆಯಿಂದ ನಾಲಿಗೆಯೊಳು ನಲಿನಲಿದು ನರ್ತಿಪ ರುಚಿಯ ನಿಚಯದೊಳು ನಿಂತಿರ್ದ ನಿಗಮಾಗಮ ಮೂರ್ತಿಯಿದು. ಭುವನವನೆ ವ್ಯಾಪಿಸಿದ ಬಯಲೊಳು ಬೆರೆದ ತ್ವಕ್ಕಿನ ತೆಕ್ಕೆಯೊಳು ಸಿಕ್ಕ ಸರ್ವಾಂತರ್ಯಾಮಿಯಿದು. ಭಕ ಥಾವವೆಂಬ ಭವನದೊಳು ನೆಲೆಗೊಂಡು ನಿಂತ ನವನೀತವಿದು ಶರ ಣನ ಸದುಹೃದಯವೆಂಬ ಸರಸಿಯೊಳು ತುಂಬಿ ತುಳುಕುವ ಕರುಣಾ ಮೃತದ ರಸದೊಳೋಲಾಡುವ ಓಂಕಾರವಿದು.

ಹೀಗೆ ಶಿವಾನುಭವವು ಶರಣಮ್ಮನವರ ಸನ್ನಿಧಿಯಲ್ಲಿ ಸದಾ ನಡೆಯುತ್ತಿರಲು ಸುಶೀಲೆಯು ಶಿವಾನುಭವ ಶ್ರವಣಕ್ಕೆ ಹೋಗದೆ ಇರ ಲಿಲ್ಲ. ಸತ್ಸಹವಾಸದಿಂದ ಆಚಾರವಿಚಾರಗಳ ವಿಮರ್ಶೆಯು ಓರಿ ಗೆಯ ಗೆಳತಿಯರಲ್ಲಿ ನಡೆಯಲು ಪ್ರಾರಂಭಿಸಿತು. ವೀರಶೈವಾಚಾರ ಕ್ರಿಯೆಗಳ ನಡೆನುಡಿಗಳ ಕಾರಣಾಂತರಗಳನ್ನು ಕೇಳಿಕೊಳ್ಳುವ ಕುತೂ ಹಲವು ಹೆಚ್ಚಾಯಿತು. ಅಂದು ಮಹಾಶಿವಯೋಗ. ಸುತ್ತಲಿನ ಹಳ್ಳಿಯ ಭಕ್ತಜನರ ಆಗಮನ, ಶರಣಮ್ಮನವರ ಸನ್ನಿಧಿ, ಆಚಾರವಂತರ ಆಗಮನ, ಶಿವಸ್ತೋತ್ರ, ಶಿವಕೀರ್ತನೆಗಳ ಶ್ರವಣ. ಇಷ್ಟಾದ ಬಳಿಕ ಪ್ರವ ಚನಗಳೂ ಜರಿಗಿಸಲ್ಪಟ್ಟವು. ಆ ಪ್ರವಚನಗಳ ಮಾಲೆಯಲ್ಲಿ ವೀರ ಶೈವ ಕ್ರಿಯಾಚಾರದ ವಿಷಯವೂ ವಿವರಿಸಲ್ಪಟ್ಟಿತು. ಸುಶೀಲೆಗೆ ಸದ್ಯಕ್ಕೆ ಬೇಕಾದ ವಿಷಯವೂ ಇದೇ ಆಗಿತ್ತು. ಇದನ್ನು ಏಕಾಗ್ರಚಿ ತ್ತದಿಂದ ಅವಳು ಕೇಳತೊಡಗಿದಳು.

ವೀರಶೈವರಿಗೆ ಆಚಾರಗಳ ಅವಶ್ಯಕತೆ ಏಕೆ? ಅಗಲದಿರುವ ಅಷ್ಟಾವರಣಗಳೇಕೆ? ಅವುಗಳ ಅಂತರ್ಯಗಳಲ್ಲೇನಿದೆ? ಎಂಬ ವಿಚಾ ರವನ್ನು ಆಬಾಲವೃದ್ಧರಿಗೆ ತಿಳಿಯುವಂತೆ, ಹೊಳೆಯುವಂತೆ, ಹೃದಯ ದಲ್ಲಿ ಉಳಿಯುವಂತೆ ನಡೆಯಿಸಲಾಯಿತು.

ನಮ್ಮ ಶರೀರವು ಆರೋಗ್ಯದಿಂದ ಇರಬೇಕಾದರೆ ಯೋಗ್ಯ ಆಹಾರವೂ ತಕ್ಕ ಕಾಯಕವೂ ಸಾಕಷ್ಟು ನಿದ್ರೆಯೂ ಬೇಕು. ಮುಂಜಾನೆ ನಾವೆಲ್ಲರೂ ಕೈಕಾಲು ಕಣ್ಣು ಮೂಗು ಬಾಯಿ ಹಲ್ಲು ಮುಂತಾದ ರಂಧ್ರಗಳ ಸ್ವಚ್ಛತೆಯನ್ನು ಚನ್ನಾಗಿ ಮಾಡುತ್ತೇವೆ. ಮೈದೊಳೆದುಕೊಂಡು ಮಡಿಯ ಬಟ್ಟೆಗಳನ್ನು ಉಟ್ಟುಕೊಂಡು ಯಥಾಮತಿ ಇಷ್ಟಲಿಂಗದ ಪೂಜೆಯನ್ನು ನಡೆಸಿ ಮುಂಜಾನೆ ೭ ಗಂಟೆಗೆ ಕಾಯಕಕ್ಕೆ ಕೈಮೊಡಗಿಸುತ್ತೇವೆ. ನಂತರ ೫-೬ ತಾಸಿನ ಮೇಲೆ ಊಟದ ಅಪೇಕ್ಷೆಯು ಆಗಹತ್ತುವದು. ಅಜಮಾಸು ೧೨ರಿಂದ ೧ ಗಂಟೆಯೊಳಗೆ ಊಟಮಾಡಿ ಕೆಲಹೊತ್ತು ವಿಶ್ರಾಂತಿಯನ್ನು ತೆಗೆದುಕೊಂಡು ಸಂಜೆಯ ೫ ಗಂಟೆಯ ವರೆಗೆ ಅಂದಿನ ಕಾಯಕವನ್ನು ಕಡೆಗಾಣಿಸಿ ಬಂದು ಸಂಜೆಯ ಊಟವನ್ನು ೮ ಗಂಟೆಯ ಒಳಗೆ ಮಾಡಿ ರಾತ್ರಿ ೧೦ ಗಂಟೆಯಿಂದ ಬೆಳಗಿನ ೪—೫ ಗಂಟೆಯ ವರೆಗೆ ನಿದ್ರೆ ಮಾಡುತ್ತೇವೆ. ಈ ೨೪ ತಾಸುಗಳ ಅವಧಿಯಲ್ಲಿ ಆತ್ಮನು ಬೆಳಗಿನ ಶರೀರ ಸ್ವಚ್ಛತೆಯಿಂದಾಗುವ ಆನಂದ, ಮಧ್ಯಾಹ್ನದ ಪ್ರಸಾದದ ಆನಂದ, ರಾತ್ರಿಯ ನಿದ್ರೆಯ ಆನಂದ ಇವುಗಳಲ್ಲಿ ಅಲೆದಾಡುವನು.

ಇದೇ ಅವಧಿಯಲ್ಲಿ ೨೧೬೦೦ ಉಸಿರುಗಳು ನಡೆಯುತ್ತವೆ.

ಹೃದಿ ಪ್ರಾಣೋ ಗುದೇ ಪಾನಃ ಸಮಾನೋ ನಾಭಿಮಂಡಲೇ
ಉದಾನಃ ಕಂಠದೇಶೇ ಸ್ಯಾತ್ ವ್ಯಾನಃ ಸರ್ವ ಶರೀರಗಃ

ವ್ಯಾನವಾಯು ಶರೀರದ ತುಂಬ ವ್ಯಾಪಿಸಿದೆ. ಅಪಾನವಾಯು ನಾಭಿಮಂಡಲದ ಕೆಳಗೆ ಗುದ ಪ್ರದೇಶದಲ್ಲಿದ್ದು ತನ್ನ ಶಕ್ತಿಯಿಂದ ಮಲವನ್ನು ಹೊರದೂಡುತ್ತದೆ. ಸಮಾನವಾಯು ನಾಭಿ ಪ್ರದೇಶದಲ್ಲಿದ್ದು ಸರ್ವ ಶರೀರಕ್ಕೂ ಅನ್ನ ನೀರನ್ನು ಹಂಚುತ್ತದೆ. ಹೃದಯಸ್ಥಾನದಿಂದ ಕಂಠ ಪ್ರದೇಶದ ವರೆಗೆ ಪ್ರಾಣವಾಯು ಪ್ರಾಣಧಾರಣದ ಕೆಲಸ ಕೈಕೊಂಡಿರುತ್ತದೆ. ಉದಾನವಾಯು ಕಂಠಪ್ರದೇಶದಲ್ಲಿದ್ದು ಸಪ್ತಸ್ವರಕ್ಕೂ ವಾಗ್ಜಾಲಕ್ಕೂ ಸಹಾಯ ಮಾಡುತ್ತದೆ. ಈ ಐದು ವಾಯುಗಳು ರಕ್ತಾಶಯಕ್ಕೆ ಘುಪ್ಪುಸದ್ವಾರಾ ಸಂಬಂಧಪಟ್ಟು ರಕ್ತವಾಹಿನಿಗಳಿಗೂ ಸಂಬಂಧಪಟ್ಟಿರುತ್ತವೆ.

ಗುದಪ್ರದೇಶದ ೨ ಜಘನಗಳೂ ನಾಸಿಕದ್ವಾರದ ೨ ಹೊರದಳಗಳೂ ಕೂಡಿ ೪ ದಳಗಳು. ಇವು ಆಧಾರಸ್ಥಾನಕ್ಕೆ ಸಂಬಂಧಿಸಿರುತ್ತವೆ. ಇದರಂತೆ ಷಟ್‌ಸ್ಥಲಗಳ ದಳಗಳು ೪, ೬, ೧೦, ೧೨, ೧೬, ೨ ಒಟ್ಟು ೫೦ ಆಗುವವು. ೫೦ ದಳದ ೨೪ ತಾಸಿನ ೨೧೬೦೦ ಉಸಿರುಗಳಲ್ಲಿ ೧ ದಳಕ್ಕೆ ೪೩೨ ಉಸಿರು ಆಗುವವು. (೪೩೨×೪) ಆಚಾರಲಿಂಗದ ಜಪಗಳು, (೪೩೨×೬) ಗುರುಲಿಂಗದ ಜಪಗಳು, (೪೩೨×೧೦) ಶಿವಲಿಂಗದ ಜಪಗಳು, ನಾವು ಮಾಡಿದರೂ ಮಾಡದಿದ್ದರೂ ಅವ್ಯಾಹತವಾಗಿ ನಡೆದೇ ಇರುತ್ತವೆ. ಪ್ರತಿಯೊಬ್ಬರು ಆಚಾರಲಿಂಗ ಗುರುಲಿಂಗಗಳ ಜಪವೇಳೆಗಳಲ್ಲಿ ಅಂದರೆ ಮುಂಜಾನೆ ೧೧ ಗಂಟೆಯೊಳಗೆ ಶಾರೀರಿಕ ಸ್ವಚ್ಛತೆಯನ್ನೂ ಸತ್ಕ್ರಿಯಾಕನನ್ನೂ ಮಾಡಲೇಬೇಕು. ಇದುವೇ ವೀರಶೈವರ ಇಷ್ಟಲಿಂಗದ ಪೂಜೆ.

೪೩೨೦ ಉಸಿರುಗಳೇ ಇಷ್ಟಲಿಂಗದ ಜಪಸಂಖ್ಯೆಯು. ಒಂದು ತಾಸಿನಲ್ಲಿ ೯೦೦ ಉಸಿರುಗಳಾಗುವವು. ಅಜಮಾಸು ಮುಂಜಾನೆ ೫ ತಾಸು ಅಂದರೆ ೧೧ ಗಂಟೆಯೊಳಗೆ ಇಷ್ಟಲಿಂಗದ ಪೂಜೆ ಮುಗಿದು ನಂತರ ಪ್ರಾಣಲಿಂಗದ ಪೂಜೆಗೆ ಆರಂಭವಾಗುವದು. ಇಷ್ಟಲಿಂಗದ ಪೂಜೆಯಲ್ಲಿ ಭೃತ್ಯಾಚಾರವು ಅಡಕವಾಗಿದೆ. ಸ್ವಂತ ಶರೀರದ ಭೃತ್ಯನಾಗಿ ಶಾರೀರಿಕ ಕಾರ್ಯಗಳು ಸುಸೂತ್ರವಾಗಿ ನಡೆಯುವಂತೆ ಹೇಗೆ ನೋಡಿಕೊಳ್ಳುವೆವೋ ಹಾಗೆಯೇ ವೀರಶೈವ ಸಮಾಜಪುರುಷನಿಗೆ ಪ್ರತಿಯೊಬ್ಬ ಭಕ್ತನು ಭೃತ್ಯಾಚಾರಿಯಾಗಲೇಬೇಕು. ತ್ರಿಕಾಲದ ಲಿಂಗಪೂಜೆಗಳಲ್ಲಿ ಮುಂಜಾನೆಯ ಪೂಜೆಯು ಎಲ್ಲಕ್ಕೂ ಹೆಚ್ಚಿನದು. ಸತ್ಕ್ರಿಯಾಕವು ಇಷ್ಟಲಿಂಗ ಪೂಜೆಯೊಳಗೇ ಗಣನೆಯು. ಮಧ್ಯಾಹ್ನದ ಪ್ರಾಣಲಿಂಗದ ಪೂಜೆಯೂ ಸಂಜೆಯ ಭಾವಲಿಂಗದ ಪೂಜೆಯೂ ಇಷ್ಟಲಿಂಗದ ಪೂಜೆಯನ್ನೇ ಅವಲಂಬಿಸಿವೆ.

ಶಿವಭಕ್ತನು ದಿನಾಲು ಮುಂಜಾನೆ ತನ್ನ ತನುಶುದ್ಧಿ ಮನಶುದ್ಧಿ ಭಾವಶುದ್ಧಿಗಳಿಂದ ಕಾಯಾಕಷ್ಟಮಾಡಿ ತಂದ ಕಾಯಕದಿಂದಲೇ ಜಂಗಮಾರಾಧನೆ ಮಾಡಿ ಜಂಗಮುಮುಖದಿಂದ ಪ್ರಾಣಲಿಂಗಕ್ಕೆ ಪಾದೋದಕ ಪ್ರಸಾದಗಳನ್ನು ಅರ್ಪಿಸಬೇಕಾಗಿದೆ. ಅಡಿಗೆ ಮಾಡುವ ಮಡದಿಯ ಮನೆ ಮೀಸಲು, ಮನ ಮೀಸಲು, ಕಣ್ಣು ಮೀಸಲು, ಕಾಲು

ಮೀಸಲು, ಜ್ಞಾನ ಮೀಸಲು, ಇರಲೇಬೇಕು. ಈ ಮೀಸಲು ಬೀಸರವೋಗದಿದ್ದರೆ ಕೂಡಿಕೊಂಡಿಪ್ಪ ಈಶನೆಂದು ಶಿವಶರಣರು ಹಾಡಿಕೊಂಡಿದ್ದಾರೆ.

ಮನುಷ್ಯನಿಗೆ ಮಧ್ಯಾಹ್ನಕ್ಕೆ ಊಟವು ಬೇಕೇಬೇಕು. ಭವಿಗಳಿದ್ದರೆ ಜೀವಧಾರಣ, ಭಕ್ತನಿದ್ದರೆ ಪ್ರಾಣಲಿಂಗಪೂಜೆ, ಪ್ರಾಣಲಿಂಗಾರ್ಪಿತ, ಪ್ರಾಣಲಿಂಗ ತೃಪ್ತಿ. ಈ ಪ್ರಾಣಲಿಂಗದ ಪೂಜೆಯಲ್ಲಿ ಅಷ್ಟಾವರಣ ಕ್ರಿಯೆಯೇ ಮಹತ್ವದ್ದು. ಇದು ಭವಿ (ವಿಷಯಿ)ಗಳಿಗೆ ತೀರ ಅರಿದು. ಈ ಕ್ರಿಯೆಯು ಭವಿಗಳ ಕಣ್ಣಿಗೆ ಎಂದೂ ಬೀಳುವದಿಲ್ಲ. ಈ ಅಷ್ಟಾವರಣ ಕ್ರಿಯೆಯನ್ನು ಸ್ಥೂಲದಲ್ಲಿ ಪಾದೋದಕ ಪ್ರಸಾದ ಪಡೆಯುವದಕ್ಕೂ ಸೂಕ್ಷ್ಮದಲ್ಲಿ ಒಕ್ಕುಮಿಕ್ಕು ಪ್ರಸಾದ ಪ್ರಸನ್ನತೆಗೂ ಪ್ರತಿಯೊಬ್ಬ ವೀರಶೈವ ಸದ್ಭಕ್ತನು ಅವ್ಯಾಹತವಾಗಿ ನಡಿಸಲೇಬೇಕು. ಅಂತೇ ವೀರಶೈವನಿಗೆ ಅಷ್ಟಾವರಣವು ಅಂಗವಾಗಿ ಪಂಚಾಚಾರಗಳು ಪ್ರಾಣವಾಗಿ ಏಕಲಿಂಗನೈಷ್ಠಿಕವಾಗಿರುವವು.

ಒಂದು ಮನೆಯಲ್ಲಿ ಪಡಸಾಲೆ ನಡುಮನೆ ದೇವರಮನೆ ಅಡಿಗೆಯ ಮನೆ ಬಚ್ಚಲಮನೆಗಳೆಂದು ೫ ಭಾಗಗಳು ಇರುವವೆಂದು ತಿಳಿಯುವಾ. ಶರೀರದ ಆರೈಕೆ, ಅನ್ನ, ಕಾಯಕಗಳಿಗೆ ಮನೆ ಬೇಕು. ಮುಂಜಾನೆ ಎದ್ದು ಎಲ್ಲ ಭಗಿನಿಯರು ಮನೆಯ ಎಲ್ಲ ಕೋಣೆಗಳ ಗೋಡೆ ಬಾಗಿಲು ಕಿಟಕಿಗಳ ಧೂಳುದೂಸು ಜಾಡಿಸಿ ನೆಲವನ್ನು ಉಡುಗುವರಷ್ಟೇ! ಮತ್ತು ಅಂಗಳ ಹಿತ್ತಲಗಳನ್ನು ಸ್ವಚ್ಛ ಮಾಡುವರು. ಅಂಗಳದಲ್ಲಿ ಉಪಯೋಗಿಸಿದ ಕಸಬರಿಗೆಯನ್ನು ಪಡಸಾಲೆಯಲ್ಲಿ ಉಪಯೋಗಿಸುವದಿಲ್ಲ. ಪಡಸಾಲೆಯಲ್ಲಿ ಉಪಯೋಗಿಸಿದ ಕಸಬರಿಗೆಯನ್ನು ದೇವರ ಮನೆಯಲ್ಲಿ ಉಪಯೋಗಿಸುವದಿಲ್ಲ. ಬಚ್ಚಲ ಮನೆಯ ಕಸಬರಿಗೆಯನ್ನು ಅಡಿಗೆಯ ಮನೆಗೆ ಉಪಯೋಗಿಸುವದಿಲ್ಲ. ಇದರ ಕಾರಣಗಳು ಎಲ್ಲರಿಗೆ ಸಹಜ ಹೊಳೆದಿರಬಹುದು. ಅಂಗಳದಲ್ಲಿ ಉಗುಳೋಣ ಸೀನೋಣವೂ ಪಡಸಾಲೆಯಲ್ಲಿ ಕಾಲುಜೋಡುಗಳೂ ಬಚ್ಚಲಲ್ಲಿ ಉಗುಳಿದ ಮತ್ತು ಕೈಕಾಲು ತೊಳೆದ ಹೊಲಸೂ ಇರುತ್ತವೆ. ಅದರಿಂದ ಆಯಾ ಭಾಗಗಳ ಆಚಾರದಲ್ಲಿ ಅನುಸರಿಸಿದ ಕೈಗಳನ್ನು ತೊಳಕೊಂಡೇ ಹೆಚ್ಚಿನ ಗೃಹದ ಕೆಲಸಕ್ಕೆ ಕೈಹಾಕಬೇಕಾದೀತು. ಇದನ್ನರಿತು ಹೊರಬಳಿಕೆ ಒಳಬಳಿಕೆಗಳಾಗಿವೆ. ಹೊರಗೆ ಅಡ್ಡಾಡಿ

ಬಂದರೆ ಕಾಲು ತೊಳೆದುಕೊಂಡೇ ಒಳಗೆ ಹೋಗುವ ಪರಿಪಾಠ ಬಿದ್ದಿದೆ. ಈಗಿನ ಸುಧಾರಕರು ಕೈದೊಳೆದುಕೊಳ್ಳದೆ ಒಳಬಳಿಕೆಯ ತಂಬಿಗೆ ಕೊಡಗಳನ್ನು ಮುಟ್ಟುವ ಸ್ವಚ್ಛಂದ ವೃತ್ತಿಗೆ ಬಿದ್ದಿರುವರು. ಶಿವನಿಗೆ ಸಲ್ಲತಕ್ಕ ಪ್ರಸಾದದ ಕ್ರಿಯೆಯೇ ಅಡಿಗೆಯ ಮನೆಯಲ್ಲಿ ಸಾಗುವದು. ಅಂದಬಳಿಕ ಒಲೆಸಾರಣೆ ನೆಲಸಾರಣೆ ಶಿವಪೂಜಾಗೃಹಸಾರಣೆಗಳು ಬೇಕಲ್ಲವೇ! ಪಾತ್ರೆ ಕಾಳು ಹಿಟ್ಟು ಪಲ್ಲೆಗಳು ಶುದ್ಧವಿರಬೇಕಲ್ಲವೇ? ಇವನ್ನೆಲ್ಲ ಸಿದ್ಧಶುದ್ಧ ಮಾಡಿಟ್ಟುಕೊಂಡು ಸ್ನಾನದಿಂದ ಶುಚಿರ್ಭೂತ ಳಾಗಿ ಪಾಕಂಗೆಯ್ಯಬೇಕಲ್ಲವೇ? ಅಡಿಗೆಗೆ ಮಡಿನೀರು ಬೇಕಲ್ಲವೇ? ಮಡಿನೀರು ಮಡಿಪಾತ್ರೆಯೊಳು ಹಾಕಿ ಕಾಯಕದ ಕಾಳನ್ನು ಕುದಿಯಲಿಟ್ಟು ಬುಡಕ್ಕೆ ಕಿಡಿದೇವತೆಯು ಪ್ರಜ್ವಲಿಸಲು ಎಡೆಗೆ ಕಡುಬೆಡಗಿನ ದೇಹಾರ ಸಿದ್ಧಗೊಳ್ಳುವದು. ಈ ದೇಹಾರದ ಕ್ರಿಯೆಯೇ ಅಷ್ಟಾವರಣ ಕ್ರಿಯೆಯು. ಇದಕ್ಕನುಕೂಲವಾದ ಎಲ್ಲ ನಡೆಯೇ ಆಚಾರಗಳು.

ಬಚ್ಚಲದ ಸ್ವಚ್ಛತೆಯು ಭೃತ್ಯಾಚಾರವು. ಸರ್ವ ಕೋಣೆಗಳ ಸ್ವಚ್ಛತೆಯು ಸದಾಚಾರವು. ಅಡಿಗೆಗೆ ತಕ್ಕ ಸಹಕಾರವೇ ಲಿಂಗಾಚಾರವು. ಅಡಿಗೆಗೆ ನೊಣಕಣಗಳು ಬಾರದಂತೆ ಮಾಡುವದೇ ಗಣಾಚಾರವು. ಗುರುಲಿಂಗಜಂಗಮದ ಎಡೆಗೆ (ಪ್ರಸಾದಕ್ಕೆ) ಅನುಕೂಲವಾದ ಆಚಾರವೇ ಶಿವಾಚಾರವು.

ಇವೆಲ್ಲ ಆಚಾರಗಳನ್ನು ಶರೀರಕ್ಕೂ ಮನಕ್ಕೂ ಮನೆಗೂ ಸಂಬಂಧಿಸಿ ಹೇಳುವದಾಯಿತು. ಶರೀರದ ಅಥವಾ ಮನೆಯ ಆಚಾರಗಳೇ ಸಮಾಜದಲ್ಲಿ ಬೇರೂರಿವೆ. ಶಿವಭಕ್ತರಿಂದಧಿಕರಿಲ್ಲ, ಎನಗಿಂತ ಕಿರಿಯರಿಲ್ಲ, ಎಂಬ ವಾಕ್ಯವು ಭೃತ್ಯಾಚಾರವನ್ನು ಬಿತ್ತರಿಸುವದು. ಆಚಾರವೇ ಸ್ವರ್ಗ, ಅನಾಚಾರವೇ ನರಕ, ಎಂಬ ವಾಕ್ಯವು ಆಚಾರಗಳ ಮಹತ್ವವನ್ನು ಒತ್ತಿ ಹೇಳುವದು. ಆಚಾರಃ ಪ್ರಥಮೋಧರ್ಮಃ ಎಂಬ ವಾಕ್ಯವು ಧರ್ಮದ ಆದಿಯನ್ನು ಅಚ್ಚೊತ್ತುವದು. ಸದಾಚಾರವು ಸರ್ವಮಾನವರಿಗೂ ಬೇಕು. ಸದಾಚಾರವನ್ನು ಅನುಸರಿಸಿದ ಎಲ್ಲ ರಾಷ್ಟ್ರಗಳೂ ಶಾಂತರೀತಿಯಿಂದ ಬಾಳುತ್ತವೆ. ಇದರಿಂದ ಲೌಕಿಕ ಪಾರಮಾರ್ಥಿಕ ಸುಖಸಾಧನಕ್ಕೆ ಅನುಕೂಲವಾಗುತ್ತದೆ. ಲಿಂಗಾಚಾರದಿಂದ ಲಿಂಗಾನುಭಾವವು ಬೆಳೆಯುತ್ತದೆ. ಗಣಾಚಾರದಿಂದ ಮತಾ

ಭಿಮಾನವು ಕಂಡುಬರುತ್ತದೆ. ಶಿವಾಚಾರದಿಂದ ಸತ್ಕ್ರಿಯೆಯು ಸಾಗಿ ಲಿಂಗಾಂಗ ಸಾಮರಸ್ಯಜ್ಞಾನವಾಗಿ ಅಜ್ಞಾನಾನಂದದೊಳು ತಾನೇ ತಾನಾಗುವನು. ಅಂತೇ ಆಚಾರವಂತರು ಬಹಿರಂಗದ ಕ್ರಿಯಾಷ್ಟಾವರಣಗಳನ್ನು ಅವ್ಯಾಹತವಾಗಿ ಸಾಗಿಸಿ ಜ್ಞಾನಾಷ್ಟಾವರಣಗಳನ್ನೂ ಐಕ್ಯಾಷ್ಟಾವರಣಗಳನ್ನೂ ಅನುಭವಿಸುವರು.

ಅಂದಿನ ಶಿವಾನುಭವ ಪ್ರವಚನವು ಸುಶೀಲೆಗೆ ಬಲು ಸೊಗಸೆನಿಸಿತು. ಭೃತ್ಯಾಚಾರದಿಂದ ಭಕ್ತಿಯೂ ಸದಾಚಾರದಿಂದ ಸದ್ಧರ್ಮ ಸನ್ನೀತಿ, ಸನ್ಮಾರ್ಗ, ಸದಿಚ್ಛೆ, ಸದ್ವಾಸನೆ, ಸಚ್ಛೀಲ, ಸದ್ವರ್ತನೆಗಳೂ ಲಿಂಗಾಚಾರದಿಂದ ಲಿಂಗನಿಷ್ಠೆಯೂ, ಲಿಂಗಪ್ರೇಮವೂ, ದೈವೀ ಸಂಪತ್ತೂ, ಗಣಾಚಾರದಿಂದ ಸದ್ಗುಣಗಳ ಗಟ್ಟಿಯೂ ಶಿವಾಚಾರದಿಂದ ಶಿವಯೋಗ ದೃಷ್ಟಿಯೂ ದೃಢವಾಗಿ ತನುವ ತಾಗಿ ಮನವನಿಂಬುಗೊಂಡು ಭಾವದೊಳು ಬಿಂಬಿಸಿದವು.

ಹಾಗೆಯೇ ಸುಶೀಲೆಯು ಶರಣಮ್ಮನವರ ಸಂಗದಿಂದಲೂ 'ಶಿವಾನುಭವ ಶಬ್ದಕೋಶ' ಗ್ರಂಥದ ಸಹಾಯದಿಂದಲೂ, ಅಕ್ಕಮಹಾದೇವಿಯ ವಚನಾನುಭವಗಳಿಂದಲೂ, ವಿಷಯಸುಖಾನಂದವು ಅಸ್ಥಿರವೆಂದು ಮನಗಂಡಳು. ಸಂಗನಬಸವಣ್ಣನವರ ವಚನಗಳಿಂದ ದೀಕ್ಷೆಗಳ ದಿಶೆಗಳನ್ನು ಕಂಡು ಕ್ರಿಯಾಚಾರಗಳನ್ನು ಅರಿದು ಆಚರಿಸಿ ಏಕೋತ್ತರ ಶತಸ್ಥಲದಿಂದ ಷಟ್‌ಸ್ಥಲಾಂತರ್ಗತ ನೂರೊಂದು ಸ್ಥಲಗಳ ಲಿಂಗಾಂಗ ಸಾಮರಸ್ಯ ಜ್ಞಾನಾನಂದವನ್ನು ಹೊಂದುವವಳಾದಳು.

---

# ಶರಣರ ಇಷ್ಟಲಿಂಗ.

(ಲೇಖಕ:— ಶಿವಪ್ಪ ಗುರುಶಿದ್ದಪ್ಪ ಉಮದಿ, ಹುಬ್ಬಳ್ಳಿ)

ಶ್ರೀಮದ್ಬಸವಾದಿ ಶರಣರು ಎಷ್ಟೋ ಕಾರ್ಯಗಳನ್ನು ಮಾಡಿ ತಮ್ಮ ಅನುಭವಕ್ಕೆ ಅಳವಟ್ಟಿದ್ದನ್ನೇ ವಚನರೂಪಗಳಿಂದ ಹೊರಹೊಮ್ಮಿದ್ದಾರೆ. ಆ ವಚನಗಳನ್ನೇ ರಾ। ಬ। ಹಳಕಟ್ಟಿಯವರು ಶ್ರಮಪಟ್ಟು ಬಯಲಿಗೆ ತಂದು ಉಪಕಾರವನ್ನು ಮಾಡಿದ್ದಾರೆ. ವಚನಗಳು ಬಯಲಿಗೆ ಬಂದದರಿಂದಲೇ ಸಮಾಜದಲ್ಲಿ ವಿಚಾರಕ್ರಾಂತಿಯಾಗಿ ಮೂಢ ನಂಬಿಗೆಯು ಎಷ್ಟೋ ಕಡಿಮೆ ಆಗಿರುತ್ತದೆ.

ಇತ್ತಿತ್ತಲಾಗಿ ಶಿವಾನುಭವ ಪತ್ರಿಕೆಯಲ್ಲಿ ಶಿವಶರಣರ ಚರಿತ್ರೆಗಳು ಪ್ರಕಟವಾಗಲಿಕ್ಕೆ ಹತ್ತಿರುತ್ತವೆ. ಅವರ ಚರಿತ್ರೆಗಳಿಂದ ನೋಡಲಾಗಿ ಅವರಲ್ಲಿ ಕೆಲವರು ತಮ್ಮ ಇಷ್ಟಲಿಂಗದಲ್ಲಿಯೇ ಭಕ್ತಿಯನ್ನು ಇಟ್ಟು ನಡೆದುಕೊಂಡವರು ಇರುತ್ತಾರೆ. ಉಳಿದವರು ಸ್ಥಾವರಲಿಂಗಗಳಲ್ಲಿ ಭಕ್ತಿಯನ್ನು ಇಟ್ಟು ಸ್ಥಾವರಲಿಂಗಗಳಲ್ಲಿಯೇ ತಮ್ಮ ಮೇಲುತರಗತಿಯನ್ನು ಹೊಂದಿದ್ದು ಕಂಡುಬರುತ್ತದೆ. ಅದು ಅಲ್ಲದೆ ಸಂಪುಟ ೨೦ ಸಂಚಿಕೆ ೪ರ ಶಿವಾನುಭವದಲ್ಲಿ ಸ್ಫುಟವಿಚಾರಗಳಲ್ಲಿ ಶ್ರೀಶೈಲ ಸಂಸ್ಥಾನದ ಶ್ರೀಮನ್ನಿಡುಮಾಮಿಡಿ ಮಠದ ಸ್ವಾಮಿಗಳು ಇಷ್ಟಲಿಂಗದ ಬಗ್ಗೆ ಅಭಿಪ್ರಾಯಪಟ್ಟಿರುವದೇನಂದರೆ— "ಬಸವಾದಿ ಪ್ರಮಥರು ಸ್ಥಾವರಲಿಂಗವನ್ನು ಒಪ್ಪಿರುವದರಿಂದ ಅದನ್ನು ಅಲ್ಲಗಳೆಯಲು ಬರಲಾರದು." "ಇಷ್ಟಲಿಂಗವು ಸ್ಥಾವರವೆಂದೇ" ಶಿವಶರಣರ ವಾದ. (ಇದು ಜಂಗಮ ದೃಷ್ಟಿಯಿಂದ) "ಹುರಳಿಲ್ಲ ಹುರಳಿಲ್ಲ ಲಿಂಗಾರ್ಚನೆ" ಇತ್ಯಾದಿ ಕೆಲವು ವಚನಗಳು ಇದನ್ನು ಪುಷ್ಟೀಕರಿಸುತ್ತವೆ. ............... "ಇಷ್ಟಲಿಂಗ" ಇದರ ಅರ್ಥ 'ತನಗೆ ಇಷ್ಟವಾದ ದೇವ' ಎಂಬುದೆ ಸಹಜಾರ್ಥ. ಶಾಸ್ತ್ರಗಳ ರೀತಿಯಲ್ಲಿ 'ಇಷ್ಟವಾದುದನ್ನು ಕೊಡುವ ಲಿಂಗ'ವೆಂದರೂ ಸರಿಯೇ. ಹೀಗೆ ತಮ್ಮ ಅಭಿಪ್ರಾಯವನ್ನು ಬರೆದಿರುತ್ತಾರೆ. ಆದರೆ ಈ ವಿಷಯವಾಗಿ ನಾನು ಶಿವಶರಣರ ವಚನಗಳನ್ನೇ ಆಧಾರವಾಗಿಟ್ಟುಕೊಂಡು ಕೆಳಗಿನ ವಿಷಯಗಳನ್ನು ಬರೆದಿದ್ದೇನೆ.

(೧) 'ಇಷ್ಟಿ' ಅಂದರೆ ಪೂಜೆ. ಪೂಜೆಗೆ ಅರ್ಹವಾದ ಲಿಂಗವು ಇಷ್ಟಲಿಂಗವು. ಮನದಿಷ್ಟವನ್ನು ನೀಡಲೂ ಪಡೆಯಲೂ ಸಾಧನವಿದ್ದುದರಿಂದ ಅದು ಇಷ್ಟಲಿಂಗವೆನಿಸಿತು. ಶಿವಶರಣರು ತಮ್ಮ ವಚನಗಳಲ್ಲಿ ಲಿಂಗವ ಮುಟ್ಟಿದ ಕೈಮೀಸಲು ಎಂದು ಹೇಳಿದ್ದಾರೆ. ಕಾರಣ ಈ ಕೈಯಿಂದ ಅನಿಷ್ಟವು ಆಗಬಾರದೆಂದೇ ಶಿವಶರಣರ ವಿಚಾರ. ಅನಿಷ್ಟದೊಡನೆ ಹೊರಾಟವೇ ಇಷ್ಟಲಿಂಗದ ಪೂಜೆ. ಆ ಅನಿಷ್ಟವು ಹೊರಗಿರಲಿ, ಒಳಗಿರಲಿ, ಮಠದಲ್ಲಿ ಇರಲಿ, ಮನೆಯಲ್ಲಿ ಇರಲಿ, ಮನದೊಳಗೆ ಇರಲಿ, ಅದೆಲ್ಲವೂ ಅನಿಷ್ಟವೇ. ಅನಿಷ್ಟವು ವೈಯಕ್ತಿಕವಾಗಿರಲಿ, ಸಾಮಾಜಿಕವಾಗಿರಲಿ ಎಲ್ಲವೂ ಅನಿಷ್ಟವೇ? ಇಂತಹ ಅನಿಷ್ಟವಳಿದು ಇಷ್ಟವು (ಕಲ್ಯಾಣ) ಉಳಿಯಬೇಕು; ಇದುವೆ ಇಷ್ಟಲಿಂಗ ಪೂಜೆ. ಅಂಗದ ಮೇಲೆ ಧರಿಸುವ ಇಷ್ಟಲಿಂಗವು ಪೂಜೆಗೆ ಅರ್ಹವಾದದ್ದು ಇರುತ್ತದೆ. ಇಷ್ಟಲಿಂಗವನ್ನು ಧರಿಸಿ ಪೂಜೆಯನ್ನು ಮಾಡಿದರೆ ತೀರಲಿಲ್ಲ. ಅದಕ್ಕೆ ತಕ್ಕ ನೀತಿ ನಡಾವಳಿಗಳು ಇಲ್ಲದಿದ್ದರೆ ಶರಣರು ಒಪ್ಪುವದಿಲ್ಲ. ಅಂತೆಯೇ ಬಸವಂಣನವರು "........ಲಾಂಛನಕ್ಕೆ ತಕ್ಕ ಆಚಾರವಿಲ್ಲದಿದ್ದರೆ ನೀ ಸಾಕ್ಷಿಯಾಗಿ ಛೀ ಎಂಬೆ ಕೂಡಲಸಂಗಮದೇವಾ" (ಲಿಂಗವಾದರೂ ಲಾಂಛನವೇ. ವಚನದಲ್ಲಿ ಲಿಂಗಲಾಂಛನಧಾರಿಯಾಗಿ ಎಂದು ಬಂದದೆ) ಎಂದು ಅಂದಿದ್ದಾರೆ. ಬರೇ ಭಕ್ತಿಯನ್ನು ಮಾಡಿದರೆ ಒಪ್ಪುವವರು ಅಲ್ಲ. ಸದಾಚಾರ ಸದ್ಭಕ್ತಿ ಇಲ್ಲದವರ ಆರಾಧನೆ ದಂಡ ಅಂತ ಹೇಳಿದ್ದಾರೆ.

(೨) ಶಿವಭಕ್ತನು ಇಷ್ಟಲಿಂಗವನ್ನು ಧರಿಸಿದ ಮೇಲೆ ಸ್ಥಾವರ ಲಿಂಗಗಳಿಗೆ ಭಕ್ತಿಭಾವದಿಂದ ನಡೆದುಕೊಳ್ಳಬೇಕೋ ಬೇಡವೋ ಎಂಬುದನ್ನು ನೋಡೋಣ. ಲಿಂಗಾಯತ, ಲಿಂಗವಂತ, ಲಿಂಗಾಂಗಿ ಎಂಬ ಶಬ್ದಗಳು ಶರಣನು ಸದಾ ಲಿಂಗವನ್ನು ಕೂಡಿದವನೆಂದು ಸೂಚಿಸುತ್ತವೆ. ಸ್ಥಾವರಲಿಂಗಪೂಜೆಯು ಶರಣನಿಗೆ ವರ್ಜ. ಯಾಕಂದರೆ ಅದು ಸಕಾಮ ಭಕ್ತಿಗೆ ಕಾರಣವಾದುದು. ಇಷ್ಟಲಿಂಗವು ಪಾಷಾಣವಲ್ಲ. ಅದು ತನ್ನ ಕಳೆಯ ಸಾಕಾರವು. ಶಿಷ್ಯನ ಸ್ವವಿಮರ್ಶಶಕ್ತಿಯೇ ಚಿತ್ತಶಕ್ತಿಯಂದರುಹಿ ಅದನ್ನು ಕಲ್ಲಲ್ಲಿಟ್ಟು ಕಳೆಯಾಗಿ ತೋರುವಾತನೇ ಗುರು. ಶಿಷ್ಯನ ಭಾವದ ಮರೆಯ ಬೆಳಕನ್ನು ಗುರುವು ಕ್ರಿಯಾ ಮಥನದ್ವಾರಾ ಹೊರಗೆಡಿವಿ ನಿನ್ನಂತರಂಗದ ನಿಜವೇ ಇದೆಂದು ಅರುಹಿ

ಕರದಲ್ಲಿ ಇರಿಸುವನು. ಗುರು ಮತ್ತು ಶಿಷ್ಯನ ಬೆಂಬಳಿಯಲ್ಲಿ ಹುಟ್ಟಿದ ಇಂಥ ಲಿಂಗಕ್ಕೆ ಶರಣನ ಕರವೇ ಪೀಠ. ಅಂಗಳ ಪೀಠವಾದ ಲಿಂಗವನ್ನು ಶರಣನು ಪೂಜಿಸನು. ಯಾಕಂದರೆ ವಿಶ್ವವ್ಯಾಪಿಯಾದ ಆ ಪರಮಾತ್ಮನ ಶಕ್ತಿಯು ಶರಣನ ಪಿಂಡದಲ್ಲಿಯೇ ಇದ್ದು ಕರದಲ್ಲಿ ಸಣ್ಣಾಗಿ ಬಿಡುವದು. ಇದಕ್ಕೆ ಶ್ರೀ ಬಸವಂಣನವರು ''ಜಗದಗಲ ಮುಗಿಲಗಲ ನಿಮ್ಮಗಲ ಪಾತಾಳದಿಂದತ್ತತ್ತ ನಿಮ್ಮ ಶ್ರೀ ಚರಣ. ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀ ಮುಕುಟ. ಅಪ್ರಮಾಣ ಅಗೋಚರ ಅಪ್ರತಿಮ ಲಿಂಗವೇ ನೀವೆನ್ನ ಕರಸ್ಥಲದಲ್ಲಿ ಚುಳುಕಾದಿರಯ್ಯ." ಎಂದು ತಮ್ಮ ಅಂಗೈಯೊಳಗಿನ ಇಷ್ಟಲಿಂಗಕ್ಕೆ ಸಂಬೋಧಿಸಿದ್ದಾರೆ. ಮತ್ತು ವಚನ ''ಸದ್ಭಕ್ತರಾದವರು ಸ್ಥಾವರಲಿಂಗವಂ ಭಜನೆಯ ಮಾಡಲಾಗದು. ಮನದಲ್ಲಿ ಸ್ಥಾವರ ಘನವೆಂದು ನೆನೆಯಲಾಗದು. ಅದೇನು ಕಾರಣವೆಂದಡೆ ಆದಿ ಅನಾದಿಯಿಂದತ್ತತ್ತವಾದ ಮಹಾಘನವಸ್ತುವನ್ನು ಶ್ರೀ ಗುರುಸ್ವಾಮಿ ಭೇದಿಸಿ ತಂದು, ಕೈಯಲ್ಲಿ ಇಷ್ಟಲಿಂಗವೆನಿಸಿ ಕರಸ್ಥಳಕೆ ಕೊಟ್ಟ ಬಳಿಕ ಆ ಲಿಂಗದಲ್ಲಿ ಕ್ಷೇತ್ರಗಳುಂಟೆಂದು ಭಾವಿಸಿ ಮುಕ್ತಿಯ ಪಡಿಯಲರಿಯದೆ ಖಂಡಿತ ಬುದ್ಧಿಯಿಂದೆ ಬೇರೆ ಮುಕ್ತಿಯ ಪಡೆವೆನೆಂದು ಕಂಡ ಕಂಡ ತೀರ್ಥಕ್ಷೇತ್ರಂಗಳಿಗೆಡೆಯಾಗಿ ತೊಳಲಿ ಬಳಲುವ ಭ್ರಷ್ಟ ಭವಿಗಳಿಗೆ ನರಕವೇ ಪ್ರಾಪ್ತಿಯುಯ್ಯಾ ಅಖಂಡೇಶ್ವರ" ಮತ್ತು ಅಕ್ಕಮಹಾದೇವಿಯು ''......ಇಷ್ಟಲಿಂಗವಿದ್ದಂತೆ ಸ್ಥಾವರಲಿಂಗಕ್ಕೆ ಶರಣೆಂದಡೆ ತಡೆಯದೆ ಹುಟ್ಟಿಸುವ ಶ್ವಾನನ ಗರ್ಭದಲ್ಲಿ...ಗುರು ಕೊಟ್ಟ ಇಷ್ಟಲಿಂಗದಲ್ಲಿಯೇ ಎಲ್ಲ ತೀರ್ಥಂಗಳು ಎಲ್ಲ ಕ್ಷೇತ್ರಂಗಳು ಇದ್ದಾವೆಂದು ಭಾವಿಸಿ ಮುಕ್ತರಪ್ಪುದಯ್ಯಾ......" ಹೀಗೆ ಶರಣರು ನುಡಿದಿದ್ದಾರೆ. ಮತ್ತು ಶರಣಸತಿ ಲಿಂಗಪತಿಯೆಂಬ ಬಗ್ಗೆ ತೋಂಟದ ಶಿದ್ದಲಿಂಗಯತಿಗಳು ಹೀಗೆ ಹೇಳಿದ್ದಾರೆ. "ಶ್ರೀಗುರು ಶಿವನ ಗಣಂಗಳ ಮಧ್ಯದಲ್ಲಿ ಎನಗೆ ಉಪದೇಶಿಸುವಲ್ಲಿ ಪರಮೇಶ್ವರನ ಪಂಚಮುಖವನೇ ಪಂಚಕಲಶವಾಗಿ ಮೂರ್ತಿಗೊಳಿಸಿ ಗಣಂಗಳ ಸಾಕ್ಷಿಯಾಗಿ ಕರಸ್ಥಲಕೆ ಶಿವಲಿಂಗವ ಕೊಟ್ಟು ಈ ಲಿಂಗವೇ ಗಂಡ ನೀನೇ ಹೆಂಡತಿ ಎಂದು ಹೇಳಿ ಲಲಾಟದಲ್ಲಿ ವಿಭೂತಿಯ ಪಟ್ಟವಂ ಕಟ್ಟಿ ಹಸ್ತದಲ್ಲಿ ಕಂಕಣವ ಕಟ್ಟಿ ಪಾದೋದಕ ಪ್ರಸಾದವನಿತ್ತು ಎಂದೆಂದಿಗೂ ಸತಿಪತಿ ಭಾವ ತಪ್ಪದೇ ಇರಲಿ ಎಂದು ನಿರೂಪಿಸಿದನಯ್ಯ ಶ್ರೀಗುರು. ಆ ನಿರೂಪವ ಮಹಾ

ಪ್ರಸಾದವೆಂದು ಕೈಕೊಂಡೆನಯ್ಯ. ಇದುಕಾರಣ ಪತಿಯಲ್ಲದೆ ಅನ್ಯವ ನರಿಯೆನಯ್ಯಾ ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೆ." ಈ ವಚನಲ್ಲಿ ಲಿಂಗವೇ ಗಂಡ ಶರಣನೇ ಹೆಂಡತಿ ಎಂದು ಹೇಳಿ ಲಿಂಗ ಪತಿಯನ್ನಲ್ಲದೆ ಅನ್ಯವನ್ನು ಅರಿಯೆನು ಎಂದು ಸ್ಪಷ್ಟವಾಗಿ ಹೇಳಿ ಲಿಂಗ ಪಾತಿವ್ರತ್ಯವನ್ನು ಕಾಯಲಿಕ್ಕೇಬೇಕೆಂದು ನುಡಿದಿದ್ದಾರೆ. ಮತ್ತು ಚನ್ನ ಬಸವಣ್ಣನವರು ಅಂದದ್ದು "ಪತಿವ್ರತೆಯಾದಡೆ ಅನ್ಯ ಪುರುಷರ ಸಂಗ ವೇತಕಯ್ಯ? ಲಿಂಗಸಂಗಿಯಾದಡೆ ಅನ್ಯ ದೈವದ ಸಂಗವೇತಕ್ಕಯ್ಯ? ಇದು ಹೇಗೆ ಕಂಡ ಕಂಡವರ ಹಿಂದೆ ಹರಿವ ಚಾಂಡಾಲಗಿತ್ತಿಯಂತೆ, ಒಬ್ಬನ ಕೈವಿಡಿದು, ಒಬ್ಬಗೆ ಮಾತುಕೊಟ್ಟು, ಒಬ್ಬಗೆ ಸನ್ನೆಯ ಮಾಡಿ ಮತ್ತೊಬ್ಬನ ಸಂಗವ ಮಾಡುವ ಹಾದರಗಿತ್ತಿಯಂತೆ ಪ್ರಾಣಲಿಂಗ ವಿದ್ದಂತೆ ಸ್ಥಾವರಲಿಂಗಕ್ಕೆ ಹರಿಸಿ ಪೊಡಮಡುವ ಕೋಟಲೆ ಏತಕೋ? ......" ಎಂದು ನುಡಿದಿದ್ದಾರೆ. ಈ ಎಲ್ಲ ವಚನಗಳನ್ನು ನೋಡ ಲಾಗಿ ಲಿಂಗವಂತರು ಶರಣರ ವಚನಶಾಸ್ತ್ರವನ್ನೆಲ್ಲ ಆಧಾರವಾಗಿಟ್ಟು ಕೊಂಡು ನಡೆಯುವವರು ಗುರು ಕೊಟ್ಟ ಇಷ್ಟಲಿಂಗವಿರುತಿರಲು ಸ್ಥಾವರ ಲಿಂಗಕ್ಕೆ ನಡೆದುಕೊಳ್ಳಬಾರದೆಂದೇ ಸ್ಪಷ್ಟವಾಗುತ್ತದೆ. ಮತ್ತು ಗುರು ಕೊಟ್ಟ ಲಿಂಗಕ್ಕೆ ಇಷ್ಟಲಿಂಗವೆಂದೇ ಅಂದಿದ್ದಾರೆ.

ಕೆಲವು ಶಿವಶರಣರು ಮೊದಲಿಗೆ ಸ್ಥಾವರಲಿಂಗಕ್ಕೆ ನಡೆದುಕೊಂಡು ಮುಂದೆ ಶಿವಾನುಭವ ಚರ್ಚೆಯಲ್ಲಿ ಒಂದು ಸ್ಥಿತಿಗೆ ಬಂದು ಅದನ್ನೇ ತಮ್ಮ ವಚನ ರೂಪದಲ್ಲಿ ಹೊರಗೆಡಿವಿದಂತೆ ತೋರುತ್ತದೆ. ಅಗ್ಗೆ ಪ್ರಮುಖರಾದ ಬಸವ, ಚನ್ನಬಸವ, ಅಲ್ಲಮಪ್ರಭು, ಮಡಿವಾಳಮಾಚಿ ದೇವ, ಅಕ್ಕಮಹಾದೇವಿ ಮುಂತಾದವರು ಎಲ್ಲಿಯೂ ಲಿಂಗವಂತರಿಗೆ ಸ್ಥಾವರ ಲಿಂಗಗಳಿಗೆ ನಡಕೊಳ್ಳಲಿಕ್ಕೆ ಹೇಳಿಲ್ಲ. ಅನಂತರ ಆಗಿ ಹೋದ ಶ್ರೀತೋಂಟದ ಸಿದ್ದಲಿಂಗಯತಿಗಳು, ಷಣ್ಮುಖಸ್ವಾಮಿಗಳು ಸ್ವತಂತ್ರ ಸಿದ್ಧಲಿಂಗೇಶ್ವರರು, ವೈಲಾರ ಬಸಪ್ಪನವರು, ಮುಳುಗುಂದ ಮಹಾಂತ ಸ್ವಾಮಿಗಳು ಮುಂತಾದವರು ಸಹ ಸ್ಥಾವರಲಿಂಗಗಳಿಗೆ ನಡಕೊಳ್ಳ ಲಿಕ್ಕೆ ಹೇಳಿಲ್ಲ. ಸ್ಥಾವರಲಿಂಗಗಳ ಗುಡಿಗಳಲ್ಲಿ ಪೂಜಾರಿಗಳು ವೀರಶೈವ ರಿರುವದರಿಂದ ಲಿಂಗವಂತರು ಸ್ಥಾವರಲಿಂಗಗಳಿಗೆ ನಡೆದುಕೊಳ್ಳಬೇಕು ಎಂದು ನಮಗೆ ತೋರುವದಿಲ್ಲ. ಯಾಕಂದರೆ ಪೂಜಾರಿಗಳಷ್ಟೇ ಅಲ್ಲ

ಸಮಾಜದಲ್ಲಿ ಬಹಳೇ ಜನರು ಲಿಂಗವನ್ನು ಕಟ್ಟಿಕೊಂಡು ಸ್ಥಾವರಕ್ಕೆ ನಡೆದುಕೊಳ್ಳುವದು ಪ್ರತ್ಯಕ್ಷ ಕಾಣಿಸುತ್ತದೆ. ಹೀಗೆ ಇರುವದರಿಂದ ಶರಣರ ತತ್ವವೇ ಹಾಗೆಂದು ಹೇಳಲಿಕ್ಕೆ ಬರುವದಿಲ್ಲ. ಕೆಲವು ಜನರು ಮಾತ್ರ ಶರಣರ ತತ್ವವನ್ನು ಆಚರಣೆಯಲ್ಲಿ ತಂದಿದ್ದಾರೆ. ಪತ್ರಿಕೆಗಳೂ, ಶಿವಾನುಭವ ಸಂಘಗಳೂ ಶಿವಾನುಭವಿಗಳೂ ಪ್ರಯತ್ನಪಟ್ಟು ಪ್ರಚಾರ ಮಾಡಿದರೆ ಮಾತ್ರ ಜನಜಾಗ್ರತೆಯಾಗುತ್ತದೆ.

---

## ಸಂದರ್ಶನ.

(ವಚನ)

"ಕಟ್ಟಿಯ ಬಸವೇಶ್ವರ."

ತನುವ ಪೂಜಿಸಿ ಗುರುವ ಕಂಡೆ. ಮನವ ಪೂಜಿಸಿ ಲಿಂಗವ ಕಂಡೆ ಧನವ ಪೂಜಿಸಿ ಜಂಗಮುವ ಕಂಡೆ. ಗುರು ಲಿಂಗಜಂಗಮುಗಳ ಪೂಜಿಸಿ ಭಕ್ತನ ಕಂಡೆ. ಭಕ್ತನ ಪೂಜಿಸಿ ಬಸವಲಿಂಗಪ್ರಿಯ ಕಟ್ಟಿಯ ಬಸವೇಶ್ವರನ ಕಂಡೆ.

---

### ವಚನ ೧.

"ಘಟ ಪಟ ಮಠ ಮನೆಗಳಾಶೆಯಿಂದ, ಬರೆಕುಟಿಲ ಕುಹಕದ ಮಟಮಟ ಸಟೆ ಮನವಲ್ಲದೆ ದಿಟಮನವೆಲ್ಲಿಹುದುಹೇಳಾ? "ನೋಡಿ ಬಲ್ಲವರು ಸುಖಭೋಗದಳಿಯಾಶೆಯೊಡಗೂಡಿ ಕೆಡದಿರಿ." ಎಂದಾದ್ಯರ ವಚನ ಮುಂಟಾಗಿ, ಬಿಡುಬಿಡು ಹುಸಿ ಘಟ ಪಟ, ಮಠ ಮನೆ ಭೋಗದಳಿಯಾಶೆಯ ಮರುಳೆ. ಹಿಡಿ ಮಂಗಲಮೂರ್ತಿ ಎಮ್ಮಾರಾಧ್ಯ ಚಿಲ್ಲಿಂಗಮೂರ್ತಿಯ ನೆನಹು, ನುತಿ, ಪೂಜೆಯ, ಮನ, ಮಾತು, ಮೈಗಳಿಂದ, ಕೇಡಿಲ್ಲದ ಸುಖವಪ್ಪುದು ತಪ್ಪದು ನಿನಗೆ ಮರುಳೆ.

---

ಈ ಪ್ರಕಾರ ಕಳಾವತಿಯು ತನ್ನ ಮನಸ್ಸಿನಲ್ಲಿ ಧೈರ್ಯವನ್ನು ತಂದುಕೊಂಡು ತನ್ನ ಪತಿಯು ಗಣಪರ್ವಕ್ಕೋಸ್ಕರ ಹೋಗುವ ಕಾಲದಲ್ಲಿ ಅವನು ಕೊಟ್ಟ ಸಲಹೆಗಳಂತೆ ಮಂತ್ರಿಗಳೊಡನೆ ರಾಜ್ಯಭಾರ ನಡಿಸಹತ್ತಿದಳು. ಹೀಗೆ ಆರು ತಿಂಗಳುಗಳು ಕಳೆದುಹೋದವು.

ಈ ಅವಧಿಯು ಮುಗಿದ ತರುವಾಯ ಅರಸನು ಅಂಬುಧಾರಾ–ರಾಮನಾಥನ ದೇವಾಲಯದಿಂದ ರಾಜಧಾನಿಗೆ ಬರಲು ಉದ್ಯುಕ್ತನಾದನು. ಈ ಸುದ್ದಿಯನ್ನು ಜೈನರು ಕೇಳಿ ಅವರು ತಮ್ಮ ಋಷಿಗಳನ್ನು ಕೂಡಿಕೊಂಡು ಅರಸನನ್ನು ಕಾಣಬೇಕೆಂದು ದೇವಸ್ಥಾನಕ್ಕೆ ಬಂದರು. ಆಗ ಅರಸನು ತನ್ನ ೩೦೦ ಜನ ಭಕ್ತರೊಂದಿಗೆ ಒಂದು ವಿಶಾಲವಾದ ವಟ ವೃಕ್ಷದಡಿಯಲ್ಲಿ ದೇವಾಲಯದ ಬಳಿಯಲ್ಲಿಯೇ ಕುಳಿತುಕೊಂಡು ಶಿವಾನುಭವ ಸದ್ಗೋಷ್ಠಿಯಲ್ಲಿದ್ದನು. ಜೈನರು ಅವನ ಸಮೀಪದಲ್ಲಿ ಬಂದು ಕಾಣಿಕೆಗಳನ್ನು ಅರ್ಪಿಸಿ ಅವನಿಗೆ ನಮಿಸಿ ಅಲ್ಲಿಯೇ ಕುಳಿತರು. ಅವರು ಅಲ್ಲಿದ್ದ ಪ್ರಶಾಂತವಾದ ಉಚ್ಚ ಶಿವಾನುಭವದ ವಾತಾವರಣವನ್ನು ನೋಡಿ ಸೈರಿಸದೆ ಅರಸನಿಗೆ— ರಾಜನೇ, ನೀನು ಈ ವರೆಗೆ ನಡಿಸುತ್ತಿದ್ದ ಪರ್ವವು ಕ್ಷೇಮದಿಂದ ಮುಗಿಯಿತೇ? ಆದರೆ ಇದರಿಂದ ನಿನಗೆ ಆದ ಪ್ರಯೋಜನವೇನು? ಇದರಲ್ಲಿ ನೀನು ಯಾವ ಪ್ರತ್ಯಕ್ಷ ಫಲವನ್ನು ಹೊಂದಿದೆ? ಎಂದು ವಿಡಂಬಿಸಿ ನುಡಿದರು. ಅರಸನು ಅದನ್ನು ಕೇಳಿ ಕೆರಳಿದವನಾಗಿ–ಮರುಳುಗಳಿರಾ, ನಿಮಗೆ ಭಕ್ತಿಯೆಂಬುದು ತಿಳಿಯದು. ನಿಮಗೆ ದೇವರ ಕಲ್ಪನೆ ಇಲ್ಲ. ಮನುಷ್ಯನು ೮೪ ಲಕ್ಷ ಜನ್ಮಗಳನ್ನು ತಾಳಿ ಆ ಮೇಲೆ ಶಿವಭಕ್ತನಾಗಿ ಹುಟ್ಟುತ್ತಾನೆ. ನಾನು ಈಗ ಭಕ್ತನಾಗಿ ಜೀವಿಸಿರುವದೇ ನನಗೆ ದೊರೆತ ಪ್ರತ್ಯಕ್ಷ ಫಲವು. ಇದಕ್ಕಿಂತಲೂ ಹೆಚ್ಚಿನ ಪ್ರಯೋಜನವು ದೊರಕಬೇಕಾದುದಾದರೂ ಆವುದು? ಎಂದು ನುಡಿದನು. ಅದಕ್ಕೆ ಜೈನ ಋಷಿಗಳು ಅವನಿಗೆ— ನೀವು ೬ ತಿಂಗಳುಗಳ ವರೆಗೆ ಏಕಾಂತವಾಸ ಮಾಡಿ ಆವ ಮಹಿಮೆಗಳನ್ನು ಮಾಡಲು ಕಲಿತಿರುವಿರಿ ಎಂದು ಕೇಳಿದರು. ಇದಕ್ಕೆ ಅರಸನು— ಶಿವಾನುಭವಿಗಳ ಅದ್ಭುತ ಶಕ್ತಿಯನ್ನು ನೀವೇನು ಬಲ್ಲಿರಿ? ಅವರು ಸೃಷ್ಟಿಸಬಲ್ಲರು, ಸೃಷ್ಟಿಸಿದ್ದನ್ನು ಅಳಿಸಬಲ್ಲರು, ಎಂದು ನುಡಿದನು. ಇದನ್ನು ಜೈನರು ಕೇಳಿ ಬೇರೊಂದೆಡೆಗೆ ಹೋಗಿ, ಒಂದು ಉಪಾಯವನ್ನು ನೆನೆದು ಅರಸನಿದ್ದಲ್ಲಿಗೆ ಬಂದು –ಅರಸನೇ, ಇಗೋ

ನೋಡು ನಮ್ಮ ಸಾಮರ್ಥ್ಯವನ್ನು, ಎಂದು ಹೇಳಿ ಕುಟಿಲ ಮಂತ್ರ ಗಳನ್ನು ಉಚ್ಚರಿಸುತ್ತ ಅಕ್ಷತೆಗಳನ್ನು ಅರಸನು ಕುಳಿತಿದ್ದ ಆ ವಟವೃ ಕ್ಷದ ಮೇಲೆ ಚಲ್ಲಲು, ಆ ಕ್ಷಣವೇ ಅದು ಧಗ ಧಗನೆ ಉರಿಯಹತ್ತಿತು. ಮತ್ತು ಅದು ನಿಮಿಷಾರ್ಧದಲ್ಲಿ ಭಸ್ಮವಾಯಿತು. ಹೀಗಾದುದನ್ನು ಜೈನರು ಅರಸನಿಗೆ ತೋರಿಸಿ— ನೋಡಿದೆಯಾ ನಮ್ಮ ಈ ಅದ್ಭುತ ಸಾಮರ್ಥ್ಯವನ್ನು? ಎಂದು ಗರ್ವದಿಂದ ನುಡಿಯಲು, ಅರಸನು—ನಿಮಗೆ ಶಿವಶರಣರ ಮಹಿಮೆಯ ರೀತಿಯು ತಿಳಿದಿಲ್ಲ. ಅದನ್ನು ಶಿವಾನುಭವಿ ಗಳೇ ಬಲ್ಲರು. ಈ ವೃಕ್ಷವನ್ನು ನೀವು ಭಸ್ಮ ಮಾಡಿದ ಬಳಿಕ, ಇಗೋ ಅದರ ಶೇಷವು ಈ ಬೂದಿಯಲ್ಲಿದೆ. ಈ ಶೇಷದ ಮೂಲಕವೇ ನಾನು ಈ ವೃಕ್ಷವನ್ನು ಪುನಃ ಮೊದಲಿನಂತೆ ಚಿಗಿಯಿಸಬಲ್ಲೆನು, ಎಂದು ನುಡಿದು ಅರಸನು ಶಿವನನ್ನು ನೆನೆಯಲಾಗಿ ಆಕ್ಷಣವೇ ಆ ವೃಕ್ಷವು ಬೂದಿಯೊಳಗಿಂದ ಅಂಕುರಿಸಿತು, ಅಂಕುರಿಸಿ ಪಲ್ಲವಿಸಿತು, ಮತ್ತು ಮೊದ ಲಿನಂತೆ ಒಂದು ವಿಶಾಲವಾದ ಮರನಾಯಿತು, ಮುಂದೆ ಅದಕ್ಕೆ ಪುಷ್ಪ ಫಲಗಳಾದವು. ಜೈನರು ಅರಸನಲ್ಲಿ ಈ ಅಗಾಧವಾದ ಶಕ್ತಿಯು ಉಂಟಾದದ್ದನ್ನು ನೋಡಿ, ಅಂಜಿ ಓಡಿ ಹೋಗಹತ್ತಿದರು. ಆದರೆ ಅರಸನು ನಗುತ್ತ ಅವರನ್ನು ತನ್ನಲ್ಲಿಗೆ ಬರಮಾಡಿಕೊಂಡು ಅವರಿಗೆ— ಶಿವಾನುಭವಿಯು ಯಾರನ್ನೂ ನಿಷ್ಕಾರಣವಾಗಿ ಕ್ಲೇಶಪಡಿಸುವದಿಲ್ಲ. ನೀವು ಜಿನಧರ್ಮವನ್ನು ಬಿಟ್ಟು ಭಕ್ತರಾಗಿರಿ ಎಂದು ಹೇಳಿದನು. ಹೀಗೆ ಹೇಳಿದ್ದಕ್ಕೆ ಜೈನ ಋಷಿಗಳು ಮತ್ತಿಷ್ಟು ಕೆರಳಿದವರಾಗಿ ರಾಜಧಾ ನಿಗೆ ಹೊರಟು ಹೋದರು.

ಇಷ್ಟಾದಮೇಲೆ ಅರಸನು ತನ್ನ ಮುನ್ನೂರು ಜನ ಭಕ್ತರನ್ನು ಕೂಡಿಕೊಂಡು ಅರಮನೆಗೆ ಬಂದು ಅಲ್ಲಿದ್ದ ಸಿಂಹಾಸನದ ಮೇಲೆ ಕುಳಿತುಕೊಂಡನು. ಆಗ ಅರಮನೆಯಲ್ಲಿಯ ಸ್ತ್ರೀಯರು ಅವನಿಗೆ ಆರತಿಯನ್ನು ಬೆಳಗಿ ಅವನನ್ನು ಸ್ವಾಗತಿಸಿದರು. ಅವರಲ್ಲಿ ಅವನ ಹೆಂಡತಿಯಾದ ಕಳಾವತಿಯೂ ಇದ್ದಳು. ಆದರೆ ಅವಳು ಆರತಿಯನ್ನು ಬೆಳಗುತ್ತಿರುವಾಗ್ಗೆ, ಆಕೆಯ ಮನದಲ್ಲಿ ಮಗನು ಮಡಿದ ದುಃಖವು ಉಕ್ಕೇರಿ ಬಂದಿತು. ಅವಳ ಕಣ್ಣೊಳಗಿಂದ ಅಶ್ರುಗಳು ದಳದಳನೆ ಸುರಿಯಹತ್ತಿದವು. ಅದನ್ನು ಅರಸನು ನೋಡಿ ಇದೇನೆಂದು ಭಯ ಪಟ್ಟು ಕೇಳಲು, ರಾಣಿಯು— ನಾನೇನು ಹೇಳಲಿ ಎಂದು ರೋದಿಸ

ಹತ್ತಿದಳು. ಅವಳು ಅವನಿಗೆ— ಅರಮನೆಯಲ್ಲಿ ನಿಮ್ಮ ಮಗನಿದ್ದರೆ, ಅವನು ಇಲ್ಲಿಗೆ ಬಂದು ನಿಮ್ಮನ್ನು ಕಾಣದೆ ಉಳಿಯುತ್ತಿದ್ದನೇ ಎಂದು ಅನ್ನಲು, ಅರಸನು ಗಾಬರಿಗೊಂಡು— ಕುಮಾರನೇನಾದನು ಎಂದು ಕೇಳಲು, ರಾಣಿಗೆ ಹೇಳುವದಾಗದಿರಲು— ಅರಸನು ಬಾಗಿಲಿನ ರಕ್ಷಕನನ್ನು ಕರೆದು ಕೇಳಲು ಅವನು ಒಬ್ಬ ಜೈನನು ಭಕ್ತನ ವೇಷವನ್ನು ಧರಿಸಿಕೊಂಡು ಅರಮನೆಯನ್ನು ಪ್ರವೇಶಿಸಿ ಬಾಲಕನನ್ನು ಕಠಾರಿಯಿಂದ ತಿವಿದು ಕೊಂದ ಹಾಕಿದನೆಂದು ಹೇಳಿದನು.

ಅರಸನು ಈ ಸುದ್ದಿಯನ್ನು ಕೇಳಿದ ಕೂಡಲೆ ಉದ್ರೇಕಗೊಂಡು ಘುಡಿಘುಡಿಸುತ್ತ— ಬಾಲಕನ ಮೃತಶರೀರವೆಲ್ಲಿದೆ ಎಂದು ಕೇಳಲು ಸೇವಕರು ಆ ಶರೀರವನ್ನು ಇಟ್ಟಿದ್ದ ಸ್ಥಳಕ್ಕೆ ಅರಸನನ್ನು ಕರೆದುಕೊಂಡು ಬಂದು ಅದನ್ನು ಅವನಿಗೆ ತೋರಿಸಿದರು.

ಅರಸನು ಬಾಲಕನ ಮೃತದೇಹವನ್ನು ನೋಡಿ ಬಾಲಕನಿಗೆ— ನಿನಗೆ ಶ್ರವಣರು ಈ ರೀತಿ ಮಾಡಿದರೇ ಎಂದೆನ್ನುತ್ತ, ಪರಮಾತ್ಮನನ್ನು ಮಂತ್ರಪೂರ್ವಕವಾಗಿ ಧ್ಯಾನಿಸುತ್ತ— ಏಳೇಳು ಕುಮಾರನೇ, ಈ ಮೃಡಪದ ಸಮಾಧಿಯು ನಿನಗೆ ಸಾಕು ಎಂದೆನ್ನಲು, ಕುಮಾರನು ನಿದ್ರೆಯಿಂದ ಎಚ್ಚತ್ತವನಂತೆ ಎದ್ದು ಕುಳಿತು, ಇದಿರಿಗೆ ತನ್ನ ತಂದೆಯನ್ನು ಕಂಡು ಅವನನ್ನು ಬಿಗಿದಪ್ಪಿದನು. ಆಗ ಕಳಾವತಿಗೂ ಭಕ್ತಜನರಿಗೂ ಆನಂದವು ಉಕ್ಕೇರಿಬಂದಿತು. ಎಲ್ಲರಿಗೂ ಹರ್ಷವಾಯಿತು. ಇದನ್ನು ನೋಡಿ ಅರಸನು— ನಾಳಿನ ಸೋಮವಾರ ಪಟ್ಟಣದಲ್ಲಿ ಅದ್ಭುತವಾಗಿ ಗಣಪರ್ವವು ಸಾಗಲಿ ಎಂದು ಅಪ್ಪಣೆಯನ್ನಿತ್ತನು.

ಈ ಗಣಪರ್ವಕ್ಕೆ ಬೇಕಾಗುತ್ತಿದ್ದ ನೆಲ್ಲು ಮೊದಲಾದ ಧಾನ್ಯಗಳನ್ನು ಕುಟ್ಟಬೇಕೆಂದು ಪಡಿಯರರು ಪಟ್ಟಣಿಗರಿಗೆ ಹೇಳಿದರು. ಆದರೆ ಅವರು ಜೈನರೇ ಇದ್ದದರಿಂದ ಅವರಲ್ಲಿ ಯಾರೂ ಅರಸನಿಗಾಗಿ ಈ ಕೆಲಸವನ್ನು ಮಾಡಲು ಒಪ್ಪಲಿಲ್ಲ. ಆಗ ಮಾರಿಮುಚಣಿಗಳು ಬೊಮ್ಮ ತಂದೆಯು ಮುಂದೆ ಬಂದು ನಿಂತು ಅವನಿಗೆ— ನಿನ್ನ ಈ ಸೇವೆಯನ್ನು ನಾವು ಮಾಡುವೆವು. ಆದರೆ ಇದಕ್ಕೋಸ್ಕರ ಶಿವಪುರವೆಂದೆಣಿಸಿಕೊಂಡ ನಿನ್ನ ಅರಮನೆಯನ್ನು ನಾವು ಪ್ರವೇಶಮಾಡಲು ಅಂಜುತ್ತೇವೆ. ನಾವು

ಬೇರೆ ಕಡೆಗೆ ಹೋಗಿ ಕಾಳನ್ನೆಲ್ಲ ಕುಟ್ಟಿತರುವೆವು ಎಂದು ಹೇಳಲು ಅರಸನು ಅದಕ್ಕೆ ಒಪ್ಪಲಾಗಿ ಅವು ಮರುದಿನ ಮುಂಜಾವಿನೊಳಗಾಗಿ ಕೊಟ್ಟ ಕಾಳುಗಳನ್ನೆಲ್ಲ ಹಸನುಮಾಡಿ ಕುಟ್ಟಿ ಅರಮನೆಯ ಇದಿರಿಗೆ ತಂದುಹಾಕಿದವು. ಆಮೇಲೆ ಪಟ್ಟಣದಲ್ಲಿ ಮಹತ್ತರವಾದ ಸಮಾರಂಭ ದಿಂದ ಗಣಪರ್ವವು ನಡೆಯಿತು.

ಈ ರೀತಿ ಅರಸನ ಕಾರ್ಯಗಳು ವಿಜೃಂಭಣೆಯಿಂದ ನಡೆದ ದ್ದನ್ನು ಪಟ್ಟಣದಲ್ಲಿಯ ಶ್ರವಣರು ನೋಡಿ ಮತ್ತಿಷ್ಟು ಕೆರಳಿದವರಾಗಿ ಅರಸನಿಗೆ— ಪರ್ವಪರ್ವವೆಂದು ನಿಮ್ಮ ಭಕ್ತರು ಉಂಡುಂಡು ಹೋಗು ತ್ತಿದ್ದಾರೆ. ಆದರೆ ನೀವು ಪರಮಾತ್ಮನು ಸರ್ವವ್ಯಾಪಿಯು ಎಂದು ಹೇಳು ತ್ತೀರಿ. ಇದು ಒಂದುವೇಳೆ ನಿಜವಾದರೆ ನಿಮ್ಮ ಅಂಬುಧಾರಾ—ರಾಮ ನಾಥನನ್ನು ಇಲ್ಲಿಯೇ ಈ ಪಟ್ಟಣದಲ್ಲಿ ತಂದು ತೋರಿಸಬೇಕು, ಎಂದು ಅನ್ನಲು ಇದಕ್ಕೆ ಅರಸನು — ಏಕಾಗವೊಲ್ಲದು ಎಂದು ನುಡಿದು ಹರನು ಇಲ್ಲಿಗೆ ಬರಬೇಕೆಂದು ನೆನೆಯುತ್ತ ಒಬ್ಬ ಪಡಿಹಾರಿಯನ್ನು ಕರೆದು— ನೀನು ಅಂಬುಧಾರಾ—ರಾಮನಾಥನಲ್ಲಿಗೆ ಹೋಗಿ ಅವನಿಗೆ ಪಟ್ಟಣದಲ್ಲಿ ಬರಹೇಳು ಎಂದು ಹೇಳಿಕಳಿಸಿದನು. ಅವನು ಹಾಗೆಯೇ ದೇವಾಲಯದಲ್ಲಿ ಹೋಗಿ ಉಚ್ಚರಿಸಲು ಸ್ವಲ್ಪ ಹೊತ್ತಿನಲ್ಲಿಯೇ ಅರ ಮನೆಯ ಪ್ರವೇಶದ್ವಾರದಲ್ಲಿಯೇ ಕೋಟಿ ಸೂರ್ಯ ಪ್ರಕಾಶದಿಂದ ಬೆಳಗುತ್ತ ರಾಮನಾಥನು ಝಗ್ಗನೆ ಕಾಣಿಸಿಕೊಂಡನು. ಅರಸನು ಆ ಮೂರ್ತಿಯನ್ನು ನೋಡಿ ಅದಕ್ಕೆ ನಮಸ್ಕರಿಸಿ ಭಕ್ತರೊಂದಿಗೆ ಪರ ಮಾತ್ಮನನ್ನು ಸ್ತುತಿಸುವವನಾದನು. ಆದರೆ ಪಟ್ಟಣದಲ್ಲಿಯ ಜೈನರು ಪರಮಾತ್ಮನು ವಿಶ್ವವ್ಯಾಪಿಯು ಎಂದು ಅರಸನು ಹೇಳಿದ್ದು ಸತ್ಯವಾಯಿ ತೆಂಬದನ್ನು ನೋಡಿ ಮನಸ್ಸಿನಲ್ಲಿ ಮತ್ತಿಷ್ಟು ತಳಮಳಗೊಂಡರು.

ಬ್ರಹ್ಮಯ್ಯನು ಪಟ್ಟಣದಲ್ಲಿ ಜೈನರು ಹೀಗೆ ಅನೇಕ ರೀತಿಯಿಂದ ತನ್ನನ್ನು ವಿರೋಧಿಸುತ್ತಿರುವದನ್ನು ನೋಡಿ ಅವರಿಗೆ ಅಂದದ್ದು— ನೀವು ನನ್ನ ಬಾಲಕನನ್ನು ಕೊಂದುಹಾಕಿದಿರಿ. ಇದು ನಿಮ್ಮ ಮೊದ ಲನೆಯ ಅಪರಾಧವು. ಆಮೇಲೆ ನಾನು ರಾಮನಾಥನ ದೇವಾಲಯದಲ್ಲಿ ದ್ದಾಗ್ಗೆ ಭಕ್ತರ ಮಹತ್ವವನ್ನು ನೀವು ಹೀಯಾಳಿಸಿ ನುಡಿದಿರಿ. ಇದು ನಿಮ್ಮ ಎರಡನೆಯ ಅಪರಾಧವು. ಈಗ ನೀವು ವಿಶ್ವವ್ಯಾಪಿಯಾದ ಪರಮಾ

ತ್ಮನನ್ನು ನಂಬದೆ ಅವನನ್ನು ನಿಂದಿಸಿ ನುಡಿದಿರಿ. ಇದು ನಿಮ್ಮ ಮೂರ ನೆಯ ಮಹಾಪರಾಧವು. ನೀವು ಭಕ್ತರ ಮತ್ತು ಪರಮಾತ್ಮನ ಮಹಿಮೆ ಯನ್ನು ಪ್ರತ್ಯಕ್ಷ ಕಂಡರೂ ಹೀಗೆ ನಡೆಯುತ್ತೀರಿ. ನಿಮ್ಮದು ಶಿವ ದ್ರೋಹವು ಎಂದೆನ್ನಲು ಪಟ್ಟಣದಲ್ಲಿದ್ದ ಎಂಟುಸಾವಿರ ಶ್ರವಣರು ಇದನ್ನು ಕೇಳಿ, ಒಟ್ಟಾರೆ ಸೇರಿ, ಭಕ್ತರನ್ನೆಲ್ಲ ಸಂಹರಿಸಬೇಕೆಂದು ನಿಶ್ಚಯಿಸಿ, ಶಸ್ತ್ರಾಸ್ತ್ರಗಳನ್ನು ಧರಿಸಿಕೊಂಡು ಶಿವಪುರವೆಂದೆನಿಸಿಕೊಳ್ಳು ತ್ತಿದ್ದ ಅರಸನ ಅರಮನೆಯ ಮೇಲೆ ಸಾಗಿಬಂದು ಅದಕ್ಕೆ ಮುತ್ತಿಗೆಯನ್ನು ಹಾಕಿ ಯುದ್ಧವನ್ನು ಆರಂಭಿಸಿದರು.

ಬೊಮ್ಮತಂದೆಯು ಇದನ್ನು ನೋಡಿ ಮನಮರುಗಿ— ಈ ಶ್ರವ ಣರ ಬುದ್ಧಿಯು ಮಸುಳಿಸಿದೆ. ಇದಕ್ಕೆ ತಕ್ಕ ಪ್ರತೀಕಾರ ಮಾಡದೆ ಬಿಡೆನೆಂದು ಕೆಲಬಲದಲ್ಲಿದ್ದ ತನ್ನ ಮುನ್ನೂರು ಜನ ಭಕ್ತರಿಗೆ ಕಣ್ಣು ಸನ್ನೆ ಮಾಡಲು ಅವರು ಅರಸನ ಇಂಗಿತವನ್ನರಿತು ತಮ್ಮ ಶಸ್ತ್ರಗ ಳನ್ನು ಝಳಪಿಸುತ್ತ ಜೈನರ ಪಡೆಯ ಮೇಲೆ ನುಗ್ಗಿ ಇದಿರಿಗೆ ಬಂದ ವರನ್ನು ಸಂಹರಿಸುತ್ತ ಮುಂದುವರಿದರು. ಆಗ ಅವರೆಲ್ಲರೂ ಓಡಿ ಹೋದರು. ಆಮೇಲೆ ಭಕ್ತರು ಬಸದಿಗಳಲ್ಲಿ ನುಗ್ಗಿ ಜಿನಪ್ರತಿಮೆಗ ಳನ್ನು ಕಿತ್ತು ಬಿಸುಟಿಹಾಕಿದರು. ಆಮೇಲೆ ಅವರು ಅರಸನಿಗೆ— ಅವು ಗಳ ಸ್ಥಳದಲ್ಲಿ ಶಿವಲಿಂಗಗಳನ್ನು ಸ್ಥಾಪಿಸಬಹುದೇ ಎಂದು ಕೇಳಲು ಅರಸನು ಇಂಥ ದೇವಾಲಯಗಳನ್ನು ಶಿವಭಕ್ತರು ಪ್ರವೇಶಿಸಕೂಡದು, ಅವು ಶಿವನಿಗೆ ಸಲ್ಲವು ಎಂದು ಹೇಳಲು ಅವರು ಆ ಬಸದಿಗಳನ್ನೆಲ್ಲ ಕೆಡವಿ ನೆಲಸಮಮಾಡಿಬಿಟ್ಟರು.

ಕೋವೂರಲ್ಲಿ ಈ ಪ್ರಕಾರ ಘಟನೆಗಳು ನಡೆದ ಬಳಿಕ ಎಲ್ಲವೂ ಶಾಂತ ವಾಯಿತು. ಅಲ್ಲಿ ಶಿವಾನುಭವ ಸದ್ಗೋಷ್ಠಿಗಳು ನಿರಾತಂಕವಾಗಿ ನಡೆಯ ಹತ್ತಿದವು. ಯಾವಾಗಲೂ ಶಿವಗೀತಗಳು ಕೇಳಬರಹತ್ತಿದವು. ಅರಸನು ಅವುಗಳಿಗೆ ಮೆಚ್ಚಿ ಉದಾರಭಾವದಿಂದ ಗಾಯಕರಿಗೂ ಮಹೇಶ್ವರರಿಗೂ ಮೆಚ್ಚುಗಳನ್ನು ಹೇರಳವಾಗಿ ಕೊಡಹತ್ತಿದನು. ಹೀಗೆ ಕೆಲವು ದಿವಸಗಳು ಗತಿಸಿದ ಮೇಲೆ ಒಂದಾನೊಂದು ದಿವಸ ಶರಣ ಗೋಷ್ಠಿಗಳು ನಡೆದ ಕಾಲದಲ್ಲಿ ನಂದಿಯುಂಡಿಗೆಯು ಇದ್ದ ಒಂದು ಶಿವಲಿಖಿತವು ಸಭಾಮ ಧ್ಯದಲ್ಲಿ ಅರಸನ ಇದಿರಿಗೆ ಮೇಲಿನಿಂದ ಕೆಳಕ್ಕೆ ಬಂದು ಬಿದ್ದಿತು.

ಅದನ್ನು ಅರಸನು ತೆಗೆದುಕೊಂಡು ತನ್ನ ತಲೆಯ ಮೇಲೆ ಇಟ್ಟು ಅದನ್ನು ಓದಿಸಿ ನೋಡಲು, ಅದರಲ್ಲಿ ರಾಜನಿಗೆ--ನಿನ್ನ ಮುನ್ನೂರು ಜನ ಭಕ್ತರನ್ನು ಕೂಡಿಕೊಂಡು ನನ್ನ ಸನ್ನಿಧಿಗೆ ಬರಬೇಕು ಎಂದು ಬರೆದದ್ದಿತ್ತು. ಬ್ರಹ್ಮಯ್ಯನು ಅದನ್ನು ನೋಡಿ ನಾನು ಈ ವರೆಗೆ ಭಕ್ತರ ಕೂಡ ಶಿವಾನ ಭವದಲ್ಲಿ ಸುಖವಾಗಿ ಕಾಲ ಕಳೆದೆನು. ಇನ್ನು ಮೇಲೆ ನಾನು ಈ ಸಂಸಾರವನ್ನು ನೀಗಿ ಶಿವನ ಅಪ್ಪಣೆಯಂತೆ ಅವನ ಸಾನ್ನಿಧ್ಯವನ್ನು ಸೇರುವೆನು, ಎಂದು ಸಂತೋಷಬಟ್ಟನು. ಆ ಮೇಲೆ ಅವನು ತನ್ನ ಮುನ್ನೂರು ಜನ ಭಕ್ತರಿಗೆ ಪತ್ರದಲ್ಲಿದ್ದ ಈ ಸಂಗತಿಯನ್ನು ತಿಳಿಸಲು ಅವರು ಸಹ ಅರಸನ ಕೂಡ ಶಿವನ ಸಾನ್ನಿಧ್ಯವನ್ನು ಹೊಂದಬೇಕೆಂದು ಅಪೇಕ್ಷೆಬಟ್ಟರು.

ಆ ಮೇಲೆ ಬ್ರಹ್ಮಯ್ಯನು ತನ್ನ ಮಗನನ್ನು ಕರೆದು ಅವನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ ಅವನಿಗೆ--ನೀನು ಯಾವಾಗಲೂ ಶಿವಭಕ್ತನಾಗಿರು, ಈ ಕೋವೂರು ಪುರವನ್ನು ಚನ್ನಾಗಿ ಪಾಲಿಸು, ಶಿವಭಕ್ತರ ವಚನಗಳನ್ನು ನಂಬು, ನಂಬಿ ಅವುಗಳಂತೆ ನಡೆ, ಎಂದು ಉಪದೇಶಿಸಿ ತನ್ನ ಮುನ್ನೂರು ಜನ ಭಕ್ತರೊಂದಿಗೆ ಅಂಬುಧಾರಾ--ರಾಮನಾಥನ ದೇವಾಲಯದ ಕಡೆಗೆ ಹೊರಟನು. ಆಗ ಅವರೆಲ್ಲರ ಕೈಯ್ಯಲ್ಲಿ ಕಠಾರಿಗಳೂ ಮಸೆದ ಆಯುಧಗಳೂ ಹೊಳೆಯುತ್ತಿದ್ದವು. ಕಹಳೆಗಳು ಸುತ್ತಲೂ ಘೋರ್ಗರೆಯುತ್ತಿದ್ದವು. ಹೀಗೆ ಅವರು ದೇವಾಲಯಕ್ಕೆ ಹೋಗಿ ರಾಮನಾಥನ ಇದಿರಿಗೆ ಎಲ್ಲರೂ ನಿಂತು-ದೇವದೇವನೇ, ನಾವು ಈ ನಶ್ವರ ತನುವಿನಲ್ಲಿ ಇನ್ನುಮೇಲೆ ಇರಲು ಇಚ್ಛಿಸುವದಿಲ್ಲ. ನಾವು ಅದನ್ನು ನಿನಗೆ ಅರ್ಪಿಸಲು ಸಿದ್ಧರಾಗಿದ್ದೇವೆ ಎಂದು ನುಡಿದರು. ಅಷ್ಟರಲ್ಲಿ ಬೊಮ್ಮಯ್ಯನು ತನ್ನ ಖಡ್ಗವನ್ನು ಕೈಯ್ಯಲ್ಲಿ ಹಿಡಿದುಕೊಂಡು ತನ್ನ ಕತ್ತನ್ನು ಕತ್ತರಿಸಿ ಅದನ್ನು ರಾಮನಾಥನ ಇದಿರಿಗೆ ಇಟ್ಟನು. ಆ ಮೇಲೆ ಉಳಿದ ಭಕ್ತರು ತಮ್ಮ ಸುರಿಗೆಗಳಿಂದ ತಮ್ಮ ಹೊಟ್ಟೆಯನು ಬಗಿದುಕೊಂಡು ಹೊರಬಿದ್ದ ಕರುಳುಗಳನ್ನು ಈಶ್ವರನ ಮುಂದಿಟ್ಟರು. ಅವರಲ್ಲಿ ಕೆಲವರು ಪರಶುವಿನಿಂದ ತಮ್ಮನ್ನು ಕಡಿದುಕೊಂಡರು. ಆ ಕಾಲದಲ್ಲಿ ರಾಮನಾಥನ ಇದಿರಿಗೆ ರಕ್ತದ ಪ್ರವಾಹವು ಹರಿಯಿತು. ಅಷ್ಟರಲ್ಲಿ ಮುನ್ನೂರು ಪುಷ್ಪಕ ವಿಮಾನಗಳು ಆಕಾಶ ಮಾರ್ಗದಿಂದ ದೇವಾಲಯದಲ್ಲಿ ಇಳಿದು ಅಲ್ಲಿದ್ದ ೩೦೦ ಜನ ಭಕ್ತರನ್ನು ತೆಗೆದುಕೊಂಡು

ಗಗನದಲ್ಲಿ ಹಾರಿ ಹೋದವು. ಈ ಪ್ರಕಾರ ಕೋವೂರ ಬ್ರಹ್ಮಯ್ಯನೂ ಅವನ ೩೦೦ ಜನ ಭಕ್ತರೂ ಶಿವಪದವನ್ನು ಹೊಂದಿ ಶಿವಶರಣರಲ್ಲಿ ಉಚ್ಚಸ್ಥಾನವನ್ನು ಹೊಂದಿದ್ದಾರೆ.

ಕೋಹೂರು ಬ್ರಹ್ಮಯ್ಯನ ಹೆಸರು ಗಣಸಹಸ್ರದಲ್ಲಿ ಬಂದಿದೆ. ಆದ್ದರಿಂದ ಅವನು ಹಿಂದಿನ ಕಾಲದ ಶಿವಶರಣನು. ಆದರೆ ಅವನು ಬಸವೇಶ್ವರನಕಿಂತಲೂ ಹಿಂದಿನವನೋ ಅಥವಾ ಅವನ ತರುವಾಯ ದವನೋ ಎಂಬುದನ್ನು ತಿಳಿಯಲು ವಿಶ್ವಾಸಾರ್ಹವಾದ ಸಂಗತಿಗಳು ಅವನ ಚರಿತ್ರೆಯಲ್ಲಿ ದೊರಕುವದಿಲ್ಲ. ಅವನ ಚರಿತ್ರೆಯಲ್ಲಿ ಬಸವನ ಉಲ್ಲೇಖವೇನೂ ಇರುವದಿಲ್ಲ. ಆದ್ದರಿಂದ ಅವನು ಅವನಿಗೆ ಸಮಕಾ ಲೀನನೆಂದು ತೋರುವದಿಲ್ಲ. ಅವನು ಚಾಲುಕ್ಯ ವಂಶದವನೆಂದು ಅವನ ಚರಿತ್ರೆಯಲ್ಲಿ ಹೇಳಲ್ಪಟ್ಟಿರುತ್ತದೆ. ಬಿಜ್ಜಳನ ಕಾಲದಲ್ಲಿ ಚಾಲು ಕ್ಯರು ರಾಜ್ಯದಿಂದ ತಳ್ಳಲ್ಪಟ್ಟವರಾಗಿದ್ದರೂ ಅವರ ಶಾಖೆಗಳು ಕರ್ನಾ ಟಕದಲ್ಲಿ ಅಲ್ಲಲ್ಲಿ ನೆಲಸಿದ್ದವು. ಇಂಥ ಒಂದು ವಂಶಕ್ಕೆ ಕೋಹೂರು ಬೊಮ್ಮಯ್ಯನು ಹೊಂದಿದವನಾಗಿರಬೇಕು. ಅವನು ಬಹುಶಃ ಬಸವೇಶ್ವರ ನಕಿಂತಲೂ ಈಚಿನವನಾಗಿರಬೇಕು. ಬಸವೇಶ್ವರ ಮತ್ತು ಚನ್ನಬಸವೇ ಶ್ವರ ಇವರ ತರುವಾಯ ದೇಶದಲ್ಲೆಲ್ಲ ವೀರಶೈವ ಮತವು ಕ್ರಮೇಣ ಅನೇಕ ವರ್ಷಗಳ ವರೆಗೆ ವಿಸ್ತಾರಹೊಂದುತ್ತ ಬಂದಿತೆಂದು ತಿಳಿಯುತ್ತಿದೆ. ಇಂಥ ಪ್ರಸಾರ ಕಾಲದಲ್ಲಿಯೇ ಕೋಹೂರು ಬ್ರಹ್ಮಯ್ಯನು ಪ್ರಸಿದ್ಧಿಗೆ ಬಂದಿರಬೇಕು.

ಕೋಹೂರು ಬ್ರಹ್ಮಯ್ಯನು ಜೈನರನ್ನು ವಿರೋಧಿಸುವಾಗ ಅವನು ಅದರಲ್ಲಿ ಯಶಸ್ಸನ್ನು ಹೊಂದಿದನೆಂಬ ಭಾವವು ಅವನ ಚರಿತ್ರೆ ಯಲ್ಲಿ ವ್ಯಕ್ತವಾಗುತ್ತದೆ. ಆದರೆ ಅವನ ಚರಿತ್ರೆಯನ್ನು ಸೂಕ್ಷ್ಮವಾಗಿ ನಿರೀಕ್ಷಿಸಿದಲ್ಲಿ ನಿಜಸ್ಥಿತಿಯು ಹೀಗಿರದೆ ಜೈನರೇ ವೀರಶೈವರನ್ನು ಕಡೆಯ ವರೆಗೂ ಹಿಂಸಿಸುತ್ತ ಬಂದರೆಂದು ಅನುಮಾನಿಸಬೇಕಾಗುತ್ತದೆ.

---

ಎಲ್ಲರಿಗೂ! ಅದೇ ಅಸುಖ—ದುಃಖ. ಲೋಭದಿಂದಲೇ ಶತ್ರುತ್ವ ಜನಿಸುತ್ತದೆ. ಮನುಷ್ಯತ್ವವಲ್ಲಿದು. ಮನುಷ್ಯತ್ವದ ಗುರಿ ಇನ್ನೊಬ್ಬರನ್ನು ಸುಲಿಯುವದೂ, ತೊಂದರೆಪಡಿಸುವದೂ ಆಗಿರುವದಿಲ್ಲ. ಇಂಥ ಹೀನ ವೃತ್ತಿಗಾಗಿ ಮನುಷ್ಯತ್ವವನ್ನು ತೊಳೆಯಬೇಕಾಗಿಲ್ಲ. ಇವೆಲ್ಲವುಗಳಿಗೆ ಇಂದ್ರಿಯಜನ್ಯ ಸುಖಾಪೇಕ್ಷೆಯೊಂದೇ ಕಾರಣ. ಆದ್ದರಿಂದ ಇವೆಲ್ಲ ತೊಡರುಗಳಿಂದ ಪಾರಾಗಿ ನಿಜವಾದ ಮನುಷ್ಯನಾಗಬೇಕು, ನಿಜವಾದ ಸುಖವನ್ನು ಸಂಪಾದಿಸಬೇಕು ಎಂದಿದ್ದರೆ, ಇಚ್ಛಾತ್ಯಾಗ ಇದೊಂದೇ ಸಾಧನವು. ಆಶಾರಹಿತನಾದ ಬಳಿಕ ಬೇಕಾದ ಕೃತಿಯನ್ನು ಮಾಡಿದರೂ ಮನಸ್ಸು ಶಾಂತ ಉಳಿಯುವದು. ಅದೇ ನಿಜವಾದ ಸುಖ, ಸುಖದ ಬೀಡು. ಅದನ್ನು ದೊರಕಿಸಲೆಳಸುವದೇ ಮಾನವನ ಕರ್ತವ್ಯ.

---

ಡನೆಯೂ ಸರಿಯಾಗಿ ವರ್ತಿಸನು. ಅದರಿಂದ ದ್ವೇಷ, ಅಸೂಯಾದಿ ದುರ್ಭಾವನೆಗಳಿಗೆ ಆಶ್ರಯ ದೊರಕುವದು. ಇದು ಮಹಾಪಾಪವು; ಆತ್ಮಘಾತವು! ಇಚ್ಛಾತೃಪ್ತಿಗಾಗಿ ಎರಡನೆಯವರೊಡನೆ ವರ್ತಿಸುವವನು ಅವರನ್ನು ತನ್ನ ಇಚ್ಛಾಪೂರ್ತಿಯ ಸಾಧನಗಳೆಂದು ತಿಳಕೊಳ್ಳುವನು! ಅವರಿಂದ ಭೌತಿಕಲಾಭ ಪಡೆಯುವದಕ್ಕಾಗಿ ಅವರ ಕೆಲವೊಂದು ವಸ್ತುವನ್ನು ಅಪಹರಿಸಲೂ ಹಿಂದೆಮುಂದೆ ನೋಡನು! ಈ ಭಾವನೆಯೇ 'ಸ್ವಾರ್ಥ'ವು! ಸ್ವಾರ್ಥ, ಇಚ್ಛೆ, ಅಸಂತುಷ್ಟಿ ಇವೆಲ್ಲ ಸಮಾನಾರ್ಥಕ ಶಬ್ದಗಳು. ಆಶೆಯ ತೃಪ್ತಿಗೆ ಯತ್ನಿಸಿದಂತೆ ಅದು ಬೆಳೆಯುವದು; ಪ್ರಖರವಾಗುವದು.

ಆಶಾಪರನು ಧನಕ್ಕಾಗಿ ಹೆಣಗುವನು; ಹಮ್ಯ್ರಗಳನ್ನೂ, ಸಾಧನಗಳನ್ನೂ ಬಯಸುವನು; ಮೇಲ್ತರದ ಅಶನವಸನಗಳಿಗೆ ಹಾತೊರೆಯುವನು; ಮಡದಿ ಮಕ್ಕಳಿಗಾಗಿ ತಳಮಳಿಸುವನು. ಹೀಗೆ ಸುಖಕ್ಕಾಗಿ ಯತ್ನಿಸಿದಂತೆ ನಿಜವಾದ ಸುಖವು ಆತನಿಂದ ದೂರದೂರ ಹೋಗುವದು. ಆತನು ಸದಾಕಾಲ ದುಃಖಿತನಾಗಿರುವನು. ಸುಖಾಪೇಕ್ಷೆಯು ನಿಜವಾದ ಸುಖದ ಸಾಧನವಲ್ಲ. ನಿಜವಾದ ಸುಖ ದೊರಕಿಸಲು ಮನುಷ್ಯನು ಶಾಂತನೂ, ಸ್ಥಿರಮನಸ್ಕನೂ ಆಗಲಿಕ್ಕೆ ಬೇಕು. ಶಾಂತತೆ ಹಾಗು ಬುದ್ಧಿಯ ಸ್ಥಿರತ್ವ ದೊರೆಯುವ ತನಕ ನಿಜವಾದ ಸುಖವು ಲಭಿಸದೆಂಬದನ್ನು ನಿಶ್ಚಿತವಾಗಿ ತಿಳಿಯಬೇಕು. ದುಃಖ, ಚಿಂತೆ ಎರಡೂ ಒಂದೇ ಭೋಗಸಂತೃಪ್ತಿಯನ್ನು—ಸುಖೇಚ್ಛೆಯನ್ನು ಪೂರ್ಣ ಮಾಡುವ ಪದಾರ್ಥಗಳು ಹೇಗೆ ದೊರಿತಾವು? ಹೇಗೆ ತನ್ನ ಹತ್ತರ ಉಳಿದಾವು? ಎಂಬ ಚಿಂತೆಯನ್ನು ಮನಸ್ಸಿನಲ್ಲಿ ಕಾಯ್ದಿಟ್ಟುಕೊಳ್ಳುವದೇ ದುಃಖ. ಇದರಿಂದ ಮುಕ್ತವಾಗುವದೇ ಮನುಷ್ಯಜನ್ಮದ ಗುರಿ. ಸುಖ ದುಃಖಗಳು ಶಾರೀರಿಕ ವಸ್ತುಗಳಲ್ಲ; ಮಾನಸಿಕ ವಸ್ತುಗಳು. ಅವೆರಡೂ ಒಂದೆಡೆಯಲ್ಲಿರಲಾರವು. ಒಂದರ ಅಭಾವ, ಇನ್ನೊಂದರ ಕ್ಕಾಶ್ರಯ. ಇಂದ್ರಿಯ ಜನ್ಯ ಸುಖಾಪೇಕ್ಷೆಯು ಒಂದು ತರದ ಲೋಭವು. 'ಲೋಭಮೂಲಾನಿ ಪಾಪಾನಿ' ಲೋಭಿಯು ನಿಜವಾದ ಡಕಾಯಿತ—ದರೋಡೆಖೋರ. ಚಿಕ್ಕ ಮೀನನ್ನು ದೊಡ್ಡಮೀನು, ದೊಡ್ಡ ಮೀನನ್ನು ತಿಮಿತಿಮಿಂಗಲ ನುಂಗುವಂತೆ ಒಬ್ಬ ಲೋಭಿಯು ಮತ್ತೊಬ್ಬ ಲೋಭಿಯ ತುತ್ತು ಆಗುವನು! ಹೀಗೆ ಒಬ್ಬರನ್ನೊಬ್ಬರು ನುಂಗುವ ಆಶೆಯೇ ಎಲ್ಲರಲ್ಲಿ! ಒಂದೇ ಬಗೆಯ ಚಿಂತೆ

ಎಲ್ಲರಿಗೂ! ಅದೇ ಅಸುಖ—ದುಃಖ. ಲೋಭದಿಂದಲೇ ಶತ್ರುತ್ವ ಜನಿಸುತ್ತದೆ. ಮನುಷ್ಯತ್ವವಲ್ಲಿದು. ಮನುಷ್ಯತ್ವದ ಗುರಿ ಇನ್ನೊಬ್ಬರನ್ನು ಸುಲಿಯುವದೂ, ತೊಂದರೆಪಡಿಸುವದೂ ಆಗಿರುವದಿಲ್ಲ. ಇಂಥ ಹೀನ ವೃತ್ತಿಗಾಗಿ ಮನುಷ್ಯತ್ವವನ್ನು ತೊಳೆಯಬೇಕಾಗಿಲ್ಲ. ಇವೆಲ್ಲವುಗಳಿಗೆ ಇಂದ್ರಿಯಜನ್ಯ ಸುಖಾಪೇಕ್ಷೆಯೊಂದೇ ಕಾರಣ. ಆದ್ದರಿಂದ ಇವೆಲ್ಲ ತೊಡರುಗಳಿಂದ ಪಾರಾಗಿ ನಿಜವಾದ ಮನುಷ್ಯನಾಗಬೇಕು, ನಿಜವಾದ ಸುಖವನ್ನು ಸಂಪಾದಿಸಬೇಕು ಎಂದಿದ್ದರೆ, ಇಚ್ಛಾತ್ಯಾಗ ಇದೊಂದೇ ಸಾಧನವು. ಆಶಾರಹಿತನಾದ ಬಳಿಕ ಬೇಕಾದ ಕೃತಿಯನ್ನು ಮಾಡಿದರೂ ಮನಸ್ಸು ಶಾಂತ ಉಳಿಯುವದು. ಅದೇ ನಿಜವಾದ ಸುಖ, ಸುಖದ ಬೀಡು. ಅದನ್ನು ದೊರಕಿಸಲೆಳಸುವದೇ ಮಾನವನ ಕರ್ತವ್ಯ.

ಗೊಲ್ಲಾಳನು ತಾನು ಅತ್ಯಂತ ಭಕ್ತಿಯಿಂದ ಪೂಜಿಸುತ್ತಿದ್ದ ಲಿಂಗವನ್ನು ತನ್ನ ತಂದೆಯು ಹೀಗೆ ಒದೆದು ಕೆಡಿಸಿಬಿಟ್ಟದ್ದರಿಂದ ಅವನು ಅತ್ಯಂತವಾಗಿ ನೊಂದುಕೊಂಡನು. ಅವನಿಗೆ ಆ ಲಿಂಗವು ಅಂಥಿಂಥ ವಸ್ತುವಾಗಿರಲಿಲ್ಲ. ಅದು ಅವನಿಗೆ ಅತ್ಯಂತ ಪವಿತ್ರವಾದ ವಸ್ತುವಾಗಿತ್ತು. ಶ್ರೀಶೈಲದಿಂದ ತಂದಂತಹದು, ಒಬ್ಬ ವೃದ್ಧ ಜಂಗಮನು ಕೊಟ್ಟಂತಹದು, ಅವನಿಂದ ಅವನು ಉಪದೇಶವನ್ನು ಹೊಂದಿ ದಿನಾಲು ಅತ್ಯಂತ ಭಕ್ತಿಯಿಂದ ಪೂಜಿಸುವಂತಹದು. ಇಂಥ ಶ್ರೇಷ್ಠ ವಸ್ತುವನ್ನು ತನ್ನ ತಂದೆಯು ಒದೆದು ತುಳಿದುಬಿಟ್ಟದ್ದರಿಂದ ಗೊಲ್ಲಾಳನು ಅತ್ಯಂತ ಕೋಪಾವಿಷ್ಟನಾಗಿ ತನ್ನ ಭಕ್ತಿಯ ಆವೇಶದಲ್ಲಿ ಕಯ್ಯಲ್ಲಿದ್ದ ಕೊಡಲಿಯಿಂದ ತನ್ನ ತಂದೆಯನ್ನು ಆಕ್ಷಣದಲ್ಲಿಯೇ ತುಂಡರಿಸಿದ್ದನು. ಆಗ ಪರಮಾತ್ಮನು ಅವನ ನಿಚ್ಚಟವಾದ ಭಕ್ತಿಗೆ ಮೆಚ್ಚಿ ಪ್ರತ್ಯಕ್ಷನಾಗಿ ಅವನಿಗೆ— ನಿನ್ನ ಭಕ್ತಿಗೆ ನಾನು ಮೆಚ್ಚಿದೆನು. ನಿನಗೇನು ಬೇಕು ಬೇಡು ಎಂದೆನ್ನಲು, ಗೊಲ್ಲಾಳನು ಅವನಿಗೆ— ನನಗೇನೂ ಬೇಡ. ನಿನ್ನನ್ನು ಯಾವಾಗಲೂ ಪೂಜಿಸುತ್ತ ಇರುವ ವರವನ್ನೊಂದನ್ನು ಕೊಡು ಎಂದು ಹೇಳಿದನು. ಆಗ ಪರಮಾತ್ಮನು— ನೀನು ಪೂಜಿಸುತ್ತಿದ್ದ ಈ ಹಿಕ್ಕೆಯಲ್ಲಿಯೇ ನಾನು ಯಾವಾಗಲೂ ವಾಸಿಸುವೆನು. ಇಲ್ಲಿಯೇ ನೀನು ನನ್ನನ್ನು ಪೂಜಿಸುತ್ತಾ ಇರು, ಎಂದು ಹೇಳಲು ಗೊಲ್ಲಾಳನು ಅತ್ಯಂತ ಸಂತೋಷಗೊಂಡು— ನಿನ್ನಪ್ಪಣೆಯಂತೆ ನಾನು ನಡೆಯುವೆನು. ಆದರೆ ನನ್ನ ತಂದೆಯ ಮೂಲಕ ನಾನು ನಿನ್ನನ್ನು ಕಂಡೆನು. ಅವನಿಗೆ ನೀನು ಪ್ರಾಣದಾನ ಮಾಡು ಎಂದೆನ್ನಲು ಹಾಗೆಯೇ ಆಗಲೆಂದು ಪರಮಾತ್ಮನು ಹೇಳಲು ಅವನ ತಂದೆಯ ದೇಹದಲ್ಲಿ ಪ್ರಾಣವು ತುಂಬಿ ಅವನು ಎಚ್ಚತ್ತು ಕುಳಿತನು. ಅಂದಿನಿಂದ ಗೊಲ್ಲಾಳನು ವೀರಗೊಲ್ಲಾಳನೆಂಬ ಹೆಸರಿನಿಂದ ಪ್ರಸಿದ್ಧನಾದನು. ಅವನು ಪೂಜಿಸುತ್ತಿದ್ದ ಲಿಂಗರೂಪಾದ ಆ ಕುರಿಯ ಹಿಕ್ಕೆಯು ಗೊಲ್ಲಾಳೇಶ್ವರನೆಂದು ಜನರು ಕರೆಯಹತ್ತಿದರು.

ಗೊಲ್ಲಾಳನು ಲಿಂಗಧಾರಿಯಾಗಿ ಶಿವಾನುಭವದಂತೆ [illegible] ವಚನಕಾರನಾದನು. ಅವನ ಮುದ್ರಿಕೆಯು 'ವೀರಬೀರೇಶ್ವ[illegible]. ಅವನ ೨೦ ವಚನಗಳು ನಮ್ಮಲ್ಲಿವೆ. ಅವುಗಳಲ್ಲಿ [illegible] ಗಳನ್ನು ಮಾತ್ರ ಇಲ್ಲಿ ಉದಹರಿಸಿದ್ದೇವೆ.

ಗೋಲಗಿರಿಯ ಗೊಲ್ಲಾಳೇಶ್ವರನ ಜಾತ್ರೆಯು ವಿಜಾಪುರ ಜಿಲ್ಲೆಯಲ್ಲೆಲ್ಲ ಬಹು ದೊಡ್ಡದಾಗಿದೆ. ಈ ದೇವಾಲಯುಕ್ಕೋಸ್ಕರ ಭಕ್ತಿಭಾವವನ್ನು ತಾಳಿ ನಡೆದುಕೊಳ್ಳುವವರು ಈ ಭಾಗದಲ್ಲಿಯೂ ನಿಜಾಮು ಇಲಾಖೆಯಲ್ಲಿಯೂ ಅಸಂಖ್ಯ ಜನರಿದ್ದಾರೆ.

## ವಚನಗಳು.

(೧) ಸ್ಥಲಂಗಳನರಿದಿಹೆನೆಂದೊಡೆ, ತ್ರಿವಿಧಸ್ಥಲಕುಳವೆನಗಿಲ್ಲ. ಷಟ್‌ಸ್ಥಲವ ಮುನ್ನವೇ ಅರಿಯೆ. ತತ್ವವನರಿದಿಹೆನೆಂದಡೆ, ಭಕ್ತಿ ಜ್ಞಾನ ವೈರಾಗ್ಯ ತ್ರಿವಿಧ, ಲಕ್ಷವಿಧ, ನಾನಲ್ಲ. ನಿಷ್ಠೆಯಲ್ಲಿ ದೃಷ್ಟವ ಕಂಡೆಹೆನೆಂದಡೆ ವಿಶ್ವಾಸವೆನಗಿಲ್ಲ. ವಿರಕ್ತಿಯಲ್ಲಿ ವೇಧಿಸಿಹೆನೆಂದಡೆ ತ್ರಿವಿಧ ಮಲದ ಮೊತ್ತದೊಳಗೆ ಮತ್ತನಾಗಿದ್ದೇನೆ. ಮತ್ತೆ ನಿಶ್ಚಯುವನರಿದಿಹೆನೆಂದಡೆ ಆತ್ಮಂಗೆ ಲಕ್ಷವಿಡುವುದೊಂದು ಗೊತ್ತ ಕಾಣೆ. ಇಂತೀ ಕಷ್ಟ ತನುವಿನಲ್ಲಿ ಬಂದು ಧೂರ್ತನಾಗಿ ಕೆಟ್ಟುಹೋಗುತ್ತಿದ್ದೇನೆ. ಗುಡಿಸಿದ ಹಿಕ್ಕೆಯಲ್ಲಿ ಬಂದು ತನ್ನ ನಿಷ್ಠೆಯ ತೋರಿ ಎನಗೆ ಸದ್ಭಕ್ತಿಯ ಬೀರಿ ವಿಶ್ವಾಸಗಳಿಗೆಲ್ಲಕ್ಕೆ ಕೃತ್ಯದೊಳಗಾಗಿ ನಿತ್ಯನೇಮಂಗಳಚ್ಚೊತ್ತಿದಂತಿರು. ನೀನೆ ನಿರ್ಮುಕ್ತನಹೆ. ನಿಜನಿತ್ಯನಹೆ. ಜಗಕ್ಕೆ ಕರ್ತುವಹೆ. ಎನ್ನ ಹಿಕ್ಕೆಗೆ ಬಂದು ಸಿಕ್ಕಿದೆಯಲ್ಲ ಮಹಾಮಹಿಮ ವೀರಬೀರೇಶ್ವರಲಿಂಗಾ.

ಈ ವಚನದಲ್ಲಿ ಗೊಲ್ಲಾಳನು ತಾನು ಏನೂ ಅರಿಯದವನೆಂದು ಹೇಳಿಕೊಳ್ಳುತ್ತಿದ್ದಾನೆ. ಆದರೆ ಅವನು ಷಟ್‌ಸ್ಥಲಗಳಲ್ಲಿರುವ ತೊಡಕಿನ ರೀತಿಗಳನ್ನು ಚನ್ನಾಗಿ ಅರಿತವನಾಗಿದ್ದು ಅವುಗಳನ್ನು ಸಾಧಿಸುವದು ತನ್ನಿಂದಾಗದ್ದರಿಂದ ಭಕ್ತಿ, ವಿಶ್ವಾಸಗಳು ತನ್ನಲ್ಲಿ ಉಂಟಾಗಲೆಂದು ಪರಮಾತ್ಮನನ್ನು ಕುರಿತು ಇದರಲ್ಲಿ ಬೇಡಿಕೊಳ್ಳುತ್ತಿದ್ದಾನೆ. ಇದರಲ್ಲಿ ಕುರಿಯ ಹಿಕ್ಕೆಯ ಉಲ್ಲೇಖವಿರುವದನ್ನು ವಾಚಕರು ಲಕ್ಷಿಸತಕ್ಕದ್ದು.

(೨) ಆಡು ಅರುದಿಂಗಳು ಹುಟ್ಟಿ, ಮೂರು ದಿನ ಬದುಕಿ, ಒಂದು ದಿನ ಸತ್ತಿತ್ತು. ಕುರಿ ಕುರುಹ ಮೇದು ಮರಿಗೆ ಮೊಲೆಗೊಟ್ಟಿತ್ತು. ಮರಿ ಮೊಲೆಯ ನುಂಗಿ, ಕುರುಹಿನೊಳಗಡಗಿತ್ತು. ಆಡು, ಕುರಿ, ಬಂದು ಬಟ್ಟೆಯ ಶೋಧಿಸಿಕೊಂಡು ತೋಳನ ತೊಡಕಿನಲ್ಲಿ ಸಾಯದೇ? ಅರಿ ವೀರಬೀರೇಶ್ವರಲಿಂಗವ.

ಇದು ಬೆಡಗಿನ ವಚನವು. ಸಂಸಾರದಲ್ಲಿ ಮಗ್ನನಾಗಿರದೆ ಪರಮಾತ್ಮನನ್ನು ಅರಿಯಬೇಕೆಂಬ ಅಭಿಪ್ರಾಯವು ಇದರಲ್ಲಿದೆ.

(೩) ಹೋತನ ಕೊಯ್ದು, ಕುರಿಯ ಸುಲಿದು, ಮರಿಯ ಕೊರಳನನೊತ್ತಿ, ಕಾವಲ ಕುನ್ನಿಯ ಕೆಡಹಿ, ತೋಳನ ಕುಲವ ಗೆದ್ದು ಕುರುಬನ ಕುರುಹಿನ ಕುಲವಡಗಿ ನೆರೆ ಅರಿವಿನ ಕುಲದಲ್ಲಿ ಅಡಗಬೇಕು ವೀರಬೀರೇಶ್ವರಾ.

ಇದು ಬೆಡಗಿನ ವಚನವು. ಕುರಿಗಳನ್ನು ಕಾಯುವ ತನ್ನ ಕಾಯಕಕ್ಕೆ ತಾತ್ವಿಕಾರ್ಥವನ್ನು ಕೊಟ್ಟಿದ್ದಾನೆ.

(೪) ಹೋತನ ಹೊಡೆದು ಆಡ ಕೂಡಿ, ಕುರಿಯನಿರಿಸಿ, ಟಗರ ತಡೆದು ಹಿಂಡನೊಬ್ಬುಳಿತೆಯ ಮಾಡಿ, ಹುಲಿ, ತೋಳ, ಚೋರರ ಭಯಮಂ ಕಳೆದು ಹಿಂಡಿಗೊಡೆಯನಾಗಿ ಕಾವ ಗೊಲ್ಲಾಳ ನೀನೇ ವೀರಬೀರೇಶ್ವರಾ.

ಈ ವಚನದಲ್ಲಿ ಗೊಲ್ಲಾಳನು ಪರಮಾತ್ಮನ ಸ್ವರೂಪನ್ನು ವರ್ಣಿಸುತ್ತ ಅವನನ್ನು ಕುರಿತು ಪ್ರಾರ್ಥನೆ ಮಾಡುತ್ತಾನೆ. ಕುರುಬನು ಹೇಗೆ ಪ್ರಾರ್ಥನೆ ಮಾಡಬೇಕೋ ಹಾಗೆಯೇ ಇದು ಇದೆ.

(೫) ಕ್ರಿಯೆ ಹಿಡಿದಲ್ಲಿ ಸಂದೇಹಕ್ಕೊಳಗಾಗಿ ನಿಃಕ್ರಿಯೆ ಎಂದಲ್ಲಿ ಆತ್ಮಂಗೆ ಗೊತ್ತುಗಾಣದೆ, ಫಲವಿಲ್ಲದ ವೃಕ್ಷದ ಹೂವ ಕಂಡು ವಿಹಂಗಕುಲ ಚರಿಸದೆ ಮುಚ್ಚಿದಂತೆ ಕಡೆಯಲ್ಲಿ ಹೊಲಬುಗೆಡದೆ ಅರಿ. ನಿಜವಸ್ತು ಬಂದಿತೆಂದು ಕುರಿತ ಕುರುಹಿನಲ್ಲಿ ಕುಲಗೆಡದೆ ಕೂಡು ವೀರಬೀರೇಶ್ವರಲಿಂಗವ.

(೬) ಕೊರಡು ಕೊನರುವಲ್ಲಿ ಬರಡ ಕರೆವಲ್ಲಿ, ಕಲ್ಲಿನ ಶಿಲೆಯೊಡೆದು ರೂಪುದೋರುವಲ್ಲಿ, ಬಳ್ಳವಲ್ಲಾಡದೆ ಲಿಂಗವಾಹಲ್ಲಿ ಇಂತಿವುಗಳಲ್ಲಿಯ ಗುಣವೋ, ಇಂತಿವೆಲ್ಲವನರಿವ ಕಲ್ಲೆದೆಯವನ ಗುಣವೋ? ಇಂತಿವ ಬಲ್ಲಡೆ ವಿಶ್ವಾಸದಲ್ಲಿಯೇ ವೀರಬೀರೇಶ್ವರ ಲಿಂಗವು ತಾನಾಗಿಪ್ಪ.

ಈ ವಚನಗಳಿಂದ ಗೊಲ್ಲಾಳನು ಇಷ್ಟಲಿಂಗ ಧಾರಕನೂ, ಷಟ್‌ಸ್ಥಲಜ್ಞಾನಿಯೂ, ಲಿಂಗಾಂಗಸಾಮರಸ್ಯದ ರೀತಿಯನ್ನು ಅರಿತವನೂ ಆಗಿದ್ದನೆಂದು ತೋರುತ್ತದೆ. ಮೇಲೆ ೩ನೇ ೪ನೇ ವಚನಗಳಿಂದಲೂ ಬೇರೆ

ವಚನಗಳಲ್ಲಿರುವ ಕುರಿ, ಹೋತು, ಆಡುಗಳ ಉಲ್ಲೇಖಗಳಿಂದಲೂ ಗೊಲ್ಲಾಳನು ಗೊಲ್ಲರ ಜಾತಿಯವನಿರದೆ ಕುರಿ ಕಾಯುವ ಕಾಯಕವನ್ನು ಮಾಡುತ್ತಿದ್ದ ಕುರುಬನಾಗಿದ್ದನೆಂದು ನಮಗೆ ತೋರುತ್ತದೆ. ಆದರೆ ಈ ಎಲ್ಲ ವಚನಗಳು ಎಷ್ಟು ಆಳವಾದ ವಿಚಾರಗಳುಳ್ಳವೂ ಗಂಭೀರವಾದವುಗಳೂ ಇರುತ್ತವೆಂಬುದನ್ನು ವಾಚಕರು ಲಕ್ಷಿಸತಕ್ಕದ್ದು. ಇವುಗಳಿಂದ ಗೊಲ್ಲಾಳನು ಅರಿಯದ ತೀರ ಕುರುಬನಾಗಿರದೆ, ಜ್ಞಾನಿಯಾಗಿದ್ದನೆಂಬುದು ಗೊತ್ತಾಗುತ್ತದೆ.

---

## ಪಿಟ್ಟವ್ವೆ

ಕರಿಕಾಲ ಚೋಳನೆಂಬ ಚೋಳರಾಜನು ಕಾಂಚೀ ಪಟ್ಟಣದಲ್ಲಿ ರಾಜ್ಯವಾಳುತ್ತಿದ್ದನು. ಆವನು ಕ್ರಿ॥ ಶ॥ ೧೦೭೦ ರಿಂದ ೧೧೨೦ ರ ವರೆಗೆ ಬಹು ಘನತೆಯಿಂದ ರಾಜ್ಯವಾಳಿದನು. ಅವನ ರಾಜ್ಯದಲ್ಲಿ ಮುದುಗೊಂಡೆ ಎಂಬ ಗ್ರಾಮವಿದ್ದು ಅಲ್ಲಿ ಪಿಟ್ಟವ್ವೆಯೆಂಬ ಹೆಸರಿನ ಶಿವಶರಣೆಯು ವಾಸಮಾಡುತ್ತಿದ್ದಳು. ಅವಳು ಲಿಂಗಾನುಭವಿಯು, ಶಿವಶರಣರ ನಡೆಯಂತೆ ನಡೆಯುವವಳು. ಅವಳು ಮುಪ್ಪಾಗುವ ವರೆಗೂ ಬಹು ಭಕ್ತಿಯಿಂದ ಆಚರಿಸುತ್ತ ಮುಪ್ಪಿನ ಕಾಲದಲ್ಲಿ ಅವಳ ಪರಿಪಾಲನೆ ಮಾಡುವಂಥವರು ಯಾರೂ ಉಳಿಯಲಿಲ್ಲ. ಆದ್ದರಿಂದ ಅವಳು ದಿನಾಲು ದೋಸೆಗಳನ್ನು ಮಾಡುವ ಕಾಯಕವನ್ನು ಕೈಕೊಂಡು ಅವುಗಳನ್ನು ಮಾರಿ ಇದರಿಂದ ಬಂದ ಹಣದಿಂದ ತಾನು ಉಪಜೀವಿಸುತ್ತ ಉಳಿದದ್ದನ್ನು ಗುರು ಲಿಂಗ ಜಂಗಮ ದಾಸೋಹಕ್ಕೆ ಅರ್ಪಿಸುತ್ತ ಬಂದಳು.

ಕರಿಕಾಲ ಚೋಳನು ತನ್ನ ರಾಜ್ಯದಲ್ಲಿ ತನ್ನ ತಾಯಿಯ ಸ್ಮರಣಾರ್ಥವಾಗಿ ನದಿಗೆ ಒಂದು ಬಹು ಬಲವಾದ ಮತ್ತು ವಿಸ್ತಾರವಾದ ಕಟ್ಟೆಯನ್ನು ಕಟ್ಟಿ ನದಿಯ ನೀರು ಹೊಲಗಳಲ್ಲಿ ಹಾಯ್ದು ಬರುವಂತೆ ಮಾಡಿದ್ದನು. ಆದರೆ ಒಂದು ದಿವಸ ವಿಪರೀತ ಮಳೆಯಾಗಲು ಕೆರೆಯ ಕಟ್ಟೆಯು ಒಡೆದು ಹೋಯಿತು. ಆಗ ಚೋಳರಾಜನು ತನ್ನ ರಾಜ್ಯ

ದಲ್ಲಿ ಬಹು ಜನರನ್ನು ಬಿಟ್ಟಿಯಾಗಿ ಹಿಡಿದು ಅವರಿಂದ ಮಣ್ಣು ಅಗಿಸಿ ಕಟ್ಟೆಗೆ ಅದನ್ನು ಹಾಕಿಸಲು ಪ್ರಾರಂಭಿಸಿದನು. ಅವನ ರಾಜ್ಯ ದಲ್ಲಿ ಎಂದೆಂದು ಮಣ್ಣು ಅಗಿಯದಂಥ ಮಾಂಡಲಿಕರೂ ನಿಯೋಗಿ ಗಳೂ ಇದ್ದರು. ಆದರೂ ಅವರನ್ನು ಸಹ ಬಿಡದೆ ಸರತಿಯ ಮೇಲೆ ಎಲ್ಲರಿಂದಲೂ ಮಣ್ಣನ್ನು ಅಗಿಸುತ್ತ ಬಿದ್ದುಹೋದ ಕಟ್ಟೆಯ ಭಾಗವನ್ನು ತುಂಬಿಸುತ್ತ ಬಂದನು. ಅವನ ಆಜ್ಞೆಗೆ ವಿರುದ್ಧವಾಗಿ ಹೋಗಲು ಯಾರಿಗೂ ಧೈರ್ಯವಾಗಲಿಲ್ಲ. ಹೀಗಿರಲು ಮಣ್ಣನ್ನು ಹೊತ್ತು ಹಾಕುವ ಸರತಿಯು ಪಿಟ್ಟವ್ವೆಗೆ ಬಂದಿತು. ಆಗ ರಾಜನ ಸೇವಕರು ಅವಳ ಮನೆಗೆ ಬಂದು ಕಟ್ಟೆಯ ಕೆಲಸಕ್ಕೆ ಬಿಟ್ಟಿಬಾರೆಂದು ಅವಳಿಗೆ ಹೇಳಿ ದರು. ಆಗ ಅವಳು– ಶಿವಶಿವಾ, ನಾನು ಮುಪ್ಪಿನವಳು. ಇದು ನನ ಗಾಗದು ಎನ್ನಲು ಅವರು ಮಣ್ಣು ಹೊತ್ತಲ್ಲದೆ ಕಟ್ಟೆಯ ಕೆಲಸವಾಗದು, ನಡೆ ಎಂದು ಅವಳ ಮೇಲೆ ಬಲಾತ್ಕಾರ ಮಾಡಹತ್ತಿದರು. ಆಗ ಅವಳು––ಅಯ್ಯೋ, ಈ ಮಣ್ಣಿನ ಕೆಲಸ ನನ್ನಿಂದಾಗದು. ನಾನು ಬರುವದಿಲ್ಲೆಂದು ಅನ್ನಲು ಅವರು––ಹಾಗಿದ್ದರೆ ನಿನ್ನ ಸಲುವಾಗಿ ಬೇರೊ ಬ್ಬರನ್ನು ಕೊಡು ಎಂದು ಹೇಳಿದರು. ಅದಕ್ಕೆ ಅವಳು– ಮನೆಯಲ್ಲಿ ರುವವಳು ನಾನೊಬ್ಬಳೇ. ನನಗೆ ಬೇರೆ ಯಾರೂ ಇಲ್ಲ ಎಂದೆನ್ನಲು ಅವರು––ಹಾಗಾದರೆ ನಾವು ಬಿಡುವದಿಲ್ಲ, ನಡೆ ಎಂದು ಅವಳನ್ನು ಬಲಾತ್ಕಾರದಿಂದ ದಬ್ಬಿಕೊಂಡು ಹೋಗಹತ್ತಿದರು.

ಆಗ ಪರಮಾತ್ಮನು ಈ ಅನ್ಯಾಯವನ್ನು ನೋಡಿ ಸಹಿಸಲಾರದೆ ಒಬ್ಬ ರಡ್ಡಿಯ ವೇಷವನ್ನು ಹಾಕಿಕೊಂಡು ಗುದ್ದಲಿಯನ್ನು ಕಯ್ಯಲ್ಲಿ ಹಿಡಿದುಕೊಂಡು ಬಂದು ಪಿಟ್ಟವ್ವೆಗೆ––ನಿನ್ನ ಬಿಟ್ಟಿಯನ್ನು ನಾನು ಮಾಡು ತ್ತೇನೆ. ಅದಕ್ಕೆ ನೀನು ನಿನ್ನ ಕಾಯಕದ ಹರುಕು ಮುರುಕು ದೋಸೆ ಯನ್ನು ಕೊಡುವೆಯಾ? ಎಂದು ಕೇಳಲು ಅವಳು––ಹಾಗೆಯೇ ಆಗಲಿ ಎಂದೆನ್ನಲು, ಅವನು ಆ ರಾಜಸೇವಕರೊಡನೆ ಕೆರೆಗೆ ಬಂದು ಮಣ್ಣನ್ನು ಅಗಿಯುತ್ತ ಕಟ್ಟೆಗೆ ಅದನ್ನು ಪಿಟ್ಟವ್ವೆಯ ಸಲುವಾಗಿ ಹಾಕಹತ್ತಿದನು.

ಶಿವನು ಮಣ್ಣನ್ನು ಅಗಿಯುವಾಗ ಎಲ್ಲರಕ್ಕಿಂತಲೂ ಹೆಚ್ಚಾಗಿ ಕೆಲಸ ಮಾಡುತ್ತಾ ಬಂದನು. ಆದರೆ ಅವನು ಮಧ್ಯದಲ್ಲಿ ಕೆಲಸವನ್ನು ನಿಲ್ಲಿಸಿ ನಾನಾತರದ ವಿನೋದಗಳನ್ನೂ ನೃತ್ಯಗಳನ್ನೂ ವಿಪರೀತವಾಗಿ ಮಾಡ

ಹತ್ತುವನು. ಅರಸನ ಬಲ್ಲಾಳುಗಳು ಅವನು ಬಹಳ ಕೆಲಸಮಾಡಿದ್ದನ್ನು ಅಲಕ್ಷಿಸಿ ನೀನು ಇನ್ನಿಷ್ಟು ಕೆಲಸಮಾಡೆಂದು ಬಯ್ದು ಬೆತ್ತದಿಂದ ಅವನನ್ನು ಹೊಡೆಯಹತ್ತಿದರು. ಆದರೆ ಆ ಪೆಟ್ಟುಗಳು ಅವನಿಗೆ ಹತ್ತದೆ ಅವು ಅರಸನ ಆಳುಗಳಿಗೆಯೇ ಹತ್ತಲು ಅವರು ನೋವಿನಿಂದ ಬಳಲಹತ್ತಿದರು. ಕಟ್ಟೆಯ ಮೇಲೆ ಕೆಲಸ ಮಾಡುವವರೆಲ್ಲ ಇದನ್ನು ನೋಡಿ ಇದು ಬಹು ಚೋದ್ಯವೆಂದು ಶಿವನ ಸುತ್ತಲೂ ಗುಂಪಾಗಿ ನೆರೆದು ಗದ್ದಲಮಾಡಹತ್ತಿದರು. ಅಷ್ಟರಲ್ಲಿ ಕಟ್ಟೆಯ ಮೇಲೆ ಏನೋ ಗಲಾಟೆ ನಡೆದಿದೆಂದು ಕರಿಕಾಲ ಚೋಳನಿಗೆ ತಿಳಿಯಲು ಅವನು ತನ್ನ ನಿಯೋಗಿಗಳೊಂದಿಗೆ ಕೂಡಲೆ ಅಲ್ಲಿಗೆ ಬಂದು ವಿಚಾರಿಸಲು ಒಬ್ಬ ಮಣ್ಣುಹೊರುವವನನ್ನು ಹೊಡೆಯಲು ಹೀಗಾಯಿತೆಂದು ಅವನಿಗೆ ತಿಳಿಯಬಂದಿತು. ಆಗ ರಾಜನು ಇದು ಅವನ ಕೃತಕ ವಿರಬೇಕೆಂದು ತಿಳಿದು ಸೇವಕರಿಗೆ—ಅವನನ್ನು ಇನ್ನೊಮ್ಮೆ ಚನ್ನಾಗಿ ಹೊಡೆಯಿರೆಂದು ಹೇಳಲು ಅವರು ಹಾಗೆಯೇ ಹೊಡೆಯಲು ಆ ಹೊಡೆತಗಳೆಲ್ಲ ಈ ಸಾರೆ ಅರಸನ ನಿಯೋಗಿಗಳಿಗೆಯೇ ತಾಕಿದವು.

ಹೀಗಾಗಲು ಚೋಳರಾಜನು ಆಶ್ಚರ್ಯಬಟ್ಟು ಹೀಗೇಕಾಯಿತೆಂದು ಕೇಳುತ್ತಿರುವಾಗ ಈ ರಡ್ಡಿಯು ಪಿಟ್ಟವ್ವೆಯ ಸಲುವಾಗಿ ಕೆಲಸ ಮಾಡುತ್ತಿದ್ದಾನೆ, ಇಂಥ ಅದ್ಭುತವಾಗಬೇಕಾದರೆ ಅವಳ ಸಲುವಾಗಿ ಪರಮಾತ್ಮನೇ ಅವನ ರೂಪಿನಿಂದ ಇಲ್ಲಿಗೆ ಬಂದು ದುಡಿಯುತ್ತಿರಬೇಕು ಎಂದು ಅವನಿಗೆ ತೋರಿತು. ಆಗ ಅವನು ಭಕ್ತೆಯಾದ ಒಬ್ಬ ಮುದುಕಿಯನ್ನು ಬಿಟ್ಟಿಗೆ ಹಚ್ಚಿದ್ದಕ್ಕೋಸ್ಕರ ಹೀಗಾಯಿತು. ಹೀಗೆ ಬಿಟ್ಟಿ ಕೆಲಸ ತೆಗೆದುಕೊಳ್ಳುವದು ಬಹಳ ಅನ್ಯಾಯವಾದುದು ಇದರಲ್ಲಿ ನಾನೇ ತಪ್ಪುಗಾರನು ಎಂದು ತಿಳಿದು ಅವನು ಅವಳಿದ್ದಲ್ಲಿಗೆ ಹೋಗಿ ಅವಳ ಕ್ಷಮೆಯನ್ನು ಬೇಡಿಕೊಂಡನು. ರಡ್ಡಿಯ ವೇಷದಲ್ಲಿ ಅಲ್ಲಿ ನಿಂತಿದ್ದ ಶಿವನು ಪಿಟ್ಟವ್ವೆಯ ಕಾಯಕದ ಮಹಿಮೆಯನ್ನು ಚೋಳ ರಾಜನಿಗೆ ಹೇಳಿ ಅಲ್ಲಿಯೇ ಅಂತರ್ಧಾನನಾದನು.

ಕರಿಕಾಲಚೋಳನು ಚೋಳರಾಜರಲ್ಲಿ ಬಹು ಬಲಾಢ್ಯನು. ಇಂಥವನ ಬಿಟ್ಟಿಯನ್ನು ತಿರಸ್ಕರಿಸಿದ್ದಕ್ಕೋಸ್ಕರ ಮತ್ತು ಅವನನ್ನು ಕಡೆಗೆ ತನಗೆ ಶರಣಾಗತನಾಗಿ ಮಾಡಿದ್ದಕ್ಕೋಸ್ಕರ ಪಿಟ್ಟವ್ವೆಯು ಶಿವ ಶರಣರಲ್ಲಿ ಬಹು ಪ್ರಸಿದ್ಧಳಾಗಿದ್ದಾಳೆ.

ಪಿಟ್ಟವ್ವೆಯು ಕಾಯಕವು ಕರ್ನಾಟಕದ ಶಿವಶರಣರ ಕಾಯಕ ವನ್ನು ಹೋಲುತ್ತದೆ. ಅವಳು ತಮಿಳು ನಾಡಿನಲ್ಲಿದ್ದರೂ ಅವಳು ಅಲ್ಲಿ ಪ್ರಸಿದ್ಧಳಾಗಿಲ್ಲ. ಆದರೆ ಕರ್ನಾಟಕದ ಶಿವಶರಣರಲ್ಲಿ ಅವಳ ಸ್ಥಾನವು ಬಹಳ ಹೆಚ್ಚಿನದಿರುತ್ತದೆ. ವೀರಶೈವ ಗ್ರಂಥಕಾರರು ಅವ ಳನ್ನು ಆಗಿಂದಾಗ್ಗೆ ಸ್ಮರಿಸುತ್ತಾರೆ. ಆದ್ದರಿಂದ ಅವಳು ಮೊದಲು ಕರ್ನಾಟಕಸ್ಥಳಿದ್ದು ಹಿಂದುಗಡೆ ಅನೇಕ ಶಿವಶರಣರಂತೆ ತಮಿಳು ದೇಶಕ್ಕೆ ಹೋಗಿ ಚೋಳರಾಜ್ಯದಲ್ಲಿ ವಾಸಿಸಿರಬಹುದೆಂದು ತೋರುತ್ತದೆ.

ಕರಿಕಾಲ ಚೋಳನು ಬಸವೇಶ್ವರನಕಿಂತಲೂ ಸ್ವಲ್ಪ ಮೊದಲಿನ ವನಿದ್ದಾನೆ. ಆದ್ದರಿಂದ ಪಿಟ್ಟವ್ವೆಯೂ ಕೂಡ ಅವನಕಿಂತ ಮೊದಲನೆ ಯವಳಾಗುತ್ತಾಳೆ. ಈಕೆಯು ಹೆಸರು ಗಣಸಹಸ್ರದಲ್ಲಿ ಬಂದಿದೆ. ಆಕೆ ಯನ್ನು ದೇವಿಯರ ತ್ರಿವಿದಿಯಲ್ಲಿ ಸ್ತುತಿಸಿರುವದು ಹೇಗೆಂದರೆ—

ಕರಿಕಾಲಚೋಳನಾ। ಕೆರೆಗೆ ಮಣ್ಣಡಕಲ್ಕೆ
ಹರಗುಣಲಿಕ್ಕಿ ಬಿಟ್ಟಿಯವ್ವೆ ಮಾಡಿಸಿದ
ಶಿವಶರಣೆ ಪಿಟ್ಟವ್ವೆ ಶರಣಾಗು

---

## ಒಕ್ಕಲು ಮುದ್ದಯ್ಯ.

ಕರ್ನಾಟಕದಲ್ಲಿ ಜೋಳದಹಾಳೆಂಬ ಪುರವಿದ್ದು ಅಲ್ಲಿ ಒಕ್ಕಲು ಮುದ್ದಯ್ಯನೆಂಬ ಒಕ್ಕಲಿಗನು ವಾಸ ಮಾಡುತ್ತಿದ್ದನು. ಅವನು ಒಕ್ಕಲು ತನವನ್ನು ಮಾಡುತ್ತ ಹದಿನೆಂಟು ತೆರದ ಧಾನ್ಯಗಳನ್ನು ಬೆಳೆದು ರಾಜ ಪಾಲೆಂದು ಕೋರನ್ನು ಮತ್ತು ಸುಂಕಸೊದಿಗೆಯನ್ನು ಸಹ ಅರಸನಿಗೆ ಕೊಟ್ಟು ಸುಖದಿಂದ ಇರುತ್ತಿದ್ದನು. ಆದರೆ ಅವನು ಗುರುಕಾರುಣ್ಯ ವನ್ನು ಹೊಂದಿ ಲಿಂಗಭಕ್ತಿಯನ್ನು ಹೊಂದಬೇಕೆಂಬ ಉತ್ಕಟೇಚ್ಛೆಯು ಳ್ಳವನಾಗಿದ್ದನು. ಆದ್ದರಿಂದ ಅವನು ಯಾವಾಗಲೂ ಈ ಚಿಂತೆಯ ಲ್ಲಿಯೇ ಮಗ್ನನಾಗಿರುತ್ತಿದ್ದನು.

ಹೀಗಿರುವಲ್ಲಿ ಅವನು ಒಂದುದಿನ ಬತ್ತವನ್ನು ಬಿತ್ತುವದಕ್ಕೋ ಸ್ಕರ ನೆಲವನ್ನು ಹದಮಾಡಬೇಕೆಂದು ನೇಗಿಲೆಯನ್ನು ಹೊಡೆಯುವಾಗ

ಅದರ ತುದಿಗೆ ಏನೋ ಒಂದು ತಟ್ಟಿಕೊಂಡು ನೇಗಿಲೆಯು ಮುಂದೆ ಹೋಗದ ಹಾಗಾಯಿತು. ನೆಲದೊಳಗಿದ್ದ ಒಂದು ಕೊರಡು ಅದಕ್ಕೆ ತಟ್ಟಿ ಹೀಗಾಗಿರಬೇಕೆಂದು ತಿಳಿದು, ಮುದ್ದಯ್ಯನು ಅದನ್ನು ಕಡಿಯಬೇಕೆಂದು ಕೊಡಲಿಯನ್ನು ತೆಗೆದುಕೊಂಡು ಬಂದು, ಮಣ್ಣನ್ನು ತೆಗೆಯುವಾಗ ನೆಲದೊಳಗಿಂದ— ಮುದ್ದಯ್ಯ, ನಾನು ಜನರಿಗೆ ಮುಕ್ತಿಯನ್ನು ಕೊಡುವಂಥ ಆದಿನಾಥ ಲಿಂಗವು. ಕೊಡಲಿಯಿಂದ ನನ್ನನ್ನು ಕಡಿಯಬೇಡ. ಹಾರಿಯಿಂದ ಮೆಲ್ಲನೆ ಅಗಿದು ಮಣ್ಣನ್ನು ಹೊರಗು ಮಾಡು ಎಂಬ ಶಬ್ದಗಳು ಹೊರಟವು. ಮುದ್ದಯ್ಯನು ಆಶ್ಚರ್ಯಪಟ್ಟು ಅವನು ಆದರಂತೆಯೇ ಹಾರಿಯಿಂದ ಮಣ್ಣನ್ನು ಸರಿಸಿ ನೋಡಲು, ಒಳಗೆ ಒಂದು ಸ್ವಯಂಭುಲಿಂಗವಿದ್ದದ್ದನ್ನು ಕಂಡನು. ಅವನು ಅದನ್ನು ಹೊರಗೆ ತೆಗೆದು ಅಲ್ಲಿಯೇ ಆದನ್ನು ಬಹು ಭಕ್ತಿಯಿಂದ ಸ್ಥಾಪಿಸಿ ಆದಕ್ಕೆ ಜೋಳದ ಅಂಬಿಲಿಯನ್ನೂ ತುಂಬಿಯ ಸೊಪ್ಪನ್ನೂ ಪಾಕಮಾಡಿ ನೈವೇದ್ಯಮಾಡಿ, ಅದನ್ನು ಲಿಂಗದೆದುರಿಗೆ ಇಟ್ಟು ಅದನ್ನು ಉಣ್ಣಬೇಕೆಂದು ಲಿಂಗಕ್ಕೆ ಪ್ರಾರ್ಥಿಸಿ, ಆ ನೈವೇದ್ಯವನ್ನು ಅಲ್ಲಿಯೇ ಮಡಿಗಿದನು. ಆಗ ಅವನು ಬಹಳ ದಣಿದದ್ದರಿಂದ ಅಲ್ಲಿ ಇದ್ದ ಎಕ್ಕೆಯ ಗಿಡದಡಿಯಲ್ಲಿ ವಿಶ್ರಮಿಸಲು, ಕೂಡಲೆ ಅವನಿಗೆ ನಿದ್ರೆಹತ್ತಿತು.

ಮುಂದೆ ಅವನು ಎಚ್ಚತ್ತು ನೋಡುತ್ತಾನೆಯೇ, ತನ್ನ ಮುಂದೆ ಗುರುರೂಪನ್ನು ಧರಿಸಿದ ಜಂಗಮನೊಬ್ಬನನ್ನು ಕಂಡನು. ಅವನು ಅಲ್ಲಿದ್ದ ಕಕ್ಕೆಯ ಮರವನ್ನೇ ದೀಕ್ಷಾಮಂಟಪವಾಗಿಯೂ ಮರದ ಪುಷ್ಪ ಫಲಗಳನ್ನೇ ಪಂಚಕಳಶವಾಗಿಯೂ ಮಾಡಿ, ಮುದ್ದಯ್ಯನಿಗೆ ಅವನ ಅಪೇಕ್ಷೆಯಂತೆ ವೀರಶೈವ ದೀಕ್ಷೆಯನ್ನಿತ್ತು ಲಿಂಗಾಚಾರವನ್ನು ಬೋಧಿಸಿ ಆ ಆದಿನಾಥ ಲಿಂಗದಲ್ಲಿಯೇ ಐಕ್ಯನಾದನು. ಮುದ್ದಯ್ಯನು ಹೀಗೆ ಆದಿನಾಥಲಿಂಗದಿಂದ ದೀಕ್ಷೆಯನ್ನು ಹೊಂದಿ ತನ್ನ ಒಕ್ಕಲುತನದ ಕಾಯಕವನ್ನು ಮಾಡುತ್ತ ದಾಸೋಹಭಾವದಿಂದ ಇರಹತ್ತಿದನು.

ಹೀಗಿರುವಲ್ಲಿ ಒಂದುದಿನ ರಾಜಸೇವಕರು ಮುದ್ದಯ್ಯನಲ್ಲಿಗೆ ಬಂದು ರಾಜನಿಗೆ ಕೊಡಬೇಕಾದ ತೆರುಗೆಯನ್ನು ಬೇಡಲು ಅವನು ಆದನ್ನು ಕೊಟ್ಟನು. ಆಮೇಲೆ ಆ ಸೇವಕರು ಮತ್ತೆಯೂ ಬೇಡಹತ್ತಲು, ಅವನು ಕೊಡಲಿಲ್ಲಾದ್ದರಿಂದ ಸೇವಕರು ಅವನನ್ನು ತುಡುಕಿ

ನಿರ್ಬಂಧಿಸಹತ್ತಿದರು. ಆದರೆ ಮುದ್ದಯ್ಯನು ಅವರಿಂದ ಬಿಡಿಸಿ ಕೊಂಡು ರಾಜನ ಸಭೆಗೆ ಓಡಿ ಬಂದು— ನಿನ್ನ ಸೇವಕರಿಗೆ ಮೂವತ್ತು ಕೊಳಗದ ಭೂಮಿಗೆ ಅರುವತ್ತು ಹೊನ್ನು ಕೊಟ್ಟದ್ದೇನೆ. ಮತ್ತೆಯೂ ಅವರು ನನ್ನ ಕಡೆಯಿಂದ ಬೇಡುತ್ತಾರಲ್ಲಾ, ಎಂದು ತಿಳಿಸಿದನು. ಅದಕ್ಕೆ ರಾಜನು ಉದಾಸೀನನಾಗಿರಲು, ಮುದ್ದಯ್ಯನು ಅಲ್ಲಿಂದ ಹೊರಟು ಬಂದು ತನ್ನ ಗ್ರಾಮದಲ್ಲಿದ್ದವರ ಮುಂದೆ ಇದನ್ನು ಇಟ್ಟು, ಗುತ್ತಿಗೆಯ ಪ್ರಕಾರ ನಾನು ಕೊಡತಕ್ಕ ಪಟ್ಟಿಯನ್ನು ಕೊಟ್ಟದ್ದೇನೆ, ಅರಸನ ಅಪ್ಪಣೆಯನ್ನು ನಾನು ಮೀರಿಲ್ಲ, ಎಂದು ಅವರಿಂದ ಬರೆಯಿಸಿ ಕೊಂಡು ತನ್ನ ಮನೆಗೆ ಬಂದನು. ಅರಸನು ಮುಂದೆ ಹೆಚ್ಚಿನ ಪಟ್ಟಿಯನ್ನು ಊರಿನವರೆಲ್ಲ ಕೊಡಬೇಕೆಂದು ಅನ್ಯಾಯವಾಗಿ ಎಲ್ಲರ ಮೇಲೆ ಒತ್ತಾಯ ಮಾಡಹತ್ತಿದನು. ಆಗ ಮುದ್ದಯ್ಯನು ತನ್ನ ಲಿಂಗದೊಡನೆ ಹೇಳಿಕೊಂಡದ್ದೇನೆಂದರೆ— "ನಾನು ಮೂರಡಿ ಭೂಮಿಗೆ ಆರು ಹೊನ್ನಿ ನಂತೆ ೬೦ ಹೊನ್ನು ರಾಜನಿಗೆ ಕೊಟ್ಟೆನು. ಇದನ್ನು ಊರವರ ಮುಂದೆ ಇಡಲು ಅವರು ರಾಜನ ಅಪ್ಪಣೆಯನ್ನು ನಾನು ಮೀರಲಿಲ್ಲವೆಂದು ಪಟ್ಟಿಯನ್ನು ಬರೆದುಕೊಟ್ಟಿದ್ದಾರೆ. ಆದರೆ ರಾಜನು ಈಗ ಊರಗೂಡಿ ಹೆಚ್ಚಿನದನ್ನು ಎಲ್ಲರಿಂದಲೂ ಬೇಡಹತ್ತಿದ್ದಾನೆ. ಎಲೆ ಲಿಂಗವೇ, ನಾನು ಅದನ್ನು ಕೊಡುವದಿಲ್ಲ. ಅವನು ಈ ಹಡಿಕೆಯನ್ನು ಪುನಃ ಬೇಡಿದ್ದಾ ದರೆ ನಾನು ಸೆರೆ ಸಂಕೋಲೆಯ ವೇದನೆಯನ್ನು ಸಹಿಸಲು ಸಿದ್ಧನು. ಇನ್ನುಮೇಲೆ ರಾಜನಿಗೆ ಹೆಚ್ಚಿಗೆ ಕೊಟ್ಟೆನಾದರೆ, ಪರಮಾತ್ಮನೇ ನೀನು ನನ್ನ ಹಟ್ಟ, ಕೊಟ್ಟಗೆಯ ಒಡೆಯನಾದ್ದರಿಂದ ನಿನ್ನಾಣೆ. ನಾನು ಕೊಡತಕ್ಕ ತೆರುಗೆಯನ್ನು ಮಾತ್ರ ಅವನಿಗೆ ಕೊಡುವೆನು. ಹೀಗೆ ಕೊಟ್ಟು ನನಗೆ ಉಳಿದ ಧನಧಾನ್ಯದಲ್ಲಿ ದಾಸೋಹ ಮಾಡುತ್ತೇನೆ. ಹೀಗೆ ನಾನು ದಾಸೋಹವನ್ನು ಮಾಡುವಂತೆ ವರವನ್ನು ನಿನ್ನಲ್ಲಿ ನಾನು ಬೇಡಿಕೊಳ್ಳುತ್ತೇನೆ. ನನಗೆ ಬೇರೊಂದು ವರವು ಬೇಡ, ನಿನ್ನ ಗೋಸ್ಕರ ಭಕ್ತಿಯಿಂದಿರುವಿದೇ ನಾನು ಬೇಡುವ ವರವು. ನನ್ನ ಮನ ವೆಂಬ ಧನವನ್ನು ನಿನಗೆ ಸಲ್ಲಿಸುತ್ತೇನೆಯೋ ಹೊರತು ಇನ್ನೊಬ್ಬರಿಗೆ ಅದನ್ನು ಸಲ್ಲಿಸಲಾರೆನು" ಎಂದು ತನ್ನ ಇಷ್ಟಲಿಂಗದಲ್ಲಿ ಭಾಷೆಯನ್ನು ಬಿನ್ನೈಸಿಕೊಂಡನು. ಈ ರೀತಿಯಾಗಿ ಅವನು ಮುಂದೆ ಆಚರಿಸುತ್ತ ಲಿಂಗಾಂಗ ಸಾಮರಸ್ಯವನ್ನು ಹೊಂದಿದನು.

ಈ ಪ್ರಕಾರ ಒಕ್ಕಲು ಮುದ್ದಯ್ಯನು ತನ್ನ ಒಕ್ಕಲುತನ ಕಾಯ ಕವನ್ನು ಮಾಡುತ್ತ ತನಗೆ ದೊಕಿದ್ದರಲ್ಲಿ ಅರಸನಿಗೆ ಕೊಡತಕ್ಕದ್ದನ್ನು ಕೊಟ್ಟು ಅದರಲ್ಲಿ ನ್ಯಾಯುವಾದ ರೀತಿಯಿಂದಲೇ ಉಳಿಸಿಕೊಂಡು ಹೀಗೆ ಉಳಿದುದನ್ನು ದಾಸೋಹ ಕಾರ್ಯಗಳಿಗೆ ಉಪಯೋಗಿಸುತ್ತ ತನ್ನ ಇಷ್ಟ ಲಿಂಗದಲ್ಲಿ ಬೆರೆತಿದ್ದಾನೆ. ಇದು ಮುದ್ದಯ್ಯನ ಒಂದು ಹೊಸ ರೀತಿಯ ಕಾಯಕದ ಮತ್ತು ದಾಸೋಹದ ಬಗೆಯು ಇರುತ್ತದೆ.

ಒಕ್ಕಲುಮುದ್ದಯ್ಯನು ವಚನಕಾರನು. ಅವನ ಕೆಲವು ವಚನಗ ಳನ್ನು ನಾವು ಕೆಳಗೆ ಉದಹರಿಸುತ್ತೇವೆ. ಅವನ ಮುದ್ರಿಕೆಯು "ಕಾಮ ಭೀಮ ಜೀವದನದೊಡೆಯ" ಎಂದಿದೆ. ಪರಮಾತ್ಮನು ಪ್ರಿಯುಕ ರನೂ ಬಲಶಾಲಿಯೂ ಆಗಿದ್ದು ಅವನು ಜಗತ್ತಿನಲ್ಲಿರುವ ಜೀವಿಗಳಿಗೆ ಮತ್ತು ದನಗಳಿಗೆ ಒಡೆಯ, ಎಂಬ ಭಾವವು ಈ ಮುದ್ರಿಕೆಯಲ್ಲಿದೆ. ವಚನಕಾರರ ಮುದ್ರಿಕೆಗಳಲ್ಲಿ ಇದು ತೀರ ಹೊಸತರದ್ದು. ಅಲ್ಲದೆ ಅವನ ಕಾಯಕದ ಮತ್ತು ದಾಸೋಹದ ರೀತಿಯು ನಮ್ಮ ಆಧು ನಿಕರು ವಿಚಾರ ಮಾಡುವಂತಹದಿದೆ.

## ವಚನಗಳು

(೧) ಅಂಗವೇ ಭೂಮಿಯಾಗಿ, ಲಿಂಗವೇ ಬೆಳೆಯಾಗಿ, ವಿಶ್ವಾಸ ವೆಂಬ ಬತ್ತ ಬಲಿದು ಉಂಡು ಸುಖಿಯಾಗಿರಬೇಕೆಂದ ಕಾಮ ಭೀಮ ಜೀವ ದನದೊಡೆಯ.

(೨) ವೇದ ಶಾಸ್ತ್ರವನೋದುವದಕ್ಕೆ ಹಾರುವನಲ್ಲ. ಇರಿದು ಮೆರೆವುದಕ್ಕೆ ಕ್ಷತ್ರಿಯನಲ್ಲ. ವ್ಯವಹರಿಸುವುದಕ್ಕೆ ವೈಶ್ಯನಲ್ಲ. ಉಳುವ ಒಕ್ಕಲು ಮಗನ ತಪ್ಪ ನೋಡದೆ ಒಪ್ಪುಗೊಳ್ಳಯ್ಯ ಕಾಮ ಭೀಮ ಜೀವ ದನದೊಡೆಯ. ನೀನೇ ಬಲ್ಲೆ.

(೩) ಅರುಣನ ಕಿರಣದಿಂದ ಅಪ್ಪುವಿನ ಸಾರ ಪೃಥ್ವಿಯೊಳಗಡ ಗಿದ್ದು ಪೃಥ್ವಿಯ ತಪ್ಪಿಸಿ ತಾನೊಪ್ಪದಲ್ಲಿ ತೆಗೆವಂತೆ ಅರಿವು ಮರವೆ ಪೃಥ್ವಿಯುಪ್ಪುವಿನಂತೆ ಇಪ್ಪ ಭೇದವ ತಾನರಿದು ಜಡ ಅಜಡವೆಂಬುಭಯ ಯುವನರಿವುದು ಸಕಲವೋ ? ನಿಃಕಲವೋ ? ಬೇರೊಂದು ಹೊಲಬೋ? ಇದರ ಹೊಲಬ ನೀನೇ ಬಲ್ಲೆ. ಕಾಮ ಭೀಮ ಜೀವ ದನದೊಡೆಯ ನಾನೆಂದೂ ಅರಿಯೆ.

(೪) ಆವ ವರ್ಣವ ಕೂಡಿದಡೂ ಅಪ್ಪುಮಯ ತಪ್ಪಿದಂತೆ ಸರ್ವಗುಣ ಸಂಪನ್ನನಾದಲ್ಲಿ ಭಕ್ತನೆಂದಡೂ ತಾನಾಗಿ, ಮಹೇಶ್ವರ ನೆಂದಡೂ ತಾನಾಗಿ, ಪ್ರಸಾದಿ ಎಂದಡೂ ತಾನಾಗಿ, ಪ್ರಾಣಲಿಂಗಿ ಎಂದಡೂ ತಾನಾಗಿ, ಶರಣನೆಂದಡೂ ತಾನಾಗಿ, ಐಕ್ಯನೆಂದಡೂ ತಾನಾಗಿ, ಒಂದನಹುದು ಒಂದನಲ್ಲ ಎನ್ನದೆ, ಕತ್ತಲೆಯಲ್ಲಿ ಹಾಲ ಕೊಂಡಡೆ ಸಿಹಿ ತಪ್ಪುವುದೇ ? ಸತ್ತು ಚಿತ್ತಾನಂದವೆಂಬ ಗೊತ್ತು ಹರಿದವಂಗೆ ತಟ್ಟು ಮುಟ್ಟು ಹತ್ತುವ ಭಾವ ಒಂದೂ ಇಲ್ಲ. ಕಾಮ ಭೀಮ ಜೀವ ದನ ದೊಡೆಯ ತಾನು ತಾನೇ.

(೫) ಪೈರಿಗೆ ನೀರು ಬೇಕೆಂಬಲ್ಲಿ ಉಚಿತವನರಿದು ಬಿಡಬೇಕು. ಕ್ರಿಗರಿವು ಬೇಕೆಂಬಲ್ಲಿ ಉಭಯವನರಿದು ಘಟಿಸಬೇಕು. ಏರಿ ಹಿಡಿವನ್ನಕ್ಕ ನೀರ ಹಿಡಿದಡೆ ಸುಖವಲ್ಲದೆ ಮೀರಿದರುಂಟೇ ? ಕ್ರಿಯೆ ಬಿಡಲಿಲ್ಲ. ಅರಿವ ಮರೆಯಲಿಲ್ಲ. ಬೆಳೆಯ ಕಾಯ್ದ ಮತ್ತೆ ಹೊಲಕ್ಕೆ ಕಾವಲುಂಟೇ? ಪವನ ಹೊತ್ತ ಬೆಳೆಯಂತೆ, ಬೆಳೆಯನೊಳಕೊಂಡ ಫಲದಂತೆ, ಅರಿವು ಆಚರಣೆಯಲ್ಲಿ ನಿಂದು ಆಚರಣೆ ಅರಿವಿನಲ್ಲಿ ಲೇಪವಾದ ಮತ್ತೆ ಕಾಮ ಭೀಮ ಜೀವದನದೊಡೆಯನೆಂಬುದ, ಭಾವಿಸಲಿಲ್ಲ.

ಮೇಲಿನ ವಚನಗಳಲ್ಲಿ ಒಕ್ಕಲು ಮುದ್ದಯ್ಯನು ಒಕ್ಕಲುತನ ಮಾಡುವ ರೀತಿಗಳನ್ನು ವಿವರಿಸುತ್ತ ಅವುಗಳ ಮೂಲಕ ಉಚ್ಚತರದ ಪಾರಮಾರ್ಥಿಕ ವಿಚಾರಗಳನ್ನು ಹೇಗೆ ನಿರೂಪಿಸಿದ್ದಾನೆಂಬುದನ್ನು ವಾಚಕರು ಅವಶ್ಯವಾಗಿ ಲಕ್ಷಿಸಬೇಕು. ಕೆಳಗೆ ಕಾಣಿಸಿದ ವಚನದಲ್ಲಿ ಅವನು ತನ್ನ ಅರಸನೊಡನೆ ಉಂಟಾದ ವಿರೋಧವನ್ನು ಕುರಿತು ಹೇಳುತ್ತಾನೆ.

(೬) ಅಯ್ಯಾ, ಮೂರಡಿ ಮಣ್ಣಿಂಗೆ ಆರು ಹೊನ್ನ ತೆತ್ತೆ. ವಿಚಾರಿ ಹಡಿಕೆಯ ಬೇಡೆ, ಗ್ರಾಮದವರ ಮುಂದಿಟ್ಟು ಮೂರಲಿಲ್ಲ ಎಂದು ಪಟ್ಟೆಯ ಕೊಟ್ಟು ಮತ್ತೂರಗೂಡಿ ಹಡಿಕೆಯ ನೀ ಬೇಡಿದಡೆ ನಾ ಕೊಡ ಲಿಲ್ಲ. ನೀ ಕೊಟ್ಟ ಪಟ್ಟೆ ನಮ್ಮ ನಟ್ಟ ನಡುಮನೆಯ ನೆಲನಲ್ಲಿ ಕಟ್ಟಿಯಿದೆ ಕೋ. ನೀ ತಪ್ಪಿದಡೆ ನಿನಗೆ ಹೇಳುವ ಒಡೆಯರುಂಟೆ? ನಾನೊಕ್ಕಲು, ನೀನೊಡೆಯ. ಮೀರಿಕೊಂಡಿಹೆನೆಂದರೆ ಮುನ್ನವೇ ಸೆರೆ ಸಂಕೊಲೆ

ಗೊಳಗು. ಗುತ್ತಿಗೆಗಾರಂಗೆ ಮತ್ತೆ ಕುಳವುಂಟೆ? ಇನ್ನು ಕೊಟ್ಟೆನಾದರೆ ಎನ್ನ ಹಟ್ಟಿ ಕೊಟ್ಟಿಗೆಗೊಡೆಯ ಕಾಮ ಭೀಮ ಜೀವ ದನದಾಣೆ.

ಭಾವಃ— ಈ ವಚನವನ್ನು ಒಕ್ಕಲು ಮುದ್ದಯ್ಯನು ತನ್ನ ರಾಜನಿಗೆ ಉದ್ದೇಶಿಸಿ ಹೇಳುತ್ತಾನೆ. ಅವನು ಹೇಳುವದೇನೆಂದರೆ— ನನ್ನ ಭೂಮಿಗೋಸ್ಕರ ಮೂರಡಿಗೆ ಆರು ಹೊನ್ನಿನಂತೆ ರಾಜನಿಗೆ ಕಂದಾಯವನ್ನು ಕೊಟ್ಟಿದ್ದೇನೆ. ಕೊಟ್ಟರೂ ಹೆಚ್ಚಿಗೆ ಅವನು ಕೊಡಬೇಕೆಂದು ಬೇಡುತ್ತಾ ಇದ್ದಾನೆ. ಇಂಥ ಹಡಿಕೆಯ ಹಣವನ್ನು ಕೊಡುವ ವಿಷಯವನ್ನು ಗ್ರಾಮದವರ ಮುಂದಿಡಲು, ಅವರು ನಾ ಕೊಟ್ಟ ಕಂದಾಯವು ಸರಿಯಾದದ್ದು, ಅರಸನ ಅಪ್ಪಣೆಯನ್ನು ನಾನು ಮೀರಲಿಲ್ಲ ಎಂದು ಬರಹವನ್ನು ನನಗೆ ಕೊಟ್ಟಿದ್ದಾರೆ. ಆದರೂ ರಾಜನು ಊರವರನ್ನೊಡಗೊಂಡು ಪುನಃ ನನ್ನಿಂದ ಹಡಿಕೆಯನ್ನು ಬೇಡುತ್ತಾನೆ. ಅದನ್ನು ನಾನು ಕೊಡಲಿಲ್ಲ. ಅರಸನು ಕೊಟ್ಟಂಥ ಪಟ್ಟಿಯು ನನ್ನ ಮನೆಯಲ್ಲಿದೆ. ಆದರೂ ಅವನು ಹೆಚ್ಚಿಗೆ ಬೇಡಿದರೆ ಅವನಿಗೆ ತಿಳಿಸಿ ಹೇಳುವ ಒಡೆಯರಾರು? ಯಾಕಂದರೆ ನಾನು ಒಕ್ಕಲು ಆಗಿದ್ದೇನೆ. ಮತ್ತು ಅವನು ನನ್ನ ಒಡೆಯನು. ಆದರೂ ಅವನು ಮೀರಿ ಕಂದಾಯವನ್ನು ತೆಗೆದುಕೊಳ್ಳುವೆನೆಂದರೆ, ನಾನು ಅವನ ಸೆರೆ ಸಂಕೋಲೆಯ ಬಂಧನವನ್ನು ಹೊಂದಲು ಸಿದ್ಧನಿದ್ದೇನೆ. ಆದರೆ ಇದರಿಂದ ಗುತ್ತಿಗೆಗಾರರಿಗೆ ಕುಳಗಳು ಉಳಿಯಲಾರವು. ರಾಜನೇ, ನಾನು ನಿನಗೆ ಈ ಹೆಚ್ಚಿನ ಕಂದಾಯವನ್ನು ಕೊಟ್ಟೆನಾದರೆ, ನನ್ನ ಹಟ್ಟಿ ಕೊಟ್ಟಿಗೆಗೆ ನಿಜವಾದ ಒಡೆಯನಾದ ಪರಮಾತ್ಮನ ಆಣೆ ಎಂದು ಹೇಳುತ್ತಾನೆ. ಅಂದರೆ ತನ್ನ ಹಟ್ಟಿ ಕೊಟ್ಟಿಗೆಯ ಒಡೆಯನು ರಾಜನಲ್ಲ, ಆದರೆ ಪರಮಾತ್ಮನು, ಎಂಬ ಭಾವವನ್ನು ಇಟ್ಟುಕೊಂಡು ವಚನಕಾರನು ಈ ವಚನವನ್ನು ಪ್ರತಿಜ್ಞಾಪೂರ್ವಕವಾಗಿ ನುಡಿದಿದ್ದಾನೆ.

ಈ ಕಡೆಯ ಆರನೆಯ ವಚನದಿಂದ ಮುದ್ದಯ್ಯನಿದ್ದ ಕಾಲದಲ್ಲಿ ರಾಜರು ಕಂದಾಯವನ್ನು ಹೇಗೆ ವಸೂಲು ಮಾಡುತ್ತಿದ್ದರೆಂಬದು ಕೆಲಮಟ್ಟಿಗೆ ತಿಳಿದು ಬರುತ್ತಿದೆ. ಅವರು ಪ್ರತಿಯೊಬ್ಬ ಒಕ್ಕಲಿಗನು ಕಂದಾಯವನ್ನು ಎಷ್ಟು ಕೊಡಬೇಕೆಂಬುದನ್ನು ಈಗಿನಂತೆ ನಿರ್ಧರಿಸದೆ ಗ್ರಾಮದವರೆಲ್ಲರೂ ಕೂಡಿ ಒಟ್ಟಾಗಿ ಎಷ್ಟು ಕೊಡಬೇ

ಕೆಂಬುದನ್ನು ಅವರು ಗೊತ್ತುಪಡಿಸಿ ಅದನ್ನು ವಸೂಲು ಮಾಡಲಿಕ್ಕೆ ಗುತ್ತಿಗೆಗಾರರನ್ನು ನೇಮಿಸುತ್ತಿದ್ದಂತೆ ತೋರುತ್ತದೆ. ಈ ಗುತ್ತಿಗೆ ಗಾರರು ಹಳ್ಳಿಯ ಪಂಚರ ಸಹಾಯದಿಂದ ಕಂದಾಯವನ್ನು ವಸೂಲು ಮಾಡಿ ರಾಜರಿಗೆ ಅದನ್ನು ಕಳಿಸಿಕೊಡುವರು. ಅವರು ಈ ಕಂದಾ ಯವಲ್ಲದೆ ಅನ್ಯಾಯವಾಗಿ ಹೆಚ್ಚಿಗೆ ಹಣವನ್ನು ತಮ್ಮಗೋಸ್ಕರ ಎತ್ತು ತ್ತಿದ್ದುದನ್ನು ಈ ವಚನದಲ್ಲಿ ಹೇಳಿದೆ. ಹೀಗೆ ಅವರು ಎತ್ತುವದನ್ನು ಒಕ್ಕಲು ಮುದ್ದಯ್ಯನು ವಿರೋಧಿಸಿದ್ದಾನೆ. ಅವನು ವಿರೋಧಿಸುವ ಪೂರ್ವದಲ್ಲಿ ನ್ಯಾಯವಾಗಿ ತಾನೆಷ್ಟು ರಾಜನಿಗೆ ಕೊಡಬೇಕೆಂಬುದನ್ನು ಊರವರಿಗೆ ರಾಜನು ಕೊಟ್ಟ ಪಟ್ಟಿಯ ಮೂಲಕ ಮೊದಲು ಗೊತ್ತು ಪಡಿಸಿಕೊಳ್ಳುತ್ತಾನೆ. ಇದರಿಂದ ರಾಜರು ಊರವರು ಕೊಡತಕ್ಕ ಕಂದಾಯದ ವಿಷಯವಾಗಿ ಕೆಲವೊಂದು ಬರಹವನ್ನು ತಯಾರಿಸು ತ್ತಿದ್ದು ಇದಕ್ಕೆ 'ಪಟ್ಟಿ' ಎಂಬ ಹೆಸರಿದ್ದಹಾಗೆ ತೋರುತ್ತದೆ. ಗುತ್ತಿಗೆ ಗಾರನು ಇದರಲ್ಲಿ ನಿರ್ದೇಶವಾದದ್ದಕ್ಕಿಂತಲೂ ಹೆಚ್ಚು ಹಣ ಬೇಡಲು ಮುದ್ದಯ್ಯನು ಮೊದಲು ಅರಸನನ್ನುಕಂಡು ಅವನಿಗೆ ಈ ವಿಷಯ ವಾಗಿ ದೂರು ಹೇಳಿದ್ದಾನೆ. ಆದರೆ ಅರಸನು ಅದನ್ನು ಅಲಕ್ಷಿಸಿದ ಹಾಗೆ ತೋರುತ್ತದೆ. ಆ ಮೇಲೆ ಮುದ್ದಯ್ಯನು ಅರಸನ ಅನ್ಯಾಯ ವನ್ನು ಊರವರ ಮುಂದೆ ಇಡಲು ಅವರು ಅವನನ್ನು ಸಮರ್ಥಿಸಿ ದ್ದಾರೆ. ಇದರ ತರುವಾಯ ಅರಸನು ಹೆಚ್ಚಿನ ಹಣವನ್ನು ಅನ್ಯಾ ಯವಾಗಿ ಊರಿನ ಎಲ್ಲ ಜನರಿಂದ ಬೇಡಿದ ಹಾಗೆ ಈ ವಚನದಲ್ಲಿ ಹೇಳಿದೆ. ಆಗ ಒಕ್ಕಲು ಮುದ್ದಯ್ಯನು ಅದನ್ನು ತಾನು ಕೊಡುವ ವದಿಲ್ಲೆಂದು ಇಲ್ಲಿ ಪ್ರತಿಜ್ಞೆಮಾಡಿದ್ದಾನೆ. ಅವನು ಹೀಗೆ ಕಂದಾಯ ವನ್ನು ಕೊಡದಿದ್ದರ ಪರಿಣಾಮವೇನಾಯಿತೆಂಬುದು ಮಾತ್ರ ಈ ವಚನ ದಲ್ಲಾಗಲಿ ಇಲ್ಲವೆ ಅವನ ಚರಿತ್ರೆಯಲ್ಲಾಗಲಿ ಹೇಳಿಲ್ಲ. ಅವನು ತನ್ನ ಪ್ರತಿಜ್ಞೆಯನ್ನು ನಡಿಸಿದಂತೆ ತೋರುತ್ತದೆ. ಹೀಗೆ ತನ್ನ ಒಕ್ಕಲುತನ ಕಾಯಕವನ್ನು ನಡಿಸುತ್ತ ಮುದ್ದಯ್ಯನು ತನ್ನ ಇಷ್ಟಲಿಂಗದಲ್ಲಿ ಐಕ್ಯ ವಾದನೆಂದು ಈ ವಚನದಿಂದ ತಿಳಿದು ಬರುತ್ತಿದೆ.

ಕಾಯಕ ಮಾಡುವಲ್ಲಿ ಶರಣನು ನ್ಯಾಯವಾದದ್ದಕ್ಕೋಸ್ಕರ ಮಾತ್ರ ಹಣವನ್ನು ವೆಚ್ಚ ಮಾಡತಕ್ಕದ್ದು, ಅನ್ಯಾಯವಾದದ್ದಕ್ಕೋ ಸ್ಕರ ವೆಚ್ಚಮಾಡಬಾರದೆಂಬ ಭಾವವು ಇದರಲ್ಲಿದೆ. ಹೀಗೆ ಮಾಡು

ವಲ್ಲಿ ಏನಾದರೂ ಹಣ ಉಳಿದರೆ ಅದನ್ನು ಅವನು ದಾಸೋಹಕ್ಕೆ ಅಂದರೆ ಗುರು ಲಿಂಗ ಜಂಗಮಕ್ಕೋಸ್ಕರ ಮತ್ತು ತಾನು ಮಾಡ ತಕ್ಕ ಸತ್ಕಾರ್ಯಗಳಿಗೋಸ್ಕರ ವಿನಿಯೋಗಿಸತಕ್ಕದ್ದು. ಇದು ಶಿವಶರ ಣರ ನಡೆಯಾಗಿರುತ್ತದೆ. ಈ ತತ್ವಗಳು ಒಕ್ಕಲು ಮುದ್ದಯ್ಯನ ಚರಿತ್ರೆ ಯಲ್ಲಿ ಅಡಕವಾಗಿರುತ್ತವೆ.

ಪಿಟ್ಟವ್ವೆಯಾದರೂ ಒಕ್ಕಲು ಮುದ್ದಯ್ಯನಂತೆ ಅರಸನ ಅನ್ಯಾ ಯದ ಕಾರ್ಯಗಳನ್ನು ವಿರೋಧಿಸಿದ್ದಾಳೆ. ಅವಳು ಹೀಗೆ ವಿರೋಧ ಮಾಡುತ್ತಿರುವಲ್ಲಿ ಕಡೆಗೆ ಅವಳಿಗೆ ಜಯವು ಪ್ರಾಪ್ತವಾಗಿರುತ್ತದೆ. ಕಡೆಗೆ ಒಬ್ಬ ಬಲಾಢ್ಯರಾಜನು ಸಹ ಅವಳಿಗೆ ಸನ್ಮಾನಮಾಡುವ ಪ್ರಸಂಗವು ಬಂದಿತು.

ಶಿವಶರಣರು ಬಹುತರವಾಗಿ ಬಡವರು. ಅವರು ತಮ್ಮ ಶಿವಾ ನುಭವದಂತೆ ನಡೆಯುವಲ್ಲಿ ಉಚ್ಚವರ್ಗದವರ ಹಗೆತನಕ್ಕೆ ಗುರಿಯಾ ಗುವ ಪ್ರಸಂಗಗಳು ಅವರಿಗೆ ಆಗಿಂದಾಗ್ಗೆ ಬರುತ್ತಿದ್ದವು. ಅರಸರ ಬಲಾತ್ಕಾರಗಳನ್ನೂ ಸಹ ವಿರೋಧಿಸುವ ಪ್ರಸಂಗಗಳು ಅವರಿಗೆ ಬಂದಿವೆ. ಆಗ ಅವರು ಹೇಗೆ ನಡೆದರೆಂಬುದನ್ನು ಒಕ್ಕಲು ಮುದ್ದಯ್ಯ ಮತ್ತು ಪಿಟ್ಟವ್ವೆ ಇವರ ಚರಿತ್ರೆಗಳಿಂದ ನಾವು ಚನ್ನಾಗಿ ಅರಿತುಕೊಳ್ಳ ಬಹುದಾಗಿದೆ.

ಕೆಲವು ಚರಿತ್ರೆಗಳಲ್ಲಿ ಒಕ್ಕಲು ಮುದ್ದಯ್ಯ ಎಂಬ ಹೆಸರಿನ ಬದಲಾಗಿ ಒಕ್ಕಲು ಮುಗ್ಧಯ್ಯನೆಂಬ ಹೆಸರು ಬಂದಿರುತ್ತದೆ. ಆದರೆ ಅವನು ಮುಗ್ಧನಾಗಿರದೆ ಜ್ಞಾನಿಯೂ ಶಿವಾನುಭವಿಯೂ ಆಗಿ ಲೌಕಿಕ ವ್ಯವಹಾರದಲ್ಲಿ ಜಾಣನಾಗಿದ್ದನೆಂದು ಅವನ ವಚನಗಳಿಂದ ತಿಳಿದು ಬರುತ್ತಿದೆ. ಆದ್ದರಿಂದ ಒಕ್ಕಲು ಮುದ್ದಯ್ಯನೆಂಬ ಹೆಸರೇ ನಿಜ ವಾದುದೆಂದು ನಮಗೆ ತೋರುತ್ತದೆ.

---

# ವೈಜವ್ವೆ.

ವೈಜವ್ವೆಯ ಚರಿತ್ರೆಯು ನಿಜಾಮನ ರಾಜ್ಯದಲ್ಲಿರುವ 'ಪರಳಿ ವೈಜನಾಥ' ಎಂಬ ಹೆಸರಿನ ಪ್ರಸಿದ್ಧ ದೇವಾಲಯಕ್ಕೆ ಸಂಬಂಧಿಸಿರುತ್ತದೆ. ಆಕೆಯ ಮೂಲಕವಾಗಿಯೇ ಈ ದೇವಾಲಯವು ಉಂಟಾಗಿರುತ್ತದೆ.

ಪರಳೀಗ್ರಾಮವು ನಿಜಾಮ ಇಲಾಖೆಯಲ್ಲಿ ಬೀಡ ಜಿಲ್ಲೆಯಲ್ಲಿರುವ ಮೋಮಿನಾಬಾದ ಎಂಬ ತಾಲೂಕಿನಲ್ಲಿರುತ್ತದೆ. ಇದು ಗೋದಾವರೀ ತೀರ ಪ್ರದೇಶದಲ್ಲಿ ಅದರ ಬಲಭಾಗದಲ್ಲಿದೆ. ಇದು ಸೊಲ್ಲಾಪುರ ಪಟ್ಟಣದ ಉತ್ತರಕ್ಕೆ ಸುಮಾರು ೧೩೦ ಮೈಲು ದೂರವಿರುತ್ತದೆ. ಗೋದಾವರಿಯು ಪರಳಿಯಿಂದ ಉತ್ತರಕ್ಕೆ ೧೫-೨೦ ಮೈಲುಗಳ ಮೇಲೆ ಹರಿಯುತ್ತಿದೆ. ಇದರ ಪೂರ್ವದ ಹೆಸರು ಪರಿವಳಿಗೆ ಎಂಬುದಾಗಿತ್ತು.

ಈ ಪರಿವಳಿಗೆಗೆ ಸಮೀಪವಾಗಿ ಒಂದು ಶಿವಪುರವಿದ್ದು ಅಲ್ಲಿ ಒಬ್ಬ ಶಿವಭಕ್ತನು ತನ್ನ ಹೆಂಡತಿಯೊಡನೆ ಸುಖವಾಗಿ ವಾಸ ಮಾಡುತ್ತಿದ್ದನು. ಉಭಯ ದಂಪತಿಗಳು ಶಿವನಲ್ಲಿ ಪೂರ್ಣ ವಿಶ್ವಾಸವುಳ್ಳವರು. ಯಾವಾಗಲೂ ಲಿಂಗಪೂಜೆಯಲ್ಲಿ ನಿರತರಾದವರು. ಅವರಿಗೆ 'ವೈಜವ್ವೆ' ಎಂಬ ಹೆಸರಿನ ಮಗಳು ಹುಟ್ಟಿದಳು. ಅವಳು ತನ್ನ ತಾಯಿತಂದೆಗಳಂತೆಯೇ ಲಿಂಗ ಭಕ್ತಿಯುಳ್ಳವಳಾಗಿ ಲಿಂಗಾನುಭವಿಯಾಗಿ ಆಚರಿಸುತ್ತ ಬಂದಳು. ಅವಳು ಹೀಗೆ ಬೆಳೆಯುತ್ತ ಯೌವ್ವನಾವಸ್ಥೆಯನ್ನು ಹೊಂದಿದಳು.

ಹೀಗಿರಲಾಗಿ ವೈಜವ್ವೆಯ ತಂದೆಯ ತಂಗಿಯು ಪರಿವಳಿಗೆ ಗ್ರಾಮದಲ್ಲಿರುತ್ತಿದ್ದಳು. ಅವಳು ಒಂದು ದಿನ ತನ್ನ ಅಣ್ಣನನ್ನು ಕಾಣಲಿಕ್ಕೆಂದು ಅವನಿದ್ದ ಗ್ರಾಮಕ್ಕೆ ಬಂದಳು. ಅವಳು ವೈಜವ್ವೆಯನ್ನು ನೋಡಿ ಅವಳನ್ನು ತನ್ನ ಮಗನಾದ ನೇಮಿಸೆಟ್ಟಿಗೆ ಕೊಡಬೇಕೆಂದು ತನ್ನ ಅಣ್ಣನಿಗೆ ಕೇಳಿದಳು. ಅದಕ್ಕೆ ಅವನು— ನೀವು ಜೈನರು. ನಾವು ಶಿವಭಕ್ತರು. ನೇಮಿಸೆಟ್ಟಿಯು ನನಗೆ ಸೋದರಳಿಯನಾದರೇನಾಯಿತು? ನಾನು ನನ್ನ ಮಗಳನ್ನು ಶ್ರವಣರಿಗೆ ಕೊಡುವದಿಲ್ಲ ಎಂದು ಹೇಳಿದನು. ಅದಕ್ಕೆ ಅವನ ತಂಗಿಯು— ಅಣ್ಣನೇ, ನೀನು

ನಿನ್ನ ಬೆನ್ನುಬಿದ್ದ ತಂಗಿಗೆ ಲೇಸು ಮಾಡಿದೆ. ನಾನು ವೈಜವ್ವೆಯನ್ನು ಎಂದೂ ಬಿಡುವವಳಲ್ಲ. ಅವಳನ್ನು ನನ್ನ ಮಗನಿಗೆ ನೀನು ಕೊಡಲೇ ಬೇಕೆಂದು ಛಲ ಹಿಡಿದು ಮನೆಯಲ್ಲಿ ಕುಳಿತಳು. ಆದರೂ ಅವಳ ಅಣ್ಣನು ಅದಕ್ಕೆ ಒಪ್ಪದಿರಲು ಅವಳು ಎರಡು ಮೂರು ದಿವಸಗಳ ವರೆಗೂ ಉಪವಾಸವಿದ್ದಳು. ಆಗ ಬಂಧುಬಳಗದವರು ಅದನ್ನು ನೋಡಿ ಅಣ್ಣನ ಮನೆಯಲ್ಲಿ ನೆರೆದು ಅವನಿಗೆ— ನೀನು ಹೀಗೆ ಕ್ರೂರತನ ಮಾಡಬೇಡ. ಹಿರಿಯರಲ್ಲಿ ನೆಂಟರಲ್ಲಿ ಹೀಗೆ ಛಲವಿರಬಾರದು. ನಿನ್ನ ತಂಗಿಯು ಜೈನಳಾದರೇನಾಯಿತು? ಅವಳ ಮಗನಿಗೆ ನಿನ್ನ ಮಗಳನ್ನು ಕೊಡುವದೇ ಉಚಿತವಾದದ್ದು ಎಂದು ಹೇಳಲು, ಅವನು ಅದಕ್ಕೆ ಒಪ್ಪಿ ತನ್ನ ತಂಗಿಗೆ— ನನ್ನ ಮಗಳನ್ನು ನಿನ್ನ ಮಗನಿಗೆ ಕೊಟ್ಟೆನು ಎಂದು ಅವಳಿಗೆ ಮಾತನ್ನು ಕೊಟ್ಟನು. ಆಮೇಲೆ ಉಭಯತರು ಲಗ್ನದ ಸಿದ್ಧತೆಯಲ್ಲಿ ತೊಡಗಿದರು.

ಆದರೆ ವೈಜವ್ವೆಯು ಹರನಲ್ಲಿ ಪೂರ್ಣ ಭಕ್ತಿಯುಳ್ಳವಳು. ಅವಳು ತನ್ನನ್ನು ಒಬ್ಬ ಜೈನನಿಗೆ ಕೊಟ್ಟು ಲಗ್ನಮಾಡುತ್ತಾರೆಂಬುದನ್ನು ಕೇಳಿ, ಮನದಲ್ಲಿ ಅತ್ಯಂತವಾಗಿ ನೊಂದು ತನ್ನಲ್ಲಿ— ಈಗ ನಾನೇನು ಮಾಡಲಿ? ನಾನು ಭವಿಯನ್ನು ಸೋಂಕದೆ ಹೇಗಿರಲಿ? ತಿಳಿವಿನಲ್ಲಿ ಹುಟ್ಟಿದ ನಾನು ಮರವೆಯಲ್ಲಿ ಹೇಗೆ ಇರಲಿ? ಪರಮಾತ್ಮನೇ, ನಿನ್ನನ್ನು ಇನ್ನುಮೇಲೆ ನಾನು ಹೇಗೆ ನೆನೆವೆನು? ನೀನು ನನ್ನನ್ನು ರಕ್ಷಿಸು, ರಕ್ಷಿಸು ಎಂದು ಶೋಕಿಸಹತ್ತಿದಳು. ಹೀಗಿರಲು ಆ ದಿನ ರಾತ್ರಿ ಅವಳ ಕನಸಿನಲ್ಲಿ ಪರಮಾತ್ಮನು ಬಂದು— ವೈಜವ್ವೆಯೇ, ನೀನು ಚಿಂತೆ ಮಾಡಬೇಡ. ನಾನು ಯಾವಾಗಲೂ ನಿನ್ನ ಸಮೀಪದಲ್ಲಿರುವೆನು. ನನ್ನನ್ನು ನಂಬು. ನೀನು ನೇಮಿಸೆಟ್ಟಿಯನ್ನು ಮದುವೆಯಾಗು. ಜಗತ್ತಿನಲ್ಲಿ ನಿನ್ನ ಹೆಸರು ಕಡೆಯ ವರೆಗೆ ಉಳಿಯುವಂತೆ ಮಾಡುವೆನು ಎಂದು ಹೇಳಿದನು. ಮರುದಿವಸ ಲಗ್ನ ಕಾರ್ಯವು ಪ್ರಾರಂಭವಾಯಿತು. ಲಗ್ನವು ಮುಗಿಯಿತು. ತಂದೆಯು ಮಗಳನ್ನು ಅಳಿಯನಿಗೆ ಒಪ್ಪಿಸಿದನು. ಅಳಿಯನು ಅವಳನ್ನು ಕರೆದುಕೊಂಡು ತನ್ನ ಗ್ರಾಮವಾದ ಪರಿವಳಿಗೆಗೆ ಬಂದನು.

ಆದರೆ ವೈಜವ್ವೆಗೆ ಗಂಡನ ಮನೆಯಲ್ಲಿ ಎಲ್ಲವೂ ಕತ್ತಲೆಯಾದಂತೆ ತೋರಹತ್ತಿತು. ಅವಳ ಮನಸ್ಸಿನಲ್ಲಿ ಎಷ್ಟುಮಾತ್ರವೂ ಸಮಾಧಾನವಿರಲಿಲ್ಲ. ಅಲ್ಲಿ ತನ್ನ ಲಿಂಗಪೂಜೆಯಲ್ಲಿರಲು ಅವಳಿಗೆ ಎಷ್ಟುಮಾತ್ರವೂ ಅವಕಾಶವಿರಲಿಲ್ಲ. ಆದರೂ ಅವಳು ಯಾವಾಗಲೂ ಲಿಂಗಧ್ಯಾನದಲ್ಲಿಯೇ ಇರುವಳು. ಹರಿಹರ ಮಹಾಕವಿಯು ಅವಳ ಲಿಂಗಾಚರಣೆಯನ್ನು ವರ್ಣಿಸಿರುವದು ಹೇಗೆಂದರೆ— ಆಗ ಅವಳು ಭಸಿತ ರುದ್ರಾಕ್ಷಿಗಳನ್ನು ತನ್ನ ಮನವೆಂಬ ಶರೀರದಲ್ಲಿ ಧರಿಸಿದಳು. ಅದರಲ್ಲಿಯ ಹುಸಿ, ಲೋಭಗಳೆಂಬ ಕಸವನ್ನು ಉಡುಗಿಬಿಟ್ಟಳು. ತನ್ನ ಹೃದಯಕಮಲದ ಕರ್ಣಿಕಾ ಪೀಠದಲ್ಲಿ ಸದಮಳ ಪ್ರಕಾಶ ರೂಪವಾದ ಲಿಂಗವನ್ನು ಸ್ಥಾಪಿಸಿ ಅದು ಬೆಳಗುವಂತೆ ಮಾಡಿದಳು. ತನ್ನ ಮನಸ್ಸು ಎಂಬುದನ್ನು ಅದಕ್ಕೆ ಅರ್ಪಿಸಿದಳು. ಲಿಂಗದ ಬಗ್ಗೆ ಅವಳಲ್ಲಿ ಉಂಟಾದ ಪ್ರೀತಿಯು ಉಸಿರೇ ಅದಕ್ಕೆ ಧೂಪವಾಯಿತು. ತನ್ನ ನೆನಹಿನ ಅರಿವಿನ ಅಚ್ಚ ಬೆಳಗಿನ ಪ್ರಕಾಶವೇ ಅವಳಿಗೆ ದೀಪವಾಯಿತು. ಈ ತೆರದ ಭಕ್ತಿಯೋಗದಿಂದ ಪರಮಾತ್ಮನನ್ನು ಅವಳು ತಣಿಸುತ್ತ ಲಿಂಗಾಂಗ ಸಾಮರಸ್ಯದಲ್ಲಿ ಜೈನನಾದ ಗಂಡನ ಮನೆಯಲ್ಲಿ ಲಿಂಗ ಸುಖದಲ್ಲಿರಹತ್ತಿದಳು. ಅವಳು ಜೈನರಲ್ಲಿದ್ದರೂ ತಿಲದ ತೈಲದಂತೆ ಹೊದ್ದಿಯೂ ಹೊದ್ದದಂತೆ ಇದ್ದಳು. ಹೀಗೆ ಗುಪ್ತಭಕ್ತಿಯಿಂದ ಅವಳು ತನ್ನ ಪತಿಯ ಮನೆಯಲ್ಲಿ ಕಾಲ ಕಳೆಯಹತ್ತಿದಳು.

ಹೀಗಿರಲು ಒಂದು ದಿನ ನೇಮಿಸೆಟ್ಟಿಯು ವೈಜವೆಗೆ— ನಾನು ಇಂದಿನ ದಿನ ಜೈನ ಮುನಿಗಳಿಗೆ ಊಟಹಾಕುತ್ತೇನೆ. ಅವರಿಗೆ ನಾನಾ ತರಹದ ಸೊಗಸಾದ ಅಡಿಗೆಯನ್ನು ಮಾಡು, ಎಂದು ಹೇಳಿ ಆಹಾರ ಪದಾರ್ಥಗಳನ್ನು ತಂದು ಅವಳಿಗೆ ಕೊಡಲು, ಅವಳು ಹಾಲೋಗರ, ಹಾಲುಂಡೆ, ಹಾಲುಮಂಡಿಗೆ, ತರಗು, ಲಡ್ಡುಗೆ, ಇಡ್ಡಲಿಗೆ, ಹಾಲುಪಾಯಸ, ಬೋನ ಮೊದಲಾದ ರುಚಿ ಪದಾರ್ಥಗಳನ್ನು ಸಿದ್ಧಪಡಿಸಿದಳು. ಆಗ ಅವಳು ಮನಸ್ಸಿನಲ್ಲಿ— ಅಕ್ಕಟಾ, ಈ ವಸ್ತುಗಳು ಶಿವನಿಗಾಗಲಿಲ್ಲ. ಅವುಗಳಿಂದ ನಾನು ಮಹೇಶ್ವರರನ್ನು ತೃಪ್ತಿಪಡಿಸಲಿಲ್ಲ. ಅವು ಭವಿಗಳಿಗೆ ಹೋಗುತ್ತವೆ. ನನ್ನ ತಂದೆಯು ನನ್ನನ್ನು ಭವಿಗಳಿಗೆ ಕೊಟ್ಟದ್ದರಿಂದ ಶಿವನೇ, ನಿನ್ನ ಭಕ್ತರ ಸೇವೆ ಮಾಡುವದು ನನ್ನಿಂದ ಆಗದಂತಾಗಿದೆ, ಎಂದು ಮನದಲ್ಲಿ ನೊಂದು ಕಣ್ಣೀರಿಡುತ್ತ ಕುಳಿತಳು.

ಹೀಗೆ ಅವಳು ಕುಳಿತಿರಲು ಶಿವನಿಗೆ ಕರುಣೆಯುಂಟಾಗಿ ಅವನು ಒಬ್ಬ ಜಂಗಮನ ವೇಷವನ್ನು ಧಾರಣ ಮಾಡಿ ನೇಮಿಸೆಟ್ಟಿ ಇದ್ದ ಮನೆಯ ಮುಂದೆ ಬಂದುನಿಂತು— ನಾವು ಪರವೂರಿಂದ ಬಂದಿದ್ದೇವೆ. ನಿಮಗೆ ಶಿವನ ಕರುಣವಾಗಲಿ ಎಂದು ನುಡಿಯಲು ವೈಜವ್ವೆಯು ಆ ಧ್ವನಿಯನ್ನು ಕೇಳಿ ಹೊರಗೆ ಬಂದು ಅಲ್ಲಿ ಒಬ್ಬ ಜಂಗಮನು ನಿಂತಿದ್ದನ್ನು ಕಂಡು ಅವಳು ಹರುಷಿತಳಾಗಿ— ನನ್ನ ಬಯಕೆಯು ಈಡೇರಿತು. ನೀವು ಒಳ್ಳೇ ಸಮಯಕ್ಕೆ ಬಂದಿರಿ ಎಂದು ನುಡಿಯುತ್ತ ಅವನಿಗೆ ಸಾಷ್ಟಾಂಗವೆರಗಿದಳು. ಆಮೇಲೆ ಅವಳು ತಾನು ಸಿದ್ಧಮಾಡಿದ್ದ ಪಕ್ವಾನ್ನಗಳನ್ನು ತಂದು ಅವನಿಗೆ ನೀಡಿ— ಇನ್ನುಮೇಲೆ ನೀವು ಇಲ್ಲಿ ನಿಲ್ಲಬೇಡಿರಿ. ಇಷ್ಟರಲ್ಲಿಯೇ ಶ್ರವಣರು ಬರತಕ್ಕವರಿದ್ದಾರೆ. ನೀವು ಅವರ ಕಣ್ಣಿಗೆ ಬೀಳದಂತೆ ಹೋಗಿರಿ, ಎಂದು ನುಡಿದಳು. ಹೀಗೆ ಅವಳು ನುಡಿಯುವಷ್ಟರಲ್ಲಿಯೇ ನೇಮಿಸೆಟ್ಟಿಯು ಜಿನ ಮುನಿಗಳನ್ನು ಕರೆದುಕೊಂಡು ಮನೆಯನ್ನು ಪ್ರವೇಶಿಸಿದನು. ಆ ಮುನಿಗಳು ವೈಜವ್ವೆಯು ಊಟದ ಪದಾರ್ಥಗಳನ್ನು ಒಬ್ಬ ಜಂಗಮನಿಗೆ ನೀಡುತ್ತಿರುವದನ್ನು ಕಂಡು ಅವರು ನೇಮಿಸೆಟ್ಟಿಗೆ— ನೀವು ಮಾಡಿದ ಅಡಿಗೆಯನ್ನು ನಾವು ಇನ್ನುಮೇಲೆ ಮುಟ್ಟಲಾರೆವು. ಆ ಗೊರವನು ಅದನ್ನು ಎಂಜಲು ಮಾಡಿದ್ದಾನೆ ಎಂದು ಅಂದು, ಅವರೆಲ್ಲರೂ ಮನೆಯನ್ನು ಬಿಟ್ಟು ಹೊರಟು ಹೋದರು.

ನೇಮಿಸೆಟ್ಟಿಯು ವೈಜವ್ವೆಯು ಮಾಡಿದ್ದನ್ನು ತಿಳಿದವನಾಗಿ ಅತ್ಯಂತ ಕುಪಿತನಾಗಿ ಅವಳಿಗೆ— ನೀನೇನು ಮಾಡಿದೆ? ಅನ್ನವನ್ನು ಜಂಗಮನಿಗೆ ನೀಡಿ ಕೆಡಿಸಿಬಿಟ್ಟೆಯಾ? ಮುನಿಗಳು ಹಸಿದುಕೊಂಡು ಹೊರಟು ಹೋದರು, ಅರುಹನ ವ್ರತಕ್ಕೆ ನೀನು ಭಂಗತಂದೆ, ಎಂದು ನುಡಿದನು. ಅದಕ್ಕೆ ಅವಳು— ಜನರೆಲ್ಲ ಅಡಿಗೆ ಮಾಡುವದು ಅಗ್ನಿಯಿಂದ. ಆದರೆ ಆ ಅಗ್ನಿಯು ಶಿವನ ಹಣೆಗಣ್ಣಿನ ಎಂಜಲು. ಅಂಥ ಎಂಜಲಿಂದಾದ ಆಹಾರವನ್ನು ನೀವೆಲ್ಲ ಉಣ್ಣುವಿರಿ. ಅದನ್ನು ಜಂಗಮನಿಗೆ ನೀಡಿದಲ್ಲಿ ಎಂಜಲು ಹೇಗೆ? ನೀವು ಅರುಹನೆಂದು ಪೂಜಿಸುವ ವಸ್ತುವು ಭೂಮಿಯೊಳಗಿಲ್ಲ. ಅದು ವೇದದಲಿಲ್ಲ. ಶಾಸ್ತ್ರದಲಿಲ್ಲ. ಬತ್ತಲೆಯ ಬೊಂಬೆಗಳನ್ನು ನೀವು ಪೂಜಿಸಿ ಬಳಲುವದೇಕೆ, ಎಂದು ನಿಷ್ಠುರವಾಗಿ ನುಡಿದಳು. ಅದನ್ನು ನೇಮಿಸೆಟ್ಟಿಯು ಕೇಳಿ ಕೆರಳಿದವನಾಗಿ ಅವಳನ್ನು ಹೊಡೆದು

ಬಡೆದು ಘಾಸಿಮಾಡಹತ್ತಿದನು. ಆ ಅಬಲೆಯನ್ನು ಮುಟ್ಟಿ ಮುಟ್ಟಿ ಒಳಿತಾಗಿ ಬಡಿಯಹತ್ತಿದನು. ಆದರೆ ಅವಳನ್ನು ಹೊಡೆದ ಹಾಗೆ ಆ ಹೊಡೆತಗಳು ಪಟ್ಟಣದಲ್ಲಿದ್ದ ಜೈನರಿಗೆಲ್ಲ ತಾಕಹತ್ತಿದವು. ಆದರೆ ಅವರಿಗೆ ಹೀಗೇಕಾಯಿತೆಂಬದು ಮಾತ್ರ ಆಗ ಏನೂ ತಿಳಿಯದೆ ಗಟ್ಟಿಯಾಗಿ ಮೊರೆ ಇಡಹತ್ತಿದರು. ಅಷ್ಟರಲ್ಲಿ ಸೂರ್ಯಾಸ್ತಮಯವಾಯಿತು.

ವೈಜವ್ವೆಯು ಪತಿಯು ಹೊಡೆದ ಪೆಟ್ಟುಗಳಿಂದ ಬಹಳ ನೊಂದು ದುಃಖ ಪಡುತ್ತ ಪರಮಾತ್ಮನ ಸ್ಮರಣೆಯಲ್ಲಿಯೇ ಮಲಗಿದಳು. ಆಗ ರಾತ್ರಿಯಲ್ಲಿ ಶಿವನು ಆಕೆಯ ಕನಸಿನಲ್ಲಿ ಬಂದು—ವೈಜವ್ವೆಯೇ ಅಂಜಬೇಡ, ಚಿಂತಿಸಬೇಡ- ನಾಳೆ ಪಟ್ಟಣದಲ್ಲಿ ಒಂದು ಅದ್ಭುತವಾಗುವದು. ನಾನು ಪಟ್ಟಣದಲ್ಲಿಯ ಜಿನನ ಶಿರವನ್ನೊಡೆದು ಅಲ್ಲಿ ಮೂಡುವೆನು, ಅಂಜಬೇಡ, ಎಂದು ಸಮಾಧಾನ ಹೇಳಿ ಅಂತರ್ಧಾನನಾದನು. ವೈಜವ್ವೆಯು ಅದನ್ನು ಕೇಳಿ—ನನ್ನಮೇಲೆ ಶಿವನ ಕರುಣವಿದೆ ಎಂದು ತಿಳಿದು ಹರುಷಿತಳಾಗಿ ಬೆಳಗಿನಲ್ಲೆದ್ದು ಶಿವನನ್ನು ಸ್ಮರಿಸುತ್ತ ಕುಳಿತಳು.

ಮರುದಿನ ಮುಂಜಾವಿನಲ್ಲಿ ಶ್ರವಣರು ಎಂದಿನಂತೆ ಬಸದಿಗೆ ಹೋಗಿ ಅದರ ಕದವನ್ನು ತೆರೆಯಲು ಪ್ರಯತ್ನಿಸಿದರು. ಆದರೆ ಅದು ತೆರೆಯದೆ ಹೋಯಿತು. ಅವರು ಎಷ್ಟು ಪ್ರಯತ್ನಮಾಡಿದರೂ, ಅದು ತೆರೆಯಲಿಲ್ಲ. ಇದೇನು ಕಂಟಕ ಬಂದಿತೆಂದು ಅವರು ನುಡಿಯುತ್ತಿರಲು ಅವರಲ್ಲೊಬ್ಬನು—ನೇಮಿಸೆಟ್ಟಿಯು ನಿನ್ನೆ ವೈಜವ್ವೆಯನ್ನು ಹೊಡೆದ ಮೂಲಕ ನಾವೆಲ್ಲರೂ ಗಾಸಿಯಾದೆವು. ಆ ಪೆಟ್ಟುಗಳು ನಮ್ಮ ಮೇಲೆ ಬಿದ್ದವು, ಎಂದು ಹೇಳಲು ಅಲ್ಲಿ ನೆರೆದವರು—ನಮಗೂ ಪೆಟ್ಟು ಬಿದ್ದಿವೆ. ಬಸದಿಯ ಬಾಗಿಲು ತೆರೆಯದ್ದಕ್ಕೆ ವೈಜವ್ವೆಯನ್ನು ಹೊಡೆದದ್ದೇ ಕಾರಣವಿರಬಹುದೆಂದು ಅವರಿಗೆ ತೋರಿತು. ಆಗ ಅವರೆಲ್ಲರೂ ಕೂಡಿಕೊಂಡು ವೈಜವ್ವೆ ಇದ್ದಲ್ಲಿಗೆ ಬಂದು ಅವಳಿಗೆ—ನಿನಗಾದ ನೋವಿನಿಂದ ನಾವು ಬಳಲಿದೆವು. ನಮ್ಮನ್ನು ಕ್ಷಮಿಸು. ಅಲ್ಲದೆ ಅರುಹನು ಕದವನ್ನಿಕ್ಕಿಕೊಂಡು ನಮ್ಮನ್ನು ಕಾಡಹತ್ತಿದ್ದಾನೆ. ನೀನು ಅಲ್ಲಿಯ ವರೆಗೆ ಬಂದು ಕದವು ತೆರೆಯುವಂತೆ ಮಾಡು ಎಂದು ಹೇಳಿಕೊಂಡರು.

ಶಿವಾನುಭವ

| ವರ್ಷ ೨೦ | ಡಿಸೆಂಬರ ೧೯೪೫. | ಸಂಚಿಕೆ ೭ |
|---|---|---|

# ಚನ್ನಬಸವೇಶ್ವರ ವಚನ ವಿಶೇಷಗಳು.

(ಲೇ:— ಶ್ರೀ. ಜ. ಪ. ಚನ್ನಬಸವರಾಜದೇಶಿಕೇಂದ್ರ ಸ್ವಾಮಿಗಳವರು,
ಜಗದ್ಗುರು ಶ್ರೀಮನ್ನಿಡುಮಾಮಿಡಿ ಶ್ರೀಶೈಲ ಸಂಸ್ಥಾನ.)

## ಈ ಪೂರ್ವಾಚಾರ್ಯರು ಯಾರು?

ಷಟ್‌ಸ್ಥಲ ಚಕ್ರವರ್ತಿ ಚನ್ನಬಸವಣ್ಣನು ತನ್ನ ಈ ಒಂದೆರಡು ವಚನಗಳಲ್ಲಿ 'ಆಚಾರ್ಯ' ಪದವನ್ನು ಪ್ರಯೋಗಿಸಿದ್ದಾನೆ. ಯಾರಾಹ ರಾಗಲಿ ವಿರಕ್ತರಾಗಿ ಮರಳಿ ವಿಷಯಗಳಿಗೆಳಸಿದರೆ ಅವರನ್ನು ಪೂರ್ವಾಚಾರ್ಯರು ಅಂಗೀಕರಿಸರೆಂದು ಹೇಳಿ ತನ್ನ ಹಿಂದಿದ್ದ ಆಚಾರ್ಯರನ್ನು ಹಾರ್ದಿಕವಾಗಿ ಮನ್ನಿಸಿದ್ದಾನೆ; ಮನನ ಮಾಡಿದ್ದಾನೆ.

> "ಅರ್ಥೇಷಣ, ಪುತ್ರೇಷಣ, ದಾರೇಷಣ ಎಂಬ ಈಷಣ ತ್ರಯವನೆ ಬಿಟ್ಟು ಮುಂಡೆಯ ಬೋಳಿಸಿದ ಬಳಿಕ ಮರಳಿ ಹೊನ್ನಿಂಗೆರಗಿದೊಡೆ ಗುರುದ್ರೋಹ. ಹೆಣ್ಣಿಂಗೆರಗಿದೊಡೆ ಲಿಂಗದ್ರೋಹ. ಮಣ್ಣಿಂಗೆರಗಿದೊಡೆ ಜಂಗಮದ್ರೋಹ. ಆತ ಪೂರ್ವಾಚಾರ್ಯರ ಮೊದಿರ್ಗೆಯೆ?......"

ಎಂದು ಕೇಳುತ್ತಾನೆ. ಇಲ್ಲಿ 'ಪೂರ್ವಾಚಾರ್ಯರ' ಎಂದು ಷಷ್ಠಿ ಬಹುವಚನ ಪ್ರಯೋಗವಿದೆ. ನಾಮನಿರ್ದೇಶವಿಲ್ಲ. ಈ ಪೂರ್ವಾಚಾರ್ಯರು ಯಾರು? ಅಲ್ಲದೆ,

"ಅನುಭಾವವೆಂಬುವದೆಂತೆಂದೊಡೆ, ಆಚಾರ್ಯಂಗೆ ಆಚಾರ್ಯಾನುಭಾವ. ಶಿಷ್ಯಂಗೆ ಶಿಷ್ಯನನುಭಾವ.......ಲಿಂಗಾಂಗಸಂಗ ಸಮರಸೈಕ್ಯದ ಸವೃದ್ಧಿಯನೆ ಬಿಚ್ಚಿ ಷಟ್‌ಸ್ಥಲವೆಂದು ಆ ಷಟ್‌ಸ್ಥಲ ಸಂಯೋಗದ ನೆಲೆಯನರಿದು ನಿರ್ಧರಿಸಿ ನಿಲಬೇಕಾಗಿ ನಾವು ರೂಪು ಕ್ರಿಯಕ್ಕೆ ಮುಖವಾಯಿತ್ತೆಂದರಿದು ಇದೇ ಶ್ರೀಮಹಾ ದೇಶಿಕೇಂದ್ರನ ರಹಸ್ಯ ಬ್ರಹ್ಮನೆಂದು ಹೇಳಿಕೊಟ್ಟು ಅನುಶ್ರುತವ ಮಾಡುವ ಉಪದೇಶವೆಂದು ಗ್ರಹಿಸುವುದು.......ಇದೇ ವಸ್ತುವೆಂದು, ಇದೆ ಷಟ್‌ಸ್ಥಲದ ಮುದ್ದಿಯೆಂದು ಇದು ಕರಗ ಕಟ್ಟಿರ್ದ ಎರಕವೆಂದು, ಆ ದೇಶಿಕೇಂದ್ರನೆಂಬ ಶ್ರೀಗುರುರಾಯನು ಶಿಷ್ಯೋತ್ತಮನಿಗೆ ಬೋಧಿಸಲು, ಆಚಾರ್ಯ ನಿರೂಪಿಸಿದ ಷಟ್‌ಸ್ಥಲದ ಬ್ರಹ್ಮವನು ಮಹಾ ಪ್ರಸಾದವೆಂದು ಕೈಕೊಂಡು ಆ ಮಹಾ ಶ್ರೀಗುರುಲಿಂಗನೆಂಬ ಗುರುಮಾಚಾರ್ಯಂಗೆ ಸಾಷ್ಟಾಂಗ ಪ್ರಣತನಾಗಿ......"

ಅನುಭವದಲ್ಲಿ ಆಚಾರ್ಯನಿಗಿರುವ ಮುಖ್ಯಾಂಗವನ್ನು ಬಿತ್ತರಿಸುವ ಈ ವಚನದಲ್ಲಿ ಆಚಾರ್ಯ, ದೇಶಿಕ ಎಂಬುದಾಗಿ ಹೆಚ್ಚಾಗಿ ಪ್ರಯೋಗವಿರುವುದು ಗಮನಾರ್ಹವಾದುದು. ಈ ಎರಡು ಪದಗಳು 'ಗುರು'ವನ್ನೆ ಗುರಿಯಿಟ್ಟು ಪ್ರಯೋಗಿಸಿದವುಗಳೆಂಬುದಕ್ಕೆ 'ಆ ದೇಶಿಕೇಂದ್ರನೆಂಬ ಶ್ರೀಗುರುರಾಯನು' 'ಗುರುಮಾಚಾರ್ಯಂಗೆ' ಎಂಬ ಪದ ಪ್ರಯೋಗಗಳೇ ಸಬಲ ಸಾಕ್ಷಿಗಳಾಗಿವೆ. ಆದರೆ ಈ ಗುರುಮಾಚಾರ್ಯರು ಯಾರು? ಎಂಬ ಪ್ರಶ್ನೆಗೆ— ಜಿಹಾಸೆಗೆ ಉತ್ತರವನ್ನು ಸಂಶೋಧಕರು ಸಿದ್ಧಗೊಳಿಸಬೇಕಾಗಿದೆ.

## ಶ್ರೀಶೈಲ ಸಿಂಹಾಸನ!

"ಶ್ರೀಶೈಲ ಸಿಂಹಾಸನದ ಮೇಲೆ ಕುಳ್ಳಿರ್ದು, ಆ ಪುರದ ಬಾಗಿಲೊಳು ತಳಿತಳಿಯಂಗಳು, ಆ ಗಿರಿಯ ಸುತ್ತಲು ಗಾಳಿ ದೆಸೆ ದೆಸೆಗೆ ಬೀಸುತ್ತಿರಲು,......ಗುರುಮಾರ್ಗಾಚಾರವಿಡಿದು ಬಂದು, ......ಭರದಿಂದೆ ಶ್ರಿಸ್ಥಾನವನರುಹಿ......ಗಿರಿಯ ಶಿಖರವನೇರಿ,... ಆ ಪುರಕ್ಕೆ ತಾನೆ ಒಡೆಯನಾಗಿ, ಪರಮ ಪರಿಣಾಮದಿಂದೆ ಓಲಾಡುತಿರ್ದರಯ್ಯ......"

ಇದು ಪ್ರಾಣಲಿಂಗಿಯ ಮಹಾಲಿಂಗಸ್ಥಲದ ವಚನ. ಪ್ರಾಣಲಿಂಗಿಯಾದವನು ಮಹಾಲಿಂಗಸ್ಥಲದವನಾಗಬೇಕಾದರೆ ತನ್ನಂತರಂಗದ ತ್ರಿಸ್ಥಾನ (ತ್ರಿಕೂಟ) ವಾಸಿಯಾಗಬೇಕು. ಆ ತ್ರಿಸ್ಥಾನ (ತ್ರಿಕೂಟ) ವನ್ನು ಶ್ರೀಗಿರಿಗೆ ಉಪಮಿಸಿ ಹೇಳುವ ರೂಢಿಯು ವಚನಕಾರರಲ್ಲಿದೆ. ಆದರೆ ಚನ್ನಬಸವಣ್ಣನು ಇಲ್ಲಿ ಬರೀ ಶ್ರೀಗಿರಿಯೆಂದು ಉಪಮಿಸದೆ 'ಶ್ರೀಶೈಲ ಸಿಂಹಾಸನ' ಎಂದು ಉಪಮಿಸುತ್ತಾನೆ. ಹೀಗೆ ಉಪಮಿಸಬೇಕಾದರೆ ಅದಕ್ಕೆ ಮೊದಲೆ ಆಚಾರ್ಯರ 'ಶ್ರೀಶೈಲ ಸಿಂಹಾಸನ'ದ ಏರ್ಪಾಟು ಇದ್ದಿರಬೇಕೆಂದು ಊಹೆಯಾಗುತ್ತದೆ. ಈ ಊಹೆಗೆ ಸಿಂಹಾಸನ ಪದ ಪ್ರಯೋಗವು ಉಪಷ್ಟಂಬಕವಾಗಿ ನಿಂತಿದೆ. 'ಒಡೆಯನಾಗಿ' ಎಂಬ ಪ್ರಯೋಗವೂ ಸಹಾಯಕವಾಗಿದೆ.

## ಮಠಪತಿಯ ಏರ್ಪಾಟು.

> ಕಾಯವೇ ಶಿವಾಲಯ, ಕಮಳಾದ್ಯ ಮಂಟಪವೇ ಸುಖಾಸನ ನೋಡಯ್ಯ! ಜ್ಞಾನಾರೂಢ ಪ್ರಾಜ್ಞೇಶ್ವರನೆಂಬಾತನಲ್ಲಿಗೆ ದೇವರು ನೋಡಯ್ಯ! ಅಲ್ಲಿಪ್ಪ ಇಂಬಿನ ಮಠಪತಿ ಹಂಸದೇವನೆಂಬಾತನಾ ದೇವರ ಪೂಜಿಸುವ......."

ಇದು ಅದೇ ಸ್ಥಲದ ಮತ್ತೊಂದು ವಚನ. ಕಾಯ ಶಿವಾಲಯ. ಕಮಳಾದ್ಯಮಂಟಪ ಸುಖಾಸನ. ಪ್ರಾಜ್ಞೇಶ್ವರನೆ ದೇವರು. ಹಂಸದೇವನೆ ಪೂಜಿಸುವ ಮಠಪತಿ.— ಎಂದು ಶಿವಾಲಯದ ರೂಪಕವಿತ್ತು ಪ್ರಾಣಲಿಂಗಿಯ ಸ್ವರೂಪವನ್ನು ನಿರೂಪಿಸುತ್ತಾನೆ. ಸಮಾಜದ ಸಂಬಂಧಕ್ಕೆ ಒಳಪಟ್ಟ ಅಲ್ಲಲ್ಲಿನ ಸ್ಥಾವರ ದೇವಸ್ಥಾನಗಳ ಪೂಜೆಯು ಇಂದಿಗೂ ಮಠಪತಿಗಳಿಂದಲೇ ನಡೆಯುತ್ತಿರುವಂತೆ ಅಂದೂ ಸಹ ಏರ್ಪಾಟು ಇತ್ತೆಂದು ಇದರಿಂದ ವ್ಯಕ್ತವಾಗುತ್ತದೆ. ಇಲ್ಲದಿದ್ದಲ್ಲಿ ಈ ರೂಪಕ್ಕೆ ಆಶ್ರಯವಿಲ್ಲ. ಇದರಿಂದ ಮಠಪತಿಯ ಪ್ರಾಚೀನತೆ ಸಿದ್ಧವಾಗುತ್ತದೆ. ಇದರೊಡನೆ ಶ್ರೀಶೈಲ ಸಿಂಹಾಸನದ ಪಾಚೀನತೆಯೂ ವ್ಯಕ್ತವಾಗುತ್ತದೆ. ಏಕೆಂದರೆ ಮಠಪತಿಗಳು ಶ್ರೀಶೈಲ ಸಿಂಹಾಸನದ ಅಧಿಕಾರಕ್ಕೆ ಒಳಪಟ್ಟವರು; ಆಡಳತಕ್ಕೆ ಸೇರಿದವರು. ಈ ಕಾರಣದಿಂದ ಮಠಪತಿಯನ್ನು ಏರ್ಪಡಿಸುವ ಅಧಿಕಾರವುಳ್ಳ ಶ್ರೀಶೈಲ ಸಿಂಹಾಸನವು ಮಠಪತಿಗಿಂತ ಮುಂದೆ ಇದ್ದರಲ್ಲವೆ?

# ಶ್ರುತಿಪ್ರಾಮಾಣ್ಯ.

## ೧ ಶಿವೈಕ ನಿಷ್ಠೆಗೆ ಶ್ರುತಿ ಸಾಕ್ಷಿ!

"ಸಾಕ್ಷಿ॥ ಏಕೋದೇವ ನ ದ್ವಿತೀಯ'ನೆಂಬ ಶ್ರುತಿಯನರಿದು ಮತ್ತೆ ದೈವ ಉಂಟೆಂಬ ನೀಚ ಪರವಾದಿಗಳು ನೀವು ಕೇಳಿರೊ!......" (ಪುಟ-೨೬, ವಚನ-೧.)

"‥ ಶ್ರುತಿ॥ ಓಂಭೂವಂ ಓಂಭುವಃ। ಓಂಸ್ವಃ। ಓಂಮಹಃ। ಓಂ ಜನಃ। ಓಂ ಸತ್ಯಂ। ಓಂ ನಿತ್ಯಂ। ಓಂ ತತ್ಸವಿತುರ್ವರೇಣ್ಯಂ। ಭರ್ಗೋದೇವಸ್ಯ ಧೀಮಹಿ। ಧಿಯೋಯೋನಃ। ಪ್ರಚೋದಯಾತ್।' ಇಂತೆಂಬ ಶ್ರುತಿಯೊಳಗೆ ಆ (ವಿಷ್ಣು) ಶಬ್ದವುಳ್ಳೊಡೆ ತೋರಿರೋ!......" (ಪುಟ-೨೬, ವಚನ-೨.)

## ೨ ವೇದಾಗಮವನರಿದರೆ ಆಚಾರ!

"ಭೃತ್ಯಾಚಾರಿಗಲ್ಲದೆ ಭಕ್ತ್ಯಾಚಾರವಳವಡದು, ವೇದಶಾಸ್ತ್ರ ಪುರಾಣಾಗಮವನರಿದ ಸಂಬಂಧಿಗಲ್ಲದೆ ಆಚಾರವಳವಡದು...." (ಪು. ೩೫, ವ. ೪.)

## ೩ ಶ್ರುತ್ಯುಕ್ತಿಗಳಿಂದ ಶಿವದೀಕ್ಷೆ!

"......ಜೀವಾತ್ಮಂ ಪರಮಾತ್ಮಂ ಚ। ಎಂಬ ಶ್ರುತಿಯಿಂದೆ ಆತನ ಆತ್ಮಶುದ್ಧತೆಯಿಂ ಆತನ ಸರ್ವಾಂಗವ ಶುದ್ಧವ ಮಾಡಿ, ಆತನ ತಂದು ಗಣಪಂಙ್ತಿಯಲ್ಲಿ ಕುಳ್ಳಿರಿಸಿ, ಆ ದೀಕ್ಷಿತನ ಜಿಹ್ವೆಯಲ್ಲಿ ಶ್ರುತಿಯನೋದಿಸಿ, ಸಾಕ್ಷಿ॥ ಓಂ ಕರ್ಮಣಾಂ। ಮನಸಾ ವಾಚಾ ಗುರೂಣಾಂ। ಭಕ್ತವತ್ಸಲಃ। ಶರೀರಾರ್ಥಂ ಪ್ರಾಣಂಚ। ಸದ್ಗುರುಭ್ಯೋ ನಿವೇದಯೇತ್॥ ಎಂದು ಮಾನಸೋಚ್ಚರಣೆಯಂ ಮಾಡಿಸಿ, ಆ ಶಿಷ್ಯನ ಭವವಂ ಛೇದಿಸಿ, ಆಮೇಲೆ ಅವನ ಎಬ್ಬಿಸಿ ಚೌಕಮಧ್ಯದಲ್ಲಿ ಕುಳ್ಳಿರಿಸಿ, ಶ್ರುತಿ॥ ಓಂ ಮೇನಕಾ ಮೇನಕಾ। ಎಂಬ ಮಂತ್ರದಿಂದೆ, ಅರ್ಘ್ಯೋದಕವಂ ವಾಮಪ್ರದಕ್ಷಣವಾಗಿ ತಳಿದು......" (ಪು. ೪೬, ವ. ೫.) ಇದು ಶೈವ ಕರ್ಮವಲ್ಲ. ವೀರಶೈವ ಕ್ರಿಯೆ!

## ೪ ಗುರುವೂ ಸಹ ವೇದಜ್ಞನಾಗಿರಬೇಕು!

"....ನಾಲ್ಕು ವೇದದರ್ಥ, ಅಜಪಗಾಯತ್ರಿಯರ್ಥ, ಪ್ರಾಣಾಯಾಮದಿಂದ ಪ್ರಾಣಲಿಂಗ ಸಂಬಂಧವ ಮಾಡುವುದು. ಇಷ್ಟರಲ್ಲಿ ತಾನು ಸ್ವತಂತ್ರನಾದೊಡೆ, ಇಷ್ಟಲಿಂಗವನಾರಿಗಾದೊಡೆಯು ಕೊಡಬಹುದು. ಅಲ್ಲದಿರ್ದೊಡೆ ಅಂಧಕನ ಕೈಯ್ಯ ಅಂಧಕನು ಹಿಡಿದಂತೆ ಕಾಣಾ ಕೂ. ಚ. ಸಂ. ದೇವಾ" (೭೧—೨) ಇವನು ವೀರಶೈವ ಗುರು.

## ೫ ಶ್ರುತಿಯಿಂದ ಭಕ್ತ-ಜಂಗಮರ ಮಹಿಮೆ!

"ಸಾಕ್ಷಿ" ಆಕಾಯ ಭಕ್ತಕಾಯಃ। ಮಮಕಾಯ ಸುಭಕ್ತಯೋಃ! ಎಂಬ ಶ್ರುತಿನೋದುವರಣ್ಣ ಭಕ್ತಂಗೆ ಮಹಂತೋಲಿಂಗ ರೂಪೇಣ ಮಹಂತೋ ಜಂಗಮಸ್ತಥಾ ಎಂಬ ಶ್ರುತಿಯನೋದುವರಣ್ಣ ಜಂಗಮಕ್ಕೆ ......" (೫೪-೬) ಇದು ವೀರಶೈನ ಭಕ್ತ ಜಂಗಮರ ವೈಶಿಷ್ಟ್ಯ!

## ೬ ಲಿಂಗಾರ್ಚಕವೇದಸ್ತುತ್ಯ!

"......ಶಿವಸಂಸ್ಕಾರದಿಂದೆ ಲಿಂಗಕರಣಂಗಳೆಂದೆನಿಸಿ ನಿತ್ಯ ಲಿಂಗಾರ್ಚನೆಯ ಮಾಡಬಲ್ಲಾತನೆ ಶೀಲವಂತನಯ್ಯ. ಆತನ ಶ್ರೀಪಾದವನು ಹಸ್ತವನೆತ್ತಿ ಹೊಗುಳುತ್ತಿರ್ದವು ವೇದಂಗಳು ಸಾಕ್ಷಿ॥ ಓಂ ಅಯಂ ಮೇ ಅಸ್ತು ಭಗವಾನ್। ಅಯಂ ಮೇ ಭಗವತ್ತರಂ। ಅಯಂ ಮೇ ವಿಶ್ವಭೇಷಜಂ ಅಯಂ ಮೇ ತತ್ ಅಯಂ ಪಿತಾ॥ ಇಂತಪ್ಪ ಲಿಂಗಾರ್ಚನೆಯ ಮಾಡಬಲ್ಲಾತನೆ ಸಂಬಂಧಿ ಎನಿಸಿಕೊಳ್ಳ ಬಲ್ಲನಯ್ಯ......" (೬೯-೧)

## ೭ ಶರಣ ಶಿವಸ್ವರೂಪಿ!-ಎಂದುದು ಶ್ರುತಿ.

"......ನಿಜಸಂಧಾನದ ಸಮಾಧಿಯಲ್ಲಿ ನಿಂದು ಲಿಂಗಾರ್ಚನೆಯಂ ಮಾಡುವ ಶಿವಶರಣರ ಪಾದವ ತೋರಯ್ಯ. ಸಾಕ್ಷಿ॥ ವ್ಯಾಪಾರಂ ಸಕಲಂ ತ್ಯಕ್ತ್ವಾ ಸ ರುದ್ರೋ ರುದ್ರಮರ್ಚಯೇತ್॥। ಎಂಬಶ್ರುತಿ ನಿಮ್ಮ ಶರಣರಿಗೆ ಸಂದಿತ್ತು ಕೂ. ಚ. ಸಂ. ದೇವಾ"(೭೪—೧೧)

ಹೀಗೆ ಶ್ರುತ್ಯುಕ್ತಿಗಳನ್ನು ಸಮರ್ಥಕವಾದ ರೀತಿಯಲ್ಲಿ ಸಾದ್ಯಂತವಾಗಿ, ತತ್ವಸಮರ್ಥನೆಗೆ ಸಪ್ರಮಾಣವಾಗಿ ಅಂಗೀಕರಿಸಿದ್ದಾನೆ. ಇದರಿಂದ ಚನ್ನಬಸವಣ್ಣನಲ್ಲಿ ವೇದವಾಙ್ಮಯದ ವಾತ್ಸಲ್ಯವನ್ನು ಕಂಡರಿಯಬಹುದಾಗಿದೆ. ಒಂದು ವಾಙ್ಮಯವನ್ನಾಗಲಿ, ಒಂದು ಮತವನ್ನಾಗಲಿ ಜರಿದು ನುಡಿವುದು ವಿಶ್ವಾತ್ಮರ ವಿಚಾರಕ್ಕೆ - ವಿಜ್ಞಾನಕ್ಕೆ ತಕ್ಕದ್ದಲ್ಲ. ಬೇಡಾದ್ದನ್ನು ಬಿಡಬಹುದೇ ವಿನಹ ಬೈಯುವುದು ಅದ್ವೈತಸ್ಥಿತಿಗೆ ಹಾನಿ! ಸರ್ವಾದ್ವೈತಕ್ಕೆ ಕೊರತೆ! ಈ ತತ್ವವನ್ನು ಚನ್ನಬಸವಣ್ಣನು ಅರಿತಿದ್ದನು. ಅದರಿಂದಲೆ ಆತನು ವಿಪುಲವಾಗಿ ಸಂಸ್ಕೃತ ವಾಙ್ಮಯದ ಶ್ಲೋಕಗಳನ್ನು ತನ್ನ ವಚನಗಳಲ್ಲಿ ನಿರರ್ಗಳವಾಗಿ ಉಪಯೋಗಿಸಿದ್ದಾನೆ; ಉದಹರಿಸಿದ್ದಾನೆ. ಆತನು ಉಪಯೋಗಿಸಿದ ಸಂಸ್ಕೃತ ಶ್ಲೋಕಗಳನ್ನೆಲ್ಲ ಎತ್ತಿ ಒಂದುಗೂಡಿಸಿ ಬರೆದರೆ ಒಂದು ಸಣ್ಣ ಹೊತ್ತಿಗೆಯಾಗಬಲ್ಲುದು. * ಆಗ ಆ ಸಂಸ್ಕೃತ ವಾಙ್ಮಯದಲ್ಲಿ ವೀರಶೈವ ತತ್ವವು ಹೇಗೆ ಪರಿಣತ ಸ್ಥಿತಿಗೆ ಬಂದಿತ್ತೆಂಬುದು ನಿರ್ವಿವಾದವಾಗಿ ನಿರ್ಧಾರವಾಗಿರುತ್ತದೆ. ನಿಮೀಲಿತ ನಯನಗಳನ್ನು ನಿರ್ನಿಮೇಷಗೊಳಿಸುತ್ತದೆ.

ಆಚಾರವಿಚಾರವಿಲ್ಲದೆ ಬರೀ ಬಾಯಿಂದ ಹೇಳುವ ಮಾತುಗಳು-ಮಂತ್ರಗಳು ಅವೆಲ್ಲಿಯವಾಗಲಿ ಅಮಾನ್ಯ! ಅಪ್ರಯೋಜಕ! ಅದು ಪರಿಜ್ಞಾನವಲ್ಲ; ಪರಿಪಾಟ. ಮನಸ್ಸನ್ನು ಮುಟ್ಟಿ ಜೀವನವನ್ನು ಮಾರ್ಪಡಿಸಿ ಹಸನಾಗಿ ಮುಂಗುರಿಯು ಹೊಂಗನಸನ್ನು ನೆನಸನ್ನಾಗಿಸುವಂತಿದ್ದರೆ ಅದು ವೇದವಾಗಲಿ ವಚನವಾಗಲಿ ಇನ್ನಾವುದಾಗಲಿ ಅದೇ ಶಿರೋಧಾರ್ಯ; ಅದೇ ಹೃದಯಸ್ಪರ್ಶಿ; ಅದೇ ಅನುಸರಣೀಯ. ಅದಿಲ್ಲದೆ ಬರೀ ಉದರಪೋಷಣೆಗಾಗಿ ಉಪಯೋಗಿಸುವ ವೇದೋಕ್ತಿಗಳು ಹೇಗೆ, ಅಪ್ರಯೋಜಕಗಳೊ ಹಾಗೆ ವಚನಗಳೂ ಅಪ್ರಯೋಜಕಗಳು:—

"ಹೊರವೇಷದಲಿ ವಿಭೂತಿ ರುದ್ರಾಕ್ಷಿಯನಳವಡಿಸಿಕೊಂಡು
ವೇದಶಾಸ್ತ್ರಪುರಾಣಾಗಮ ಮೊದಲಾಗಿ, ಪುರಾತರ ವಚನ ಬಹು
ಪಾಠಕರು ಎನಿಸಿಕೊಂಡು, ಅನ್ನದಾನ-ವಸ್ತ್ರದಾನ-ಕನ್ಯಾದಾನ-

---

* ಈ ಕೆಲಸವನ್ನು ಬರೆಹವು ಹೊತ್ತಿಗೆಯು ರೂಹನ್ನು ತಾಳುವಯೋಗ ಒದಗಿ ಬಂದಲ್ಲಿ ಮಾಡಬೇಕೆಂಬ ಸಂಕಲ್ಪವಿದೆ.

ಸವರ್ಣದಾನಂಗಳನೀವವರ ಬಾಗಿಲ ಕಾಯ್ದು ಬಣ್ಣದ ಪುತ್ಥಳಿಯಂತೆ ಹೋಗಿ ನಿಂದು, ಹೊಸ್ತಲಲ್ಲಿ ತುಳಿದಾಡಿಕೊಂಡಿಹ ನಿತ್ಯ ನೇಮದ ಹಿರಿಯರೆಲ್ಲರು ನೀವು ಕೇಳಿರೋ. ಸಾಕ್ಷಿ॥ ವಾಯು ವೃದ್ಧ ತಪೋವೃದ್ಧ ವೇದವೃದ್ಧ ಬಹುಶ್ರುತಃ। ಸರ್ವಸಾಧನ ವೃದ್ಧಸ್ಯ ದ್ವಾರೇ ತಿಷ್ಠಂತಿ ಕಿಂಕರಾಃ॥" "ಎಂಬ ಶ್ರುತಿ ದಿಟವಾಯಿತ್ತು. ಇಂತಿವನೆಲ್ಲವನರಿದಂತಹ ಹಿರಿಯರು ಲಕ್ಷ್ಮಿಯ ಮನೆಯ ದ್ವಾರಪಾಲಕರಾದರು. ಆ ಅರುಹಿಂಗೆ ಇದು ವಿಧಿಯೆ? ಎಲೆಲೆ ಕೂ. ಚ. ಸಂಗಯ್ಯ ನೀ ಮಾಡಿದ ಮರಹು."

"...ಹೊರವೇಷದಲ್ಲಿ ನಾಮರೂಪುಕ್ರಿಯೆವಿಡಿದು, ವಾಗ್ಬ್ರಹ್ಮಿಗಳೆನಿಸುವ ವಾಚಾಳಕರಿಗೆಲ್ಲಿಹದೊ? ಅದೆಂತೊ? ಅದೆತ್ತಣ ಸುದ್ದಿಯೊ? ಕೂ. ಚ. ಸಂ. ದೇವಾ?"

ಇವುಗಳಿಂದ ಅರ್ಥಾನುಭವವಿಲ್ಲದವರ ಮಾತುಗಳಾಗಲಿ ಮಂತ್ರಗಳಾಗಲಿ ಅವು ಚನ್ನಬಸವಣ್ಣನಿಗೆ ಮಾನ್ಯವಿಲ್ಲ. ಅವರೂ ನಿಷ್ಪ್ರಯೋಜಕರು—ಎಂಬುದು ವ್ಯಕ್ತವಾಗುವದಲ್ಲದೆ ವೇದವಾಙ್ಮಯದಲ್ಲಿಯೂ ವಚನವಾಙ್ಮಯದಲ್ಲಿಯೂ ಸಹ ಸಮಭಾವಿ, ಸಮಗುಣಗ್ರಾಹಿ ಎಂಬುದು ಚನ್ನಾಗಿ ವಿಶದವಾಗುತ್ತದೆ.

ಚನ್ನಬಸವಣ್ಣನು ಅನ್ಯದೈವಗಳ ಹಳಿಯುತ್ತಾನೆ. ಆದರೆ ಅನ್ಯದೈವಗಳಾವು ಎಂಬುದಕ್ಕೆ ಅವನು ಹೇಳುವುದು ಬೇರೆ. ಅದು ಈ ರೀತಿಃ—

"...ಇನ್ನು ಅನ್ಯದೈವವೆಂಬುವವಾವಾವೆಂದಡೆ, ಪ್ರಾಣೋಪಾನ, ವ್ಯಾನ, ಉದಾನ, ಸಮಾನ, ನಾಗ, ಕೂರ್ಮ, ಕ್ರಕರ, ದೇವದತ್ತ, ಧನಂಜಯ ದಶವಾಯುಗಳುಂಟಾಗಿ ತನ್ನ ತಾನರಿವ ಪುರುಷಂಗೆ ಇವೇ ಅನ್ಯದೈವ ಕಾಣಿರೋ॥"

ಎಂತಹ ಸಹಜವಾದ ಸಾರ್ಥವಾದ ಮಾತಿದು! ವಾಯುಗಳ ಹರಿದಾಟದಿಂದಲೆ ಮನದ ಹರಿದಾಟ! ಏಕನಿಷ್ಠೆಗೆ-ಏಕೈಕವೃತ್ತಿಗೆ ಇವೇ ಭಂಗಕಾರಿಗಳು. ಆದ್ದರಿಂದ ಅವು ಅನ್ಯದೈವಗಳು. ಆ ದಶವಾಯುಗಳನ್ನು ದಮನಮಾಡಬೇಕು. ಅವನ್ನು ದಮನಿಸಬೇಕಾದಲ್ಲಿ ಪ್ರಸಾದ ತತ್ವ ಪ್ರಾಮುಖ್ಯವಾದದು. ಅವನ್ನು ದಮನಿಸಬೇಕಾದಲ್ಲಿ ಪ್ರಸಾದ

ಮೂಲಕ ಪ್ರಯತ್ನಿಸುವುದು. 'ಆಚಾರ ಸಹಿತ ಲಿಂಗಭಕ್ತನಾದೊಡೆ ಅನ್ಯ ಕೃವವೆಂಬುದು ತನ್ನಲ್ಲಿಯೇ ಅರಿಯಬೇಕು.' ಎಂದು ಸಿದ್ಧಾಂತ ಮಾಡಿದ್ದಾನೆ.

ಅಲಿಂಗಿಗಳು ಭವಿಗಳೆಂದು ಬೀಳ್ಗಳೆವುದಕ್ಕಿಂತಲೂ—'ಅರಿಷಡ ರ್ಗಮಲತ್ರಯಂಗಳೆಂಬ ಭವಿಯನರಿಯಬೇಕು.' (೬೯—೧) ಇವನ್ನು ಭಕ್ತರಾಗಿಸಲು ಪ್ರಯತ್ನಿಸಬೇಕು.—ಎಂದು ಹೇಳುವ ಚನ್ನಬಸವಣ್ಣನು ವಿಚಾರಲಹರಿಯಲ್ಲಿ ಎಷ್ಟು ಮುಂದುವರಿದಿದ್ದಾನೆ! ಎಂತಹ ವಿಶ್ವ ವಿಶಾಲ ಸಮಭಾವ ಸ್ವಭಾವದವನಾಗಿದ್ದಾನೆ, ಎಂಬುದನ್ನು ಅರಿಯಬ ಹುದಾಗಿದೆ.

## ಹಿಂದೆ ಸಂದ ಯುಗಂಗಳು!

ಚನ್ನಬಸವಣ್ಣನು ಬ್ರಹ್ಮಸೃಷ್ಟಿಗೆ ತನ್ನ ಹಿಂದೆ ಸಂದ ಯುಗಂಗ ಳೆಷ್ಟೆಂಬುದನ್ನು ನಿರ್ದುಷ್ಟವಾಗಿ ನಿರೂಪಿಸಿದ್ದಾನೆ! ಪ್ರಪಂಚದ ಕಾಲ ಪರಿಮಿತಿಯನ್ನು ಪರಿಗಣಿಸಿದ್ದಾನೆ; ಅದೆಷ್ಟೆಂಬುದನ್ನು ಇಲ್ಲಿ ನೋಡಿರಿ!

"ಹಿಂದೆ ಸಂದ ಯುಗಂಗಳು ಶತಕೋಟಿ ಸಂಖ್ಯೆಯ ಮೇಲೆ
ಏಳುಲಕ್ಷದಸಾವಿರದ ಏಳುನೂರೆಪ್ಪತ್ತು ಯುಗಂಗಳು..." (೨೭-೩)

## ನಾಲ್ಕು ಯುಗಂಗಳ ಕಾಲ.

ಕೃತಯುಗಃ ಚೌತೀಸಲಕ್ಷ ಐವತ್ತಾರು ಸಾವಿರ—೩೪೫೬೦೦೦
ತ್ರೇತಾಯುಗಃ ಹದಿನೇಳುಲಕ್ಷ ಇಪ್ಪತ್ತೆಂಟುಸಾವಿರ—೧೭೨೮೦೦೦
ದ್ವಾಪರಯುಗಃ ಎಂಟುಲಕ್ಷ ಅರವತ್ತುನಾಲ್ಕುಸಾವಿರ— ೮೬೪೦೦೦
ಕಲಿಯುಗಃ ನಾಲ್ಕುಲಕ್ಷ ಮೂವತ್ತೆರಡುಸಾವಿರ — ೪೩೨೦೦೦

ಹೀಗೆಂದು ಸೃಷ್ಟಿಯ ಆದಿಯಿಂದ ತಾನಿರುವ ವರೆಗಿನ ಮತ್ತು ನಾಲ್ಕು ಯುಗಗಳ ಕಾಲಪರಿಮಿತಿಯನ್ನು ಹೇಳಿದ್ದಾನೆ. ನಾಲ್ಕುಯು ಗಗಳ ಈ ಕಾಲ ಹೇಗೆ ದಿಟವೋ ಹಾಗೆ ಹಿಂದೆ ಸಂದ ಯುಗಂಗಳ ಗಣನೆಯೂ ದಿಟವೆಂದೇ ಹೇಳಬೇಕು. ಇದು ಇವನ ಕಾಲಜ್ಞಾನದ ಒಂದು ಕುರುಹು.

## ಕಡೆನುಡಿಗಳು.

ಹನ್ನೆರಡನೆಯ ಶತಮಾನದ ಶಿವಶರಣರ ಕಾಲ ಆಧ್ಯಾತ್ಮಿಕ ಸಾಧ ನೆಯ ಕಾಲವಾಗಿದ್ದಂತೆ ಸಮಾಜ ಸುಧಾರಣೆಯ ಕಾಲವೂ ಆಗಿದ್ದಿತು.

ಹಲಕೆಲ ಶಿವಶರಣರು ಈ ಕಾರ್ಯದಲ್ಲಿ ತವ-ತಮಗೆ ತಕ್ಕಂತೆ ಶಕ್ಯ ವಿದ್ದಷ್ಟು ತೊಡಗಿದರು. ಇಂಥವರಲ್ಲಿ ಚನ್ನಬಸವಣ್ಣನು ಅಗ್ರಗಣ್ಯನು. ಈತನು ನಿಷ್ಪಕ್ಷಪಾತಬುದ್ಧಿಯಿಂದ ನಿರ್ದಾಕ್ಷಿಣ್ಯವಾಗಿ ನಿರ್ದುಷ್ಟಸಿದ್ಧಿ ಯಿಂದ ಸಮಾಜ ಜೀವನವನ್ನ-ಷಟ್‌ಸ್ಥಲಸಿದ್ಧಾಂತವನ್ನು ವಿಮರ್ಶಿ ಸಿದ್ದಾನೆ;- ವಿವರಿಸಿದ್ದಾನೆ. ಕೊರತೆಗಳನ್ನು ತುಂಬಿತಂದು ಕಳೆಗೊಳಿಸಿ ದ್ದಾನೆ. ಇದರ ಫಲವಾಗಿ ವೀರಶೈವರಲ್ಲಿ ಶೈವದ ಎಡೆಯಾಟ-ಹೊಯ್ದಾಟ ನಿಂತು ಸಮಾಜಾಭಿಮಾನವು ಬೇರೂರಿತು. ವಿಶಾಲತತ್ವವು ಕಳೆದುಂಬಿ ಕೊನರಿತು;-ಕಾಯ್ದಿಟ್ಟಿತು. 'ಷಟ್‌ಸ್ಥಲಚಕ್ರವರ್ತಿ'ಯಾಗಿದ್ದಂತೆ 'ಸಮಾಜ ಸುಧಾರಕಾಗ್ರಣಿ'ಯೂ ಆದನು.

ಚನ್ನಬಸವಣ್ಣ ಮಹಾಜ್ಞಾನಿ; ಮಹಾನುಭಾವಿ. ತೇಜಸ್ವಿ; ಓಜಸ್ವಿ. ಸುಧಾರಕ; ವಿಮರ್ಶಕ. ಆತನ ವಚನ ವಾಣಿಯಲ್ಲಿ ಈ ವ್ಯಕ್ತಿತ್ವ ಹೆಜ್ಜೆಹೆಜ್ಜೆಗೂ ಹೊಳೆಯುತ್ತದೆ. ಮಾತುಮಾತಿಗೂ ಮಿಂಚು ತ್ತದೆ. ಚನ್ನಬಸವಣ್ಣನು ಅವಲೋಕಿಸಿದುದನ್ನು ಆಳವಾಗಿ ಆಲೋಚಿ ಸುತ್ತಾನೆ; ಆಲೋಚಿಸಿದ್ದನ್ನು ಅನುಭವಿಸುತ್ತಾನೆ; ಅನುಭವಿಸಿದ್ದನ್ನು ಭಾವಗರ್ಭಿತವಾಗಿ ಬಿಚ್ಚಿ ಆಡುತ್ತಾನೆ. ಆದ್ದರಿಂದ ಅಲ್ಲಿ ಸತ್ವವಿದೆ. ಸತ್ಯವಿದೆ. ಆತನು ತನ್ನ ಹಿಂದಿದ್ದ ತನ್ನೊಡನಿದ್ದ ಸಮಾಜದ ಕೊರ ತೆಗಳನ್ನು ಕಂಡರೀತಿ, ಮುಂಬರಿವ ಸಮಾಜ ಹೇಗೆ ಹೆಜ್ಜೆಹಾಕಬೇ ಕೆಂಬುದನ್ನು ಹೇಳುವ ನೀತಿ ಇವು ಆದರ್ಶವಾಗಿವೆ; ಅನನ್ಯಸಾಧಾರ ಣವಾಗಿವೆ. ಅಲ್ಲದೆ ಆತನ ಜ್ಞಾನಾನುಭವಗಳ ಮೆರಗಿಗೆ ಒರೆಗಲ್ಲಾ ಗಿವೆ. ಜ್ಞಾನದ ರೂಪನ್ನೂ ಅನುಭವದ ತಿರುಳನ್ನೂ ವಚನರೂಪದಲ್ಲಿ ಚನ್ನಾಗಿ ಚಿತ್ರಿಸಿದ್ದಾನೆ. ಸಾಮಾಜಿಕ ಕೊರತೆಗಳನ್ನು ಕಣ್ಣಾರೆ ಕಂಡು ಕಡುನೊಂದು ಸರಿಪಡಿಸಿದ್ದಾನೆ. ಆತನ ಆ ಜ್ಞಾನಾನುಭವಗಳಿಗೆ ಆಗ ಮಾಮ್ನಾಯ ವಚನಗಳು ಬೆಂಬಲವಿದ್ದು ಒಂದು ಹೊಸ ಪ್ರತಿಭೆಯನ್ನು ನವನೈಶಿತ್ಯವನ್ನು ತಂದುಕೊಟ್ಟಿವೆ.

ಬಸವಣ್ಣ ಹೃದಯವನ್ನು ಕರಗಿಸುತ್ತಾನೆ. ಚನ್ನಬಸವಣ್ಣ ಮೆದು ಳನ್ನು ಮೆರಗಿಸುತ್ತಾನೆ. ಬಸವಣ್ಣನದು ಬಾಹ್ಯಚಿಹ್ನವುಳ್ಳ ಸಕಲರನ್ನೂ ಸಂಗನೆಂದು ಭಾವಿಸುವ ಭಕ್ತಿ; ಚನ್ನಬಸವಣ್ಣನದು ಬಾಹ್ಯಾಭ್ಯಂತರ ಗಳನ್ನು ಆಳವಾಗಿ ತಿಳಿದು ಕಾಣುವ ದೃಷ್ಟಿ. ಸಕಲರಲ್ಲಿ ಏಕತ್ವವನ್ನು ಭಾವಿಸುವ ಭಕ್ತಿಗೂ, ಒಂದನ್ನು ಸರ್ವರಲ್ಲಿ ಸಮೀಕ್ಷಿಸುವ ದೃಷ್ಟಿಗೂ

ವ್ಯತ್ಯಾಸವಿಲ್ಲದಿದ್ದರೂ ಮಾರ್ಗ ಬೇರೆ. ಈ ಗುಣದಿಂದ ಎಡಹುವಾಗ ಎತ್ತಿ ಹಿಡಿಯುವ ಶಕ್ತಿ ಚನ್ನಬಸವಣ್ಣನಲ್ಲಿ ಮೈಗೂಡಿ ಬಂದಿದೆ. ಆದ್ದರಿಂದ ಆತ ಅಳಿಯನಾದರೂ ಬಸವಣ್ಣನಿಗೆ ಆದರ್ಶ ವ್ಯಕ್ತಿ! ಹೀಗಿದ್ದರೂ ಚನ್ನಬಸವಣ್ಣನು ಆ ಹೆಮ್ಮೆಯನ್ನು ಇಟ್ಟುಕೊಂಡಿಲ್ಲ. ಸೋದರಮಾವನಾದ ಬಸವಣ್ಣನಲ್ಲಿದ್ದ ತನ್ನ ಪೂಜ್ಯಭಾವವನ್ನು ತೊರೆದವನಲ್ಲ. ಭಕ್ತಿಸಾಮ್ರಾಜ್ಯದಲ್ಲಿ ಬಸವಣ್ಣನನ್ನು ಮನಸಾರೆ ಒಪ್ಪಿದ್ದಾನೆ. ಭಕ್ತಿಯನ್ನೂ ವಿರಕ್ತಿಯನ್ನೂ ತನ್ನ ಜ್ಞಾನಾಗ್ನಿಯ ಮೂಸೆಯಲ್ಲಿ ಬೆಸದಿದ್ದಾನೆ. ಜ್ಞಾನಘನನಾದ ಚನ್ನಬಸವಣ್ಣನು ಜನಿಸದಿದ್ದರೆ, ಭಕ್ತಿಬಲ್ಲಿದನಾದ ಬಸವಣ್ಣನಿಗೂ ವಿರತಿವಿಶಿಷ್ಟನಾದ ಅಲ್ಲಮಪ್ರಭುವಿಗೂ ಸಂದಿಗ್ಧ ಸಮಯದಲ್ಲಿ ಯಾರು ತಾನೆ ಹೊಂದಾವಣಿಕೆ ಮಾಡುತ್ತಿದ್ದರು? ಕೊರತೆಯಿಂದ ಕೂಡಿದ ಸಾಮಾಜಿಕ ಆಚಾರ-ವಿಚಾರಗಳನ್ನು ಇನ್ನಾರು ಪರಿಪೂರ್ತಿಗೊಳಿಸುತ್ತಿದ್ದರು? ಸಾಮಾಜಿಕ ಸಂಪ್ರದಾಯಗಳನ್ನು ಯಾರು ತೊಡೆದುಹಾಕುತ್ತಿದ್ದರು?

ಚನ್ನಬಸವಣ್ಣನ ಜ್ಞಾನ ಅಮೇಯ; ಆತನ ವ್ಯಕ್ತಿತ್ವ ಅನುಪಮೇಯ. ಅವನಿಗೆ ಯಾರೂ ಸಾಟಿಯಿಲ್ಲ. ಚನ್ನಬಸವಣ್ಣನಿಗೆ ಸಾಟಿ ಚನ್ನಬಸವಣ್ಣನೆ! ಹೇಮಗಿರಿಗೆ ಹಿಮಕಣವು ಸಾಟಿಯಾದೀತೆ? ಆತನ ಆ ಜ್ಞಾನದ ಉಜ್ವಲ ಸೀಮೆಗೆ ಗೀಟನ್ನೆಳೆವುದು ಸಾಧ್ಯವಾದೀತೆ?

ಆದರೂ ಈ ಮಾತನ್ನು ಹೇಳದೆ ಸಮಾಧಾನವಿಲ್ಲ. ಚನ್ನಬಸವಣ್ಣನ ಚಿನ್ಮಯ ಜೀವನ ನಿರೀಕ್ಷಣದಲ್ಲಿ ಈ ಮೂರು ಅಂಶಗಳು ನಮ್ಮ ಗಮನವನ್ನು ಸೆಳೆಯುತ್ತವೆ. ೧ ಚನ್ನಬಸವಣ್ಣನು ಆತ್ಮಜ್ಞಾನಿಯಾದನು. ೨ ಸಾಮಾಜಿಕ ಸಂಪ್ರದಾಯಗಳನ್ನು ಕತ್ತರಿಸಿ, ಕೊರತೆಗಳನ್ನು ತುಂಬಿ, ಸಮಾಜ ಸುಧಾರಕನಾದನು; ಷಟ್‌ಸ್ಥಲ ಚಕ್ರವರ್ತಿಯಾದನು. ೩ ರಾಜಕೀಯ ರಂಗಕ್ಕಿಳಿದು ಚಿಕ್ಕ ದಣ್ಣಾಯಕನಾದನು.

ಇದು ಆತನ ವ್ಯಕ್ತಿತ್ವ. ಇನ್ನು ಆತನ ವಾಣಿಯಾದ ವಚನವನ್ನುದ್ದೇಶಿಸಿ ಎರಡು ಮಾತುಗಳನ್ನು ಹೇಳದೆ ತೃಪ್ತಿ ತೀರದು; ಬರೆಹ ಮುಗಿಯದು.

ಆತನ ವಚನ ಆತನು ಸಮಾಜದಲ್ಲಿ ಕೃಷಿ ಮಾಡಿದುದರ ಫಲ. ಜ್ಞಾನಾನುಭವಗಳ ರಸಘಟ್ಟಿ. ಷಟ್‌ಸ್ಥಲ ಸಿದ್ಧಾಂತದ ಸರ್ವಸ್ವ. ಆಗಮ

ಪ್ರಾಮಾಣ್ಯಗಳ ಅಂಗೀಕಾರಕ್ಕೆ ಆಗರ. ವಿಮರ್ಶೆ–ವಿವರಣೆಗಳ ಮೂಲಕ ಸಾಮಾಜಿಕ ಆಧ್ಯಾತ್ಮಿಕ ನೀತಿ ನಿಯಮಗಳ ಪ್ರತಿಪಾದನೆ--ಪಾಲನೆ ನಡೆದಿವೆ ಅದರಲ್ಲಿ!

ಬಸವಣ್ಣನ ವಚನದಲ್ಲಿ ಆತನ ಸಾಧನಜೀವನ ಹೋರಾಟವು ಹೊರಹೊಮ್ಮುವಂತೆ ಇಲ್ಲಿ ಚನ್ನಬಸವಣ್ಣನ ಜೀವನಾಂಶಗಳು -ಹೋರಾಟಗಳು ತೋರಿಬರುವದಿಲ್ಲ. ಕೇವಲ ಆತನ ಬೌದ್ಧಿಕ ಪರಿಶ್ರಮದಿಂದೊದಗಿದ ಪರಿಪಕ್ವತೆಯು ಹೊಗರೇರಿದೆ. ಬಸವಣ್ಣನದು ಜನರನ್ನು ಭಕ್ತಿಮಾರ್ಗಕ್ಕೆ ಆಕರ್ಷಿಸುವದರಲ್ಲಿ ಆಸಕ್ತಿ. ಚನ್ನಬಸವಣ್ಣನದು ಕುಂದು ಕೊರತೆಗಳನ್ನು ತುಂಬುವದರಲ್ಲಿ ಅನುರಕ್ತಿ.

ಪರಮತಗಳ ಜಂಝಾಮಾರುತದ ಆ ಪಾತದಿಂದ ವಿಶೀರ್ಣವಾದ ಮತ ಧರ್ಮಗಳು, ಮರ್ಮಗಳು ಅಸ್ತವ್ಯಸ್ತಗಳಾಗಿ ಅಪರಿಪೂರ್ಣಗಳಾಗಿ ಸಾಮಾಜಿಕರಲ್ಲಿ ಆಚರಣೆಗೆ ದಿಕ್ಕುದೆಸ ತೋರದೆ ಅಲ್ಲೋಲ ಕಲ್ಲೋಲವೆದ್ದಾಗ ಚನ್ನಬಸವಣ್ಣನ ವಚನ ತುಂಬಾ ಕೆಲಸಮಾಡಿದೆ. ನೂತನವಾಗಿ ಸೇರಿದ ಸೇರುವ ಸಾಮಾಜಿಕರಿಗೆ ಈತನ ವಚನ ತನ್ನ ಜ್ಞಾನದೀಪವನ್ನು ಬೆಳಗಿಸಿ ಹೊಂಬೆಳಗನಿತ್ತು ಮುಂದಾರಿ ತೋರಿದೆ. ಮನೋಭಾವಗಳಲ್ಲಿಯೂ ಮತಧರ್ಮಗಳಲ್ಲಿಯೂ ಜೀವನ ರೀತಿಯಲ್ಲಿಯೂ ನೀತಿಯಲ್ಲಿಯೂ ಸುಘಟಿತವಾದ ಸತ್ಯವಾದ ಏರ್ಪಾಟನ್ನೆಸಗಿದೆ. ಮುಗ್ಗರಿಸುವಾಗ ಮುಂಗೈಯಿತ್ತು ಎತ್ತಿದೆ. ತಾತ್ವಿಕ ವಿವರಣೆ, ನೈತಿಕ ವಿಚಾರಣೆ, ಸಾಮಾಜಿಕ ಸುಧಾರಣೆ, ಷಟ್‌ಸ್ಥಲ ಪ್ರತಿಪಾದನೆ ಇವು ಈ ವಚನದ ಹೃದಯ ನಾಡಿಗಳು.

ಅರಿವು, ಆಚರಣೆ ಚನ್ನಬಸವಣ್ಣನ ವಚನದ ಎರಡು ಕಣ್ಣುಗಳು. ಈ ಎರಡು ಕಣ್ನೋಟಕ್ಕೆ ಪರವಸ್ತು ಒಂದೇ ದೃಶ್ಯಕಳೆ! ಪರಿಣಾಮ ಒಂದೇ ಪರಿತೃಪ್ತಿ!

ಒಟ್ಟಿನಲ್ಲಿ ಚನ್ನಬಸವಣ್ಣನ ಜ್ಞಾನಾನುಭವಗಳ ಕಿಡಿಗಳು ಆತನ ವಚನರೂಪದಲ್ಲಿ ತೊಳಗುತ್ತಿವೆ; ಬೆಳಗು ತೋರುತ್ತಿವೆ. ಅವುಗಳ ಪ್ರಯೋಜನವನ್ನು ಪಡೆಯುವುದು ಪಾಠಕರ ಜ್ಞಾನೋಪಾಸಕರ ಕೆಲಸ. ಆತನ ಅಚ್ಚಳಿಯದ ಕೃತಿಯಲ್ಲಿ ಆತನ ಜ್ಞಾನದ ಪ್ರತಿಮೆಯಿದೆ.

ಅದನ್ನು ತಿಳಿದೋದುವವರು ತಿಳಿಗಣ್ಣಿನಿಂದ ಚನ್ನಾಗಿ ದಿಟ್ಟಿಸಬಹುದು. ಅರಿದಾಚರಿಸಿದಲ್ಲಿ ಸಾಕ್ಷಾತ್ಕರಿಸಿಕೊಳ್ಳಬಹುದು.

ಚಿನ್ಮಯಮೂರ್ತಿ ಚನ್ನಬಸವಣ್ಣನವರ ವಚನಾಭ್ಯಾಸದ ಫಲವಾಗಿ ನಮ್ಮಬಗೆಗೆ ಬಂದ ಪರಿಯಲ್ಲಿ ಈ ವಿಶೇಷಗಳನ್ನು ವಿವರಿಸಿದ್ದಾಗಿದೆ. ಇವುಗಳಲ್ಲಿ ಕೆಲವು ವಿವಾದಾಸ್ಪದವಾಗಿ ಕಾಣಬಹುದು ಕೆಲವರಿಗೆ ! ಬೇರೆ ಕೆಲವರಿಗೆ ಅವೇ ಸಂಶೋಧನಕ್ಕೆ ಸೀಳ್ದಾರಿಯಾಗಿ ಪರಿಣಮಿಸಬಹುದು. ಇದು ದೀರ್ಘವಾದ ಸಾಸ. ಇದರಲ್ಲಿ ಪ್ರಕೃತಿಸಿದ್ಧವಾಗಿ ಸೇರಿರಬಹುದು ದೋಷ. ಅದು ವಿಮರ್ಶಕರ ಕೆಲಸ. ಇಷ್ಟು ಮಾತ್ರ ಹೇಳಬಲ್ಲೆವು. ಇದು ನಮ್ಮ ಹರಕುಶೈಲಿಯ ಮಸಕು ತಿಳಿವಿನ ಉದ್ಯಮ—ಎಂದು.

ಕನ್ನಡಿಗರು, ಹೆಚ್ಚಾಗಿ ವೀರಶೈವರು ಹೀಗೆಯೆ ಬೇರೆ ವಚನಗಳನ್ನು ಆಳವಾಗಿ ವ್ಯಾಸಂಗ ಮಾಡಿ ಅರಗಿಸಿಕೊಂಡು ತಂತಮ್ಮ ರಸವತ್ತಾದ ರಚನೆಯ ಮುಖದಲ್ಲಿ ಚಿತ್ರಿಸಲಿ! ಇದರಿಂದ ಈಗಿನ ನಾಡಿನ ನೀತಿ ನಿಯತಿಗಳು, ಸಮಾಜದ ಸ್ಥಿತಿಗತಿಗಳು ಸ್ವಲ್ಪಮಟ್ಟಿಗೆ ತಹಬಂದಿಗೆ ಬಂದಾವು? ಸುಖಶಾಂತಿಗಳು ನೆಲೆಗೊಂಡಾವು? ವಚನವಾಙ್ಮಯದ ವಿಶೇಷ ವಿಚಾರಗಳು ಬೆಳಗುಗಂಡಾವು ?

ಇಂದಿನ ಸಾಮಾಜಿಕ ಸಂದೇಹಗಳಿಗೂ ಸಮಸ್ಯೆಗಳಿಗೂ ಈ ಬರೆಹವು ಸ್ವಲ್ಪ ಸಮಾಧಾನಕಾರಕವಾದಲ್ಲಿ ಪಟ್ಟ ಪರಿಶ್ರಮ ಸಾರ್ಥಕ! ಹಾಗಾದೀತೆಂದೇ ಭಾವಿಸಿ ವಿರಮಿಸಲಾಗಿದೆ.

---

# ನಡೆಸು ಬಾರ!

ಎಂಟು ಶತಕಗಳಾಚೆ ತೋರಿಯಡಗಿದ ಬೆಳಕೆ,
ಇಂದೇಕೆ ತೋರಲೊಲ್ಲೆ ?
ನಿನ್ನ ಕಿರಣ ದ್ಯುತಿಯದೆನಿತು ಬೆಳಕನು ಬೀರಿ
ಮಾನವನ ಹೆದ್ದಾರಿ ಜ್ಯೋತಿಮಯವಾಯ್ತು ! ೪

ನಾನೆ ಕಿರಿಯನು ಎನಗೆ ಕಿರಿಯರಿಲ್ಲೆಂದೆಂದು
ಬಕುತರಿಗೆ ಹಿರಿಯರಿಲ್ಲೆನುತ ಸಾರಿ,
ಪರಧನದ ಪರಸತಿಯ ಪರವಿಷಯದಾಪೇಕ್ಷೆ
ಇಹಪರವ ಸಾಧಿಸದು–ಎಂದು ತೋರಿಸಿಹೆ. ೮

ತನುಮನದ ಧನದ ಬರಿ ಬಯಲಾಸೆಯಿಂದಿಲ್ಲ
ನಿಜಸುಖದ ಘನದರಿವು ಎಂದು ಸಾರಿರುವೆ.
ತನ್ನ ತಾ ನರಿಯುವುದೆ ಬಾಳಗುರಿಯೆಂಬುದನು
ಉನ್ನತದಿ ತೋರಿ ನೀ ನಡೆದು ನುಡಿದೆ ೧೨

ಜೀವನಲಿ ಹುದುಗಿರುವ ವಿವಿಧ ಮಲಿನತೆಯನ್ನು
ವಾಕ್ಪರುಷದಿಂ ತೊಡೆದು ಹಸನುಗೈದೆ.
ಶಬ್ದ ಸೋಪಾನವನು ರಚಿಸಿರುವೆ, ನಲವಿನಿಂ
ಬದ್ಧ ಜೀವಿಗಳನ್ನು ಮೇಲಕೊಯ್ಯೆ. ೧೬

ನುಡಿಗಿಂತ ನಡೆ ಮುಂದು, ನಡೆದು ಬದುಕಿರಿ ಎಂದು
ಅರಿವಿನಾಳದ ಮೂಲ ಮಂತ್ರವನು ಉಸಿರ್ದೆ.
ಕಾಯಕದ ಹಿರಿಮೆಯನು ಕಾಯದಾ ನೆಲೆಯನ್ನು
ಕಾರುಣ್ಯದಿಂ ತೋರ್ದೆ ಜಗದ ಕಣ್ಗೆ. ೨೦

ಸತ್ಯವಹ ಶುದ್ಧವಹ ಕಾಯಕವೆ ಕೈಲಾಸ
ವೆಂಬುದನು ನೀನಂದೆ ತೋರಿ ಮೆರೆದೆ.
ಕಾಯಸವೆಯದ ಬಕುತಿ ಮನಕರಗದಾಯುಕುತಿ
ಪರಮಾತ್ಮನೆಡೆಗಾಯ್ತು ದೂರವೆಂದೆ. ೨೪

ಬಕುತರಾ ಬಕುತರಿಗೆ ಶರಣೆಂದು ತಲೆವಾಗಿ
ಹಿರಿಯ ಶರಣನು ತಾನೆಯೆನಿಸಿ ಬಾಳ್ದೆ.
ಪರಮಾನುಭವ ಮೂರ್ತಿ, ನಿನ್ನದೆಂತಹ ಸ್ಫೂರ್ತಿ !
ಮತ್ತೆಂದು ಬಹುದಿಲ್ಲಿ ಕಾರುಣ್ಯ ಕೀರ್ತಿ ? ೨೮

ಜಡಜಾಡ್ಯದಿಂ ಬೆಂದು ಬಸವಳಿದು ಹೋಗಿಹುದು
ಜನ ಜನಾಂಗವ ದಿಂದು ನಿಜವ ಮರೆತು.
ಮಾಯೆಯಾವರಣವದು ಜೀವ ಜಾಲವ ಸುತ್ತಿ
ಬಾಳ ಹಾದಿಯ ಮಾಡಿ ಕಗ್ಗಲ್ಲ ಕಾಡು. ೩೨

ಬಾಳುವುದು ಬದುಕುವುದು ವಿಷಯ ಲಾಲಸೆಗೆಂದು
ಮಂಕುತನದಲಿ ಕೆಡಹಿ ನಾಶಗೈದಿಹುದು.
ಮೇರೆ ಮೀರುತಲಿರುವ ಪಾಪರಾಶಿಯನೊತ್ತಿ
ಧರ್ಮಸಾಮ್ರಾಜ್ಯವನು ಕಟ್ಟು ಬೇಗ ! ೩೬

ಭಾರತಾಂಬೆಯ ನೊಂದ ಮಕ್ಕಳನು ಸಾರಿ,
ಬಸವ ವಸುಧೆಗೆ ಬೆಳಕ ಮತ್ತೆ ಬೀರಿ !
ಹಿಂದಿನಾ ವೈಭವವ ನಿಂದೊಮ್ಮೆ ತೋರುಬಾ,
ಇಂದಿನಾ ಜನತೆಯನು ನಡೆಸು ಬಾರ ! ೪೦

— ಬಿ. ನಂಜುಂಡಪ್ಪ

# ವಚನ ವಾಙ್ಮಯದ ವೈಭವವು.

(ಲೇ॥—ಹು. ಬ ಕಲಬುರ್ಗಿ ಬಿ. ಎ. ವಿಜಾಪುರ ಸತ್ಯಶರಣ ಸಮಾಜ ಸೇವಕ.)

---

'ವಿಭವೋ ಹಿ ವೇದಶಬ್ದಾಃ' ಎಂದು ಯಾಸ್ಕಮುನಿಯು ತನ್ನ ನಿರುಕ್ತ ಶಾಸ್ತ್ರದಲ್ಲಿ ಆಧಾರವಾಗಿಟ್ಟಕೊಂಡು ವೈದಿಕ ಶಬ್ದಗಳಿಗೆ ಆದಿ ಭೌತಿಕ, ಆದಿದೈವಿಕ ಹಾಗೂ ಆಧ್ಯಾತ್ಮಿಕವೆಂಬ ಮೂರು ತರದ ಅರ್ಥ ಗಳು ಆಗುವವೆಂದು ಹೇಳಿದ್ದಾನೆ. ಇದರಿಂದ ದೈವಿಕ ಶಬ್ದಗಳಿಗೆ ಒಂದು ನಿಶ್ಚಿತಾರ್ಥವಿಲ್ಲವೆಂದು ಸ್ಪಷ್ಟವಾಗುತ್ತದೆ. ಸಂಶಯ ಪರಿಹಾ ರಾರ್ಥವಾಗಿ ಸಂದರ್ಭಾನುಸಾರವಾಗಿಯೂ ಅನುಮಾನ ಪ್ರಮಾಣಕ್ಕನು ಗುಣವಾಗಿಯೂ ಅರ್ಥಮಾಡಲು ಅವಕಾಶವಿರುತ್ತದೆ. ಆದರೆ ಅದೇ ವಚನಗಳ ಕಡೆಗೆ ನೋಡಿರಿ. ಅವು ನಿಶ್ಚಿತಾರ್ಥವನ್ನೇ ಬೋಧಿಸು ವವು. ಅಲ್ಲಿ ಅನುಮಾನ ಸಂದೇಹಗಳಿಗೆ ಆಸ್ಪದವಿಲ್ಲ.

'ಕೆರೆ ಹಳ್ಳ ಭಾವಿಗಳು ವೈದೆಗೆದರೆ ಗುಳ್ಳೆ, ಗೊರಜೆ, ಚಿಪ್ಪು ಕಾಣ ಬಹುದು. ವಾರಿಧಿ ವ್ಯೆದೆಗೆದರೆ ರತ್ನಂಗಳ ಕಾಣಬಹುದು. ಕೂಡಲ ಸಂಗನ ಶರಣರು ಮನದೆರೆದು ಮಾತನಾಡಿದರೆ ಲಿಂಗವ ಕಾಣಬ ಹುದು.' ಎಂಬದಾಗಿ ಶ್ರೀ ಬಸವಣ್ಣನವರು ಉದಾಹರಿಸಿದ್ದಾರೆ. ಮತ್ತು ಭಕ್ತರ ನುಡಿಯು ಗಡಣದ ನಡುವೆ ರಾಶಿಯಾಗಿಪ್ಪನು ಶಿವನು' ಎಂದು ಮತ್ತೊಂದೆಡೆಯಲ್ಲಿ ಉದಹರಿಸಿದ್ದಾರೆ. ಇದರಿಂದ ಸ್ಪಷ್ಟವಾಗಿ ತಿಳಿದು ಬರುವದೇನಂದರೆ ವಚನಗಳು ಅನುಭವದ ನುಡಿಗಳು. ಸ್ವಯಂ ಸ್ಫೂರ್ತಿಯುಕ್ತವಾಗಿರುವವು. ಮತ್ತು ನಿಶ್ಚಿತಾರ್ಥವನ್ನು ಬೋಧಿಸು ವವು. ಅಲ್ಲದೆ ಪರವಸ್ತು ದರ್ಶಕವಾಗಿರುವವು. ಇನ್ನೂ ಹೇಳುವದಾ ದರೆ ಶಾಸ್ತ್ರಕ್ಕೆ ಸಾವಿರ ಮುಖಗಳೆಂಬ ನಾಣ್ನುಡಿಯು ಬಳಕೆಯಲ್ಲಿರು ವದು. ಮತ್ತು ಶ್ರೀ ಶಂಕರಾಚಾರ್ಯರು 'ಶಬ್ದಜಾಲಂ ಮಹಾರಣ್ಯಂ ಚಿತ್ತಭ್ರಮಣಕಾರಕಂ' ಎಂದು ಶಬ್ದರಾಶಿಯು ಮುಮುಕ್ಷುಗಳ ಚಿತ್ತ ವನ್ನು ಗೊಂದಲದಲ್ಲಿ ನೂಕುವದಾಗಿದೆ, ಎಂದು ಘಂಟಾಘೋಷವಾಗಿ ಸಾರಿರುವರು.

ತಮ್ಮ ಅನುಭವವನ್ನು ಯಥಾರ್ಥವಾಗಿ ಸಂಶಯ ಬಾರದಂತೆ ತಿಳಿಸುವದಕ್ಕಾಗಿಯೇ ಸತ್ಯಶರಣರು ಮಾತೃಭಾಷೆಯಾದ ಕನ್ನಡದಲ್ಲಿಯೇ ಸುಗಮವಾಗಿಯೂ ಸುಲಲಿತವಾಗಿಯೂ ನುಡಿದಿರುವರು. ಸಂಸ್ಕೃತವು ಗೀರ್ವಾಣಭಾಷೆಯೆಂದು ಹೆಸರಾಗಿರುವದು ನಿಜ. ಆದರೆ ಸತ್ಯಶರಣರು ತಮ್ಮ ಲಿಂಗಾನುಸಂಧಾನದ ಯೋಗದಲ್ಲಿ ನುಡಿದ ಶಿವಾನುಭವದ ನುಡಿಗಳಿಗೆ ಕನ್ನಡವು ಕನ್ನಡಿಯಾಗಿದೆ. ಆದುದರಿಂದ ಕನ್ನಡವು ಶಿವನುಡಿಯಾಗಿರುವದರಿಂದ ಗೀರ್ವಾಣಭಾಷೆಗಿಂತ ಹೆಚ್ಚು ಗೌರವವನ್ನು ಪಡೆದುಕೊಂಡಿರುವದು, ಭಾಷೆಯ ಗೌರವವು ಅದರೊಳಗಿನ ಸಂಸ್ಕೃತಿಯ ಮೇಲೆ ಅವಲಂಬಿಸಿರುತ್ತದೆ. ಸತ್ಯಶರಣರ ಜೀವಿತಧ್ಯೇಯವಾದ ಲಿಂಗಾಂಗಸಾಮರಸ್ಯದಂಥ ಅನುಪಮ ಸಂಸ್ಕೃತಿಯನ್ನು ಒಳಕೊಂಡಿರುವದರಿಂದ ಕನ್ನಡಕ್ಕೆ 'ಕೈಲಾಸ ಭಾಷೆ'ಯೆಂದರೂ ಸಲ್ಲುವದು.

ಆತ್ಮಸಾಕ್ಷಾತ್ಕಾರವು ಉದಾತ್ತವಾದ ವೇದಾಂತಶಾಸ್ತ್ರದ ಕೊನೆಯ ಮೆಟ್ಟು. ಆದರೆ ಅದು ವೀರಶೈವ ಧರ್ಮದ ಪ್ರಾರಂಭದ ಮೆಟ್ಟು. ಚಿನ್ಮಾತ್ರಬ್ರಹ್ಮಜ್ಞಾನದಿಂದ ವ್ಯಾವಹಾರಿಕ ದ್ವೈತಬಂಧವಳಿವುದೇ ಮೋಕ್ಷವೆಂದು ವೇದಾಂತಿಗಳು ಹೇಳುತ್ತಾರೆ. ತನ್ನ ಹೃದಯದಲ್ಲಿ ಆತ್ಮನಿದ್ದು, ಒಡನೆ ಪರಮಾತ್ಮನಿದ್ದು ಈ ಜ್ಞಾನವು ಕರಗತವಾಗಿ ಜೀವಪರದಾರ ದ್ವೈತಭಾವವಳಿದು ಸಾಮರಸ್ಯವುಂಟಾಗಿ ನಿಜೈಕ್ಯಹೊಂದುವದೇ ವೀರಶೈವದ ಮೂಲಧ್ಯೇಯವು. ಇದನ್ನು ತಿಳಿಯದ ಪರಕೀಯ ಪಂಡಿತರು ಆತ್ಮಸಾಕ್ಷಾತ್ಕಾರವು ವೀರಶೈವರ ಕೊನೆಯ ಗುಟ್ಟೆಂದೂ, ವಚನಗಳು ಕನ್ನಡ ವೇದಗಳೆಂದು ಭ್ರಾಂತಿಗೊಂಡು ಉಲ್ಲೇಖಿಸಿರುವರು. ಆದರೆ ವಚನಗಳು ವೇದಾಗಮೋಪನಿಷತ್ತುಗಳ ತಾತ್ಪರ್ಯವನ್ನು ಒಳಕೊಂಡು ವಿಶೇಷಾರ್ಥವುಳ್ಳವುಗಳಾಗಿರುವವು. ಆದುದರಿಂದ ಅವುಗಳಿಗೆ ಶಿವಾನುಭವ ಗ್ರಂಥಗಳೆಂಬ ಗೌರವ ಶಬ್ದವು ಸಲ್ಲುವದು. ಶ್ವೇತಾಶ್ವತರೋಪನಿಷತ್ತಿನಲ್ಲಿ ಹೇಳಿದ 'ತಿಲೇಷು ತೈಲಂ ದಧಿನೀವ ಸರ್ಪಿರಾಪಃ ಸ್ರೋತಸ್ಸ್ವರಣೀಷುಚಾಗ್ನಿಃ । ಏವಮಾತ್ಮಾತ್ಮನಿ ಗೃಹ್ಯತೇಸೌ ಸತ್ಯೇನೈನಂ ತಪಸಾಯೋನುಪಶ್ಯತಿ॥' ಎಳ್ಳಿನಲ್ಲಿ ಎಣ್ಣೆಯೂ, ಮೊಸರಿನಲ್ಲಿ ತುಪ್ಪವೂ, ಬುಗ್ಗೆಗಳಲ್ಲಿ ನೀರೂ, ಕಟ್ಟಿಗೆಯಲ್ಲಿ ಬೆಂಕಿಯೂ ಇರುವಂತೆ ತನ್ನ ಆತ್ಮನೊಳು ಪರಮಾತ್ಮನಿರುವನೆಂದು ಹೇಳಿದ ಮರ್ಮವನ್ನು ತಿಳಿದ ಬಸವಣ್ಣನವರು—

'ಉದಕದೊಳಗೆ ಬಚ್ಚಿಟ್ಟ ಬಯಕೆಯ ಕಿಚ್ಚಿನಂತೆ ಇದ್ದಿತ್ತು. ಸಸಿಯೊಳಗಣ ರಸದ ರುಚಿಯಂತೆ ಇದ್ದಿತ್ತು. ನನೆಯೊಳಗಣ ಪರಿಮಳದಂತೆ ಇದ್ದಿತ್ತು. ಕೂಡಲಸಂಗಮದೇವರ ನಿಲವು ಕನ್ನೆಯ ಸ್ನೇಹದಂತೆ ಇದ್ದಿತ್ತು' ಎಂದು ಅಂದಿರುವರು. ಇವೆರಡರ ನಡುವಿನ ತಾರತಮ್ಯವನ್ನು ನೋಡಿರಿ. ಶ್ವೇತಾಶ್ವತರ ವಚನವು ಬ್ರಹ್ಮಾಂಡದೊಳಗಿನ ಬಹಿರಂಗದ ಉದಾಹರಣೆಗಳನ್ನಷ್ಟೇ ಹೇಳುತ್ತದೆ. ಆದರೆ ಬಸವಣ್ಣನವರ ವಚನವು ಬಹಿರಂಗದ ಉದಾಹರಣೆಗಳನ್ನಷ್ಟು ಕೊಟ್ಟು ಮುಂದೆ ಬಂದು ಪಿಂಡಾಂಡದೊಳಗಿನ ಸಂಗತಿಗಳನ್ನು ಎದುರಿಟ್ಟು ತೋರಿ (ಕನ್ಯಾಸ್ನೇಹದ ಉದಾಹರಣೆ ಗಂಡನನ್ನು ಮೋಹಗೊಳಿಸುವದಾದ ಲಾವಣ್ಯಸ್ನೇಹರಸವು, ಚಿಕ್ಕ ಬಾಲಕಿಯಲ್ಲಿ ಹುದುಗಿದ್ದಹಾಗೆ) ಮನವರಿಕೆಯಾಗುವಂತೆ ಹೇಳುತ್ತದೆ. ಇದಲ್ಲದೆ ಭಗವದ್ಗೀತೆಯಲ್ಲಿ ಹೇಳಿದ

ಈಶ್ವರಃ ಸರ್ವಭೂತಾತ್ಮನಾಂ ಹೃದ್ದೇಶೇಽರ್ಜುನ ತಿಷ್ಠತಿ ।
ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ॥
ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ ।
ತತ್ಪ್ರಸಾದಾತ್ಪರಾಂ ಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಂ ॥

ಭಗವಂತನ ಈ ಉಪದೇಶದ ಸಾರವನ್ನೇ ಬಸವಣ್ಣನವರು ತಮ್ಮ ವಚನದಲ್ಲಿ ಶೇಖರಿಸಿರುವರು.

'ಶಿವ ಏಕೋಧ್ಯೇಯಃ ಶಿವಂ ಕರಃ ಸರ್ವಮನ್ಯತ್ಪರಿತ್ಯಜ್ಯ । ಅಥರ್ವಶರಸ್' ಎಲ್ಲವನುಳಿದು ಮಂಗಲಪ್ರದನಾದ ಶಿವನನ್ನೇ ಚಿಂತಿಸತಕ್ಕದ್ದು' ಎಂದು ಅಥರ್ವ ಶಿಖೆಯೆಂಬ ಉಪನಿಷತ್ತು ಹೇಳುತ್ತದೆ. ಆದರೆ ಶಿವಧ್ಯಾನದ ಈ ಮಾರ್ಗವನ್ನು ಬಸವಣ್ಣನವರು ಹ್ಯಾಗೆ ಹೃದಯಂಗಮವಾಗಿಯೂ ಕೂಲಂಕಷವಾಗಿಯೂ ಹೇಳಿರುವರು ನೋಡಿರಿ-

'ಆರಾಧ್ಯ ಪ್ರಾಣಲಿಂಗವೆಂದರಿದು ಪೂರ್ವಗುಣವಳಿದು ಪುನರ್ಜಾತನಾದ ಬಳಿಕ ಸಂಸಾರಬಂಧುಗಳಿನ್ನವರೆಂದರೆ ನಂಟುಭಕ್ತಿ ನಾಯಕನರಕ ಇಂತೆಂದುದು ಕೂಡಲಸಂಗನ ವಚನ.'

ವೇದಗಳೊಳಗಿನ ಋಕ್ಕುಗಳನ್ನು ತೆಗೆದುಕೊಳ್ಳೋಣ.

ಇಂದ್ರಂ ಮಿತ್ರಂ ವರುಣಮಗ್ನಿ ಮಾಹು

ಏಕಂ ಸದ್ವಿಪ್ರಾ ಬಹುಧಾ ವದಂತ್ಯ ।
ಗ್ನಿಂ ಯಮಂ ಮಾತರಿಶ್ವಾನ ಮಾಹುಃ ॥
ಋಗ್ವೇದ ಮಂಡಲ ೧ ಸೂಕ್ತ ೧೬೪.

ಒಬ್ಬನೇ ದೇವರನ್ನು ಯಮನೆಂದೂ ಅಗ್ನಿಯೆಂದೂ ಇಂದ್ರನೆಂದೂ ವಾಯುವೆಂದೂ ವರುಣನೆಂದೂ ಹೀಗೆಯೇ ಹೇಳುತ್ತಿರುವರು ಎಂಬದಾಗಿ ಋಗ್ವೇದದಲ್ಲಿ ಹೇಳಿರುವದು. ಆದರೆ

'ದೇವನೊಬ್ಬ ನಾಮ ಹಲವು. ಪರಮಪತಿವ್ರತೆಗೆ ಗಂಡನೊಬ್ಬ. ಮತ್ತೊಂದಕ್ಕೆರಗಿದರೆ ಕಿವಿಮೂಗ ಕೊಯ್ವನು. ಹಲವು ದೈವದ ಎಂಜಲ ತಿಂಬವರರೇನೆಂಬೆ ಕೂಡಲಸಂಗಮದೇವಾ.'

ಹೀಗೆಂದು ಬಸವಣ್ಣನವರು ಪರಮ ಪತಿವ್ರತೆಯ ಉದಾಹರಣೆಯನ್ನು ಕೊಟ್ಟು ಏಕಭಾವಭಕ್ತಿಯಿಂದ ಇರಬೇಕೆಂದು ಸ್ಪಷ್ಟಮಾಡಿರುವರು. ಮತ್ತು ಭಗವದ್ಗೀತೆಯಲ್ಲಿಯ 'ಮಯಿ ಚಾನನ್ಯಯೋಗೇನ ಭಕ್ತಿರವ್ಯಭಿಚಾರಿಣೀ ।' ಭಕ್ತಿಯು ಅನನ್ಯವಾಗಿರಬೇಕೆಂದು ಹೇಳಿರುವರಲ್ಲದೆ ವಿಪರೀತವಾದಲ್ಲಿ ಒದಗುವ ಘೋರ ಶಿಕ್ಷೆಯನ್ನು ಉದಾಹರಿಸಿದ್ದಾರೆ.

' ಈಶಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್ । ತೇನ ತ್ಯಕ್ತೇನ ಭುಂಜೀಥಾಃ ಮಾ ಗೃಧಃ ಕಸ್ಯಚಿತ್ ಧನಂ ॥ (ಈಶಾವಾಸ್ಯೋಪನಿಷತ್ತು) ಹುಲ್ಲುಕಡ್ಡಿ ಮೊದಲು ಮಾಡಿ ಎಲ್ಲೆಡೆಯಲ್ಲಿಯೂ ಪರಮನು ವ್ಯಾಪಿಸಿರುವನು. ಅವನು ಕೊಟ್ಟಷ್ಟರಲ್ಲಿ ಸಂತೋಷಪಡು. ಎರಡನೆಯವರ ದ್ರವ್ಯಕ್ಕೆ ಆಶೆ ಮಾಡಬೇಡ ಎಂದು, ಈಶಾವಾಸ್ಯೋಪನಿಷತ್ತು ಹೇಳುತ್ತದೆ. ಇದನ್ನು ಬಸವಣ್ಣನವರು ತಮ್ಮ ವಚನದಲ್ಲಿ ಹೇಳಿರುವ ಪರಿಯನ್ನು ನೋಡಿರಿ.

'ನೀನಿಕ್ಕಿದ ಬಿಯ್ಯದಲ್ಲಿ ವಂಚನೆಯುಳ್ಳೊಡೆ, ಸಂಗ, ನಿಮ್ಮ ತೊತ್ತತನಕ್ಕೆ ದೂರವಯ್ಯ! ಕದ್ದು ತಿಂದರೆ ಕೈ ಹಿಡಿದೊಮ್ಮೆ ಬಡಿದು ತುಡುಗುಣಿತನವ ಬಿಡಿಸಯ್ಯ! ಜಂಗಮ ಮನೆಗೆ ಬಂದಲ್ಲಿ ಓಸರಿಸಿದರೆ ಮೂಗಹಿಡಿದು ಕೊಯ್ಯಯ್ಯಾ ! ಕೂಡಲಸಂಗಮದೇವಾ'

ಪರಮಾತ್ಮನು ಕೊಟ್ಟಷ್ಟರಲ್ಲಿ ಭೋಗಿಸಬೇಕಲ್ಲದೆ ಅದರಲ್ಲಿಯೇ ಜಂಗಮದಾಸೋಹ ಮಾಡಬೇಕೆಂದು ಹೇಳಿರುವರು. ತನಗೆ ಕೊರತೆ ಯಾದರೂ ಚಿಂತೆಯಿಲ್ಲ. ವಂಚನೆಯಿಲ್ಲದೆ ಅತಿಥಿಯಾಗಿ ಮನೆಗೆ ಬಂದ ಶಿವಭಕ್ತನ ತೃಪ್ತಿಪಡಿಸಬೇಕೆಂದು ಹೆಚ್ಚಿನ ಆಶಯವನ್ನು ವಚನದಲ್ಲಿ ಭರತಿಮಾಡಿರುವರು.

ಶ್ರೀ ಬಸವಣ್ಣನವರು ಗಾಯತ್ರಿ ಮಂತ್ರದ ನಿಜಾರ್ಥವನ್ನು ಬಲ್ಲ ವರಾದುದರಿಂದ ಈ ಮುಖ್ಯ ಮಂತ್ರಾಧಿದೇವತೆಯಾದ ಶಿವನನ್ನು ಹಾರು ವರು ಅರಿಯಲಿಲ್ಲೆಂದು ನಿಷೇಧಿಸಿದ್ದಾರೆ.

'ವೇದವನೋದಿದ ವಿಪ್ರರು ಹೊನಲಲ್ಲಿ ಹೋದ ಕೇಡ ನೋಡಿರೇ! ಭರ್ಗೋದೇವಸ್ಯಧೀಮಹಿ ಎಂಬರು. ಒಬ್ಬರಿಗಾದರೂ ವಿಚಾರವಿಲ್ಲ. ನೋಡಿರೇ ಕೂಡಲ ಸಂಗಮದೇವಾ.'

'ಓಂ ತತ್ಸವಿತುರ್ವರೇಣ್ಯಂ ಭರ್ಗೋದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್' ॥ ಪಾಪನಾಶಕನಾಗಿ ಲೋಕಾಧ್ಯಕ್ಷನಾದ ಸೂರ್ಯನಿಗಿಂತಲೂ ಮಿಗಿಲಾದ ಹಾಗೂ ನಮ್ಮ ಬುದ್ಧಿ ಪ್ರೇರಕನಾದ ಶಿವನನ್ನು ನಾನು ಧ್ಯಾನಿಸುತ್ತೇನೆ.

ಇದರಂತೆಯೇ ಉತ್ತಮ ಸೂಕ್ತವೆನಿಸಿದ ಪುರುಷ ಸೂಕ್ತದ ವಿವ ರಣೆಯನ್ನು ಬಸವಣ್ಣನವರು ತಮ್ಮ ವಚನದಲ್ಲಿ ಯಥಾರ್ಥವಾಗಿ ಮಾಡಿರುವರು. ವಾಚಕರ ಅವಗಾಹನಕ್ಕಾಗಿ ಸೂಕ್ತದ ಮೂಲವನ್ನು ಕನ್ನಡ ವಚನವನ್ನು ಇದರಡಿಯಲ್ಲಿ ಬರೆಯುತ್ತಿದೆ.

ಸಹಸ್ರಶೀರ್ಷಾಪುರುಷಃ ಸಹಸ್ರಾಕ್ಷಃ ಸಹಸ್ರ ಪಾತ್ ।
ಸ ಭೂಮಿಂ ವಿಶ್ವತೋ ವೃತ್ವಾ ಅತ್ಯತಿಷ್ಠದ್ ದಶಾಂಗುಲಂ ॥
ಬ್ರಾಹ್ಮಣೋಸ್ಯ ಮುಖಮಾಸೀದ್ ಬಾಹೂ ರಾಜನ್ಯಃ ಕೃತಃ ।
ಊರೂ ತದಸ್ಯಯದ್ವೈಶ್ಯಃ ಪದ್ಭ್ಯಾಂ ಶೂದ್ರೋ ಅಜಾಯತ ॥
ಚಂದ್ರಮಾ ಮನಸೋ ಜಾತಶ್ಚಕ್ಷೋಃ ಸೂರ್ಯೋ ಅಜಾಯತ ।
ನಾಭ್ಯಾ ಆಸೀದಂತರಿಕ್ಷಂ ಶೀರ್ಷ್ಣೋ ದ್ಯೌಃ ಸಮವರ್ತತ ॥
ಪದ್ಭ್ಯಾಂ ಭೂಮಿರ್ದಿಶಃ ಶ್ರೋತ್ರಾತ್ತಥಾ ಲೋಕಾನ್ ಅಕಲ್ಪಯತ್ ॥

'ರುದ್ರ ಮುಖದಲ್ಲಿ, ವಿಷ್ಣು ಭುಜದಲ್ಲಿ, ಜಂಘೆಯಲ್ಲಿ ಅಜನ ಜನನವು. ಇಂದ್ರ ಪಾದದಲ್ಲಿ, ಚಂದ್ರ ಮನದಲ್ಲಿ, ಚಕ್ಷುವಿನಲ್ಲಿ ಸೂರ್ಯ ಜನನವು. ಮುಖದಲ್ಲಿ ಅಗ್ನಿ, ಪ್ರಾಣದಲ್ಲಿ ವಾಯು, ನಾಭಿಯಲ್ಲಿ ಅಂತರಿಕ್ಷವು. ಶಿರದಲುದಯ ತೆತ್ತೀಸಕೋಟಿ ದೇವರ್ಕಳು. ಪಾದತಳದಲ್ಲಿ ಭೂಮಿ ಜನನವು. ಶ್ರೋತ್ರದಲ್ಲಿ ದಶದಿಕ್ಕು. ಜಗವ ನಿಕ್ಷೇಪಿಸಿದ ಕುಕ್ಷಿಯಲ್ಲಿ. ಅಕ್ಷಯನಗಣಿತನು. ಸಾಸಿರತಲೆ, ಸಾಸಿರಕಣ್ಣು, ಸಾಸಿರ ಕೈ, ಸಾಸಿರ ಪಾದ, ಸಾಸಿರ ಸನ್ನಿಹಿತ ನಮ್ಮ ಕೂಡಲಸಂಗಮದೇವ.'

ಮೇಲಿನ ವಿವರದಿಂದ ವಚನಗಳು ವೇದಗಳಿಗಿಂತ ಮೇಲಾದವೆಂದೂ ಅಥವಾ ಶಿರೋಭಾಗವೆಂದೂ ಅವುಗಳ ಧ್ಯೇಯವಾದ ಲಿಂಗಾಂಗ ಸಾಮರಸ್ಯವು ಆತ್ಮಸಾಕ್ಷಾತ್ಕಾರವಾದ ಮೇಲೆ ಸಾಧಿಸುವ ಉತ್ತರಭಾಗವೆಂದೂ ಸತ್ಯಶರಣರು ಶಿವನ ಅಮರಗಣರೆಂದೂ ಅವರ ನುಡಿಗಳು ಶಾಶ್ವತವಾದ ಹಾಗೂ ಲೋಕೋಪಕಾರಕವಾದ ಶಿವಾನುಭವ ವಾಕ್ಯಗಳೆಂದೂ ಹೊಳೆಯದಿರಲಾರದು.

---

## ಮಾದರಿಯ ಮಾಧ್ಯಮಿಕ ಶಾಲೆ.

**ಲೇಖಕ:— ಓರ್ವಶಿಕ್ಷಕ.**

---

(ವೀರಶೈವರಲ್ಲಿ ಅನೇಕ ವಿಧದ ಉಪಯುಕ್ತ ಕಾರ್ಯಗಳನ್ನು ಮಾಡಬೇಕೆಂಬ ಅಪೇಕ್ಷೆಯುಂಟಾಗಿರುವದು ಅದರ ಭಾವೀ ಪ್ರಗತಿಯ ಚಿನ್ಹವಾಗಿದೆ. ಇದರ ಪರಿಣಾಮವಾಗಿ ಅವರಲ್ಲಿ ಅನೇಕ ಶೈಕ್ಷಣಿಕ ಧಾರ್ಮಿಕ ಮತ್ತು ಸಾಮಾಜಿಕ ಸಂಸ್ಥೆಗಳು ಉಂಟಾಗಹತ್ತಿವೆ. ವೀರಶೈವರು ನಿಬಿಡವಾಗಿ ವಾಸಿಸುವ ಸ್ಥಳಗಳಲ್ಲಿ ಪ್ರಾಥಮಿಕ ಶಾಲೆಗಳೂ, ಕಾಲೇಜಗಳೂ, ವಿದ್ಯಾರ್ಥಿನಿಲಯಗಳೂ, ಫ್ರೀ ಬೋರ್ಡಿಂಗಗಳೂ, ತರುಣ ಸಂಘಗಳೂ, ಶಿವಾನುಭವ ಸಂಘಗಳೂ, ಪರೀಕ್ಷಾಕೇಂದ್ರಗಳೂ, ಅಕ್ಕನ ಬಳಗಗಳೂ ಕಾರ್ಯಮಾಡುತ್ತಲಿವೆ. ಆದರೆ ಒಂದು ಸಂಸ್ಥೆಯನ್ನು ಸ್ಥಾಪಿಸುವದು ಕಷ್ಟದ ಕೆಲಸವಲ್ಲ. ಅದು ಸ್ಥಾಪಿತವಾದ ಬಳಿಕ ಅದನ್ನು ನಡಿಸಿಕೊಂಡು ಹೋಗುವದು ಯಾವಾಗಲೂ ಬಹು ದುಸ್ತರದ ಕೆಲಸವು. ಯಾಕಂದರೆ ಅದರ ಕಾರ್ಯಕರ್ತರಿಗೆ ಜನತೆ

ಯಲ್ಲಿರುವ ಉಪೇಕ್ಷಾಭಾವ, ವಿರೋಧಭಾವ, ಇವುಗಳನ್ನು ಎದುರಿಸುವ ಪ್ರಸಂಗಗಳು ಆಗಿಂದ್ದಾಗ್ಗೆ ಬರುವದುಂಟು. ಇದರಿಂದ ಇವರು ಬಹು ಶೀವ್ರವಾಗಿ ನಿರುತ್ಸಾಹವುಳ್ಳವರಾಗಿ ತಾವು ಕೈಕೊಂಡ ಕಾರ್ಯಗಳನ್ನು ಅಲ್ಲಿಯೇ ಬಿಟ್ಟು ಬಿಡುವದು ತೋರಿಬರುತ್ತದೆ. ಈ ಕಾರಣದಿಂದ ಸ್ಥಾಪಿತವಾದ ಸಂಸ್ಥೆಗಳು ಬಹು ಶೀವ್ರವಾಗಿ ನಿಂತು ಹೋಗಿಬಿಡುತ್ತವೆ.

ಈ ಸ್ಥಿತಿಯುಂಟಾಗದಂತೆ ಸಮಾಜ ಪ್ರಮುಖರೂ, ಕಾರ್ಯಕರ್ತರೂ, ಪತ್ರಿಕಾಕಾರರೂ, ಜನತೆಯನ್ನು ಆಗಿಂದಾಗ್ಗೆ ಎಚ್ಚರಿಸುವದು ಬಹು ಅವಶ್ಯವು. ಇದು ಅವರ ಮುಖ್ಯ ಕಾರ್ಯವಾಗಿರಬೇಕು. ಆದುದರಿಂದ ಈ ಧ್ಯೇಯದಿಂದ ಬರೆದ ಲೇಖಗಳಿಗೆ ನಾವು ಇನ್ನು ಮೇಲೆ ಶಿವಾನುಭವ ಪತ್ರಿಕೆಯಲ್ಲಿ ಸ್ಥಾನ ಕೊಡಬೇಕೆಂದು ಇಚ್ಛಿಸಿದ್ದೇವೆ. ಈಗ ವೀರಶೈವ ಸಮಾಜದಲ್ಲಿ ಶಿಕ್ಷಣ ಸಂಸ್ಥೆಗಳು ಬಹು ಮಹತ್ವದ ಕಾರ್ಯ ಮಾಡುತ್ತಲಿವೆ. ಆದ್ದರಿಂದ ಅವುಗಳ ಏಳ್ಗೆಯ ಉದ್ದೇಶವನ್ನು ಇಟ್ಟುಕೊಂಡು ಬರೆದ ಲೇಖಗಳಿಗೆ ನಾವು ಪ್ರಥಮ ಸ್ಥಾನವನ್ನು ಕೊಡಬೇಕೆಂದಿದ್ದೇವೆ. ಒಬ್ಬ ಶಿಕ್ಷಣ ತಜ್ಞರು ಈ ಕೆಳಗಿನ ಲೇಖವನ್ನು ಬರೆದಿದ್ದಾರೆ. ಇದನ್ನು ನಮ್ಮಲ್ಲಿಯ ಶಿಕ್ಷಣ ಪ್ರೇಮಿಗಳು ಗಮನಿಸಬೇಕೆಂತಲೂ ಅವರು ಇದರಲ್ಲಿ ನಮ್ಮೊಡನೆ ಸಹ ಕರಿಸಬೇಕೆಂತಲೂ ನಮ್ಮ ವಿನಂತಿ ಇದೆ—ಸಂಪಾದಕ. )

ಒಂದು ಮಾಧ್ಯಮಿಕ ಶಾಲೆಯು ಮಾದರಿಯದಾಗಬೇಕಾದರೆ ಅನೇಕ ಸಂಗತಿಗಳನ್ನು ಗಮನಿಸಬೇಕಾಗುತ್ತದೆ. ಉದಾಹರಣಾರ್ಥವಾಗಿ ಕಟ್ಟಡ, ಉಪಕರಣ, ಅನಭ್ಯಸ್ತವಿಷಯಗಳು, ಅಭ್ಯಸ್ತವಿಷಯಗಳು, ವಿದ್ಯಾರ್ಥಿಗಳು, ಶಿಕ್ಷಕರು, ಮುಖ್ಯೋಪಾಧ್ಯಾಯರು, ಸಂಸ್ಥೆಯ ಚಾಲಕರು—ಇವಲ್ಲ ವಿಷಯಗಳನ್ನು ಪರ್ಯಾಲೋಚಿಸುವದು ಅವಶ್ಯಕವಾದೆ.

## ಕಟ್ಟಡ.

ಮಾದರಿಯ ಮಾಧ್ಯಮಿಕ ಶಾಲೆಗೆ ಅತ್ಯಂತ ಭವ್ಯವಾದ ಮತ್ತು ಲಕ್ಷಾಂತರ ರೂಪಾಯಿ ಬೆಲೆ ಬಾಳುವ ಕಟ್ಟಡವೇನೂ ಬೇಡ. ಶಿಕ್ಷಣವನ್ನೇನೂ ಕಟ್ಟಡಕ್ಕೆ ಕೊಡಬೇಕಾಗಿಲ್ಲ. ನಿರ್ಜೀವವಾದ ಕಟ್ಟಡಕ್ಕೆ

ಲಕ್ಷಾಂತರ ರೂಪಾಯಿಗಳನ್ನು ವೆಚ್ಚಮಾಡುವದಕ್ಕಿಂತ ಸಜೀವ ವಸ್ತು ಗಳಾದ ಶಿಕ್ಷಕರು ವಿದ್ಯಾರ್ಥಿಗಳಿಗಾಗಿ ಅದೇ ಹಣವನ್ನು ವೆಚ್ಚಮಾಡಿದರೆ ಅದೆಷ್ಟೋ ಫಲಕಾರಿಯಾದೀತು. ಪ್ರಾಚೀನಕಾಲದ ಗುರುಕುಲಗಳು ಬನದ ಸೃಷ್ಟಿ ಸೌಂದರ್ಯದ ಮಧ್ಯದಲಿ ಗಿಡಗಳ ನೆರಳಿನ ಕೆಳಗೆ ನಡೆಯುತ್ತಿದ್ದವು. ಆಗಿನ ಶಿಕ್ಷಣವಾದರೋ ಈಗಿನ ಶಿಕ್ಷಣಕ್ಕಿಂತ ಯಾವ ದೃಷ್ಟಿಯಿಂದಲೂ ಕಡಿಮೆತರಹದ್ದಾಗಿರಲಿಲ್ಲ. ಆದರೆ ಸದ್ಯದ ಶಿಕ್ಷಣವು ಸೊಬಗು ಸೌಕರ್ಯಗಳುಳ್ಳ ನಗರಗಳ ಕೇಂದ್ರ ಸ್ಥಾನವನ್ನಲಂಕರಿಸಿದ್ದರಿಂದ ಅದಕ್ಕೆ ಅನುಗುಣವಾಗಿ ಕಟ್ಟಡಗಳ ಅವಶ್ಯಕತೆಯುಂಟಾಯಿತು. ಆದ್ದರಿಂದ ತಕ್ಕಮಟ್ಟಿಗೆ ಹಣವನ್ನು ವೆಚ್ಚಮಾಡಿ ಸಾಲೆಗೆ ಅವಶ್ಯ ಬೀಳುವ ಕಟ್ಟಡವನ್ನು ಕಟ್ಟಿಸುವದು ವಿಹಿತ. ಶಿಕ್ಷಣಕ್ಕೆ ಕಟ್ಟಡವು ಅವಶ್ಯವಾದರೂ ಪ್ರಾಮುಖ್ಯವಲ್ಲ; ಗೌಣವಾದುದು. ಇದನ್ನರಿತು ಸಂಸ್ಥೆಯ ಚಾಲಕರು ಆದಷ್ಟು ಕಡಿಮೆ ಹಣದಲ್ಲಿ ಮಾಟವಾದ ಮತ್ತು ಭದ್ರವಾದ ಕಟ್ಟಡವನ್ನು ಕಟ್ಟಿಸಬೇಕು. ಮಾದರಿಯ ಭವ್ಯ ಕಟ್ಟಡ ಕಟ್ಟಿಸಿ ಒಳಗೆ ಏನೂ ಹುರುಳಿಲ್ಲದಿದ್ದರೇನು ಪ್ರಯೋಜನ?

## ಉಪಕರಣಗಳು.

ಮಾದರಿಯ ಶಾಲೆಗೆ ಯೋಗ್ಯ ಕಟ್ಟಡ ಅವಶ್ಯವಿರುವವಂತೆ ಉಪಕರಣಗಳಾದರೂ ಅವಶ್ಯ ಬೇಕಾಗುತ್ತವೆ. ಆಧುನಿಕ ಪದ್ಧತಿಗೆ ತಕ್ಕಂತೆ ವರ್ಗದ ಕೋಣೆಯಲ್ಲಿ ಕುರ್ಚಿ, ಮೇಜು, ಡೆಸ್ಕು, ಕಪಾಟು, ಫಳ, ಖಡು, ಒರಸುವ ಬಟ್ಟೆ, ಕಸದ ಬುಟ್ಟಿ, ಮಸಿಯ ದೌತಿ, ಟಾಕು, ಪುಸ್ತಕು, ನೋಟಬುಕ್ಕು, ನಕಾಶೆ, ಕಂಪಾಸ ಪೆಟ್ಟಿಗೆ, ಚಿತ್ರದ ಪಟಗಳು, ವಿವಿಧ ವಿಷಯದ ಪಟಗಳು ಇವೆಲ್ಲ ಸಾಧನಗಳು ಬೇಕೇಬೇಕಾಗುತ್ತವೆ. ಕುಶಲನಾದ ಶಿಕ್ಷಕನು ಅವುಗಳ ಉಪಯೋಗವನ್ನು ಚೆನ್ನಾಗಿಯೇ ಮಾಡಿಕೊಂಡು ಶಿಕ್ಷಣವನ್ನು ಪ್ರಗತಿಪರವಾಗಿಯೂ ಪರಿಣಾಮಕಾರಿಯಾಗಿಯೂ ಮಾಡುವನು. 'ಹೇಡಿಯ ಕೈಯಲ್ಲಿ ಚಂದ್ರಾಯುಧವಿದ್ದು ಫಲವೇನು?॥' ಎಂಬಂತೆ ಅನನುಭವಿಗಳೂ ಅಶಿಕ್ಷಿತರೂ ಆದ ಶಿಕ್ಷಕರಿಗೆ ಎಲ್ಲ ಉಪಕರಣಗಳು ಮುಂದಿದ್ದರೂ, ಅವುಗಳನ್ನು ಪಯೋಗಿಸುವ ಜಾಣ್ಮೆಯಿಲ್ಲದಿದ್ದರೆ ಶಿಕ್ಷಣವು ಅಷ್ಟು ಫಲಕಾರಿಯಾಗಲಾರದು. ಅದೇ ನೇರಿಗೆ ಸಾಯಿನ್ಸ ಮತ್ತು ಡ್ರಾಯಿಂಗ

ಶಿಕ್ಷಣಕ್ಕೆ ಅನೇಕ ಉಪಕರಣಗಳ ಅವಶ್ಯಕತೆ ಯುಂಟು. ಇದಲ್ಲದೆ ಸಾಲೆಯಲ್ಲಿ ಬಾಲಕರಿಗಾಗಿ ವರ್ತಮಾನಪತ್ರ, ಪುಸ್ತಕ ಸಂಗ್ರಹ, ಮ್ಯಾಜಿಕ್ ಲ್ಯಾಂಟರ್ನ, ಮುಂತಾದ ಅನುಕೂಲತೆಗಳೂ ಅವುಗಳ ಯೋಗ್ಯ ಉಪಯೋಗವೂ ಆಗುವದು ವಿಹಿತ. ಅದರಂತೆ ಶಾರೀರಿಕ ಶಿಕ್ಷಣದ ಸಲುವಾಗಿ ವಿಸ್ತೀರ್ಣವಾದ ಆಟದ ಬೈಲು, ಅದಕ್ಕೆ ತಕ್ಕ ಅನೇಕ ಆಟದ ಸಾಮುಗ್ರಿಗಳು ಇದ್ದರೆ ವಿವಿಧ ಮನೋರಂಜನೆಯ ಶಾರೀರಿಕ ಶಿಕ್ಷಣಕ್ಕೆ ಕಳೆಯುಂಟಾಗುವದು. ಶಾಲೆಗೆ ಹೊಂದಿ ಅನೇಕ ಪ್ರಕಾರದ ಹೂ ಕಾಯಿ ವನಸ್ಪತಿಗಳಿಂದ ಶೋಭಿಸುವ ತೋಟವಿದ್ದರೆ ಬಾಲಕರ ಉಲ್ಹಾಸವೃತ್ತಿಗೆ ಅನುಕೂಲವಾಗುವದು. ಇವೆಲ್ಲ ಅನು ಕೂಲತೆಗಳನ್ನೊದಗಿಸಿಕೊಟ್ಟರೂ, ಕೈಲಾಗದ ಶಿಕ್ಷಕರು ಗಂಟು ಬಿದ್ದರೆ ಶಿಕ್ಷಣವು ಮಾದರಿಯಾಗುವದೊತ್ತಟ್ಟಿಗುಳಿದು ಉಪಕರಣಗಳೇ ನಿರ ರ್ಥಕವೆಂಬ ಮಟ್ಟಿಗೆ ನಾವು ಬಂದು ಮುಟ್ಟುವೆವು.

## ಅನಭ್ಯಸ್ತ ವಿಷಯುಗಳು.

ವಿದ್ಯಾರ್ಥಿಗಳ ಪರೀಕ್ಷೆಯ ವಿಷಯುಗಳಿಗಷ್ಟೇ ಗಮನಿಸಿದೆ ಅಭ್ಯಾ ಸಪತ್ರಿಕೆಗೆ ಬಾಹ್ಯವಾದ ಇತರ ವಿಷಯುಗಳನ್ನು ಲಕ್ಷಿಸುವದೂ ಮಾದ ರಿಯ ಶಾಲೆಯ ದ್ಯೋತಕವು. ಉದಾಹರಣಾರ್ಥವಾಗಿ ಬಾಲಕರಿಗೆ ಐತಿಹಾಸಿಕ ಮತ್ತು ಔದ್ಯೋಗಿಕ ಸ್ಥಳಗಳ ಪ್ರವಾಸ, ಸ್ಕಾವುಟಿಂಗ, ವಕ್ತೃತ್ವಕಲೆ, ನಾಟ್ಯಸಂಗೀತ ಪ್ರಹಸನ, ಕೈಬರಹದ ಮಾಸಿಕ, ಕೈಗಾ ರಿಕೆಯ ವಸ್ತುಸಂಗ್ರಹಾಲಯ, ಸಾಮೂಹಿಕ ಪ್ರಾರ್ಥನೆ ಮುಂತಾದ ವಿಷಯುಗಳನ್ನು ಅನುಕೂಲಿಸಿ ಕೊಡಬೇಕು. ಅದರಿಂದ ಬಾಲಕರ ಬುದ್ಧಿಶಕ್ತಿಯು ವಿಕಾಸಹೊಂದುತ್ತದೆ. ಹೃದಯವು ಆನಂದೋಲ್ಹಾಸ ಗಳಿಂದ ನಲಿದಾಡುತ್ತದೆ. ಈ ಪ್ರತಿಯೊಂದು ವಿಷಯುದಲ್ಲಿಯೂ ಶೈಕ್ಷ ಣಿಕ ಯೋಗ್ಯತೆಯು ಹುದುಗಿಕೊಂಡಿರುತ್ತದೆ. ಯಾವ ಶಾಲೆಯಲ್ಲಿ ಇವೆಲ್ಲ ಅನುಕೂಲತೆಗಳಿಗೆ ಸ್ಥಾನವಿಲ್ಲವೋ ಅದು ಎಂದಿಗೂ ಮಾದ ರಿಯ ಶಾಲೆಯಾಗಲಾರದು.

## ಶಿಕ್ಷಣಕ್ಕೆ ಬೇಕಾದ ವಿಷಯುಗಳು.

ಈಗಿನ ವಿದ್ಯಾರ್ಥಿಗಳನ್ನು ಮುಂದೆ ಒಳ್ಳೇ ನಾಗರಿಕರನ್ನಾಗಿ ಮಾಡುವದೇ ಶಿಕ್ಷಣದ ಮುಖ್ಯಧ್ಯೇಯವಾಗಿರುವದರಿಂದ ಮೇಲೆ ಕಾಣಿ

ಸಿದ ಎಲ್ಲ ವಿಷಯುಗಳು ಅವಶ್ಯವಾಗಿದ್ದರೂ ಗೌಣವಾಗಿವೆ. ಮುಖ್ಯ ವಾಗಿ ಬೇಕಾದ ವಿಷಯುಗಳೆಂದರೆ ಬಾಲಕ, ಶಿಕ್ಷಕ, ವಿಷಯು ಇವು ಮೂರೇ. ಶಿಕ್ಷಣ ಹೊಂದುವವನು ಬಾಲಕ, ಶಿಕ್ಷಣ ಕೊಡುವವನು ಶಿಕ್ಷಕ, ಶಿಕ್ಷಣಕ್ಕೆ ಬೇಕಾದುದು ವಿಷಯು. ವಿದ್ಯಾರ್ಥಿಗೆ ವಿದ್ಯೆಯುನ್ನು ಗಳಿಸಬೇಕೆಂಬ ಹಂಬಲವಿರಬೇಕು. ಆ ವಿದ್ಯಾರ್ಥಿಗೆ ಮಾದರಿಯು ಶಿಕ್ಷಣವನ್ನು ಕೊಡಬೇಕಾದರೆ ಆದರ್ಶ ಶಿಕ್ಷಕನು ಬೇಕು. ಕಲಿಯು ತಕ್ಕ ವಿಷಯುಗಳು ಬಾಲಕನ ಜೀವನಾಧಾರಕ್ಕೆ ಅವಶ್ಯವಾಗಿರಬೇಕು. ಈ ಕಾರ್ಯದಲ್ಲಿ ಸಹಾಯುಕರು, ಸಹಾನುಭೂತಿಯುಳ್ಳವರೆಂದರೆ ಆಯಾಯು ಸಂಸ್ಥೆಯು ಚಾಲಕರು, ಬಾಲಕರ ತಾಯ್ತಂದೆಗಳು ಅಥವಾ ಪಾಲಕರು, ಸಮಾಜ, ಮತ್ತು ವಿದ್ಯಾಖಾತೆಯು ಮೇಲಧಿಕಾರಿಗಳು. ಇವೆಲ್ಲ ಮಹನೀಯುರ ಯೋಗ್ಯವಾದ ಸಲಹೆ ಸಹಾಯು ಸಹಕಾರಿಗ ಳಿಂದ ಮಾದರಿಯು ಶಿಕ್ಷಣಕ್ಕೆ ಕಳೆಬರುತ್ತದೆ.

ಬಾಲಕನು ಸರ್ವಾಂಗಸುಂದರವಾದ ಬೆಳವಣಿಗೆಯುನ್ನು ಹೊಂದಿ ಭಾವೀ ನಾಗರಿಕನಾಗಿ ಸುಖರೂಪದಿಂದ ಬಾಳಬೇಕಾದರೆ ಆತನ ಶಾರೀರಿಕ, ಬೌದ್ಧಿಕ, ಔದ್ಯೋಗಿಕ ಮತ್ತು ನೈತಿಕ ಶಿಕ್ಷಣಗಳ ಕಡೆಗೆ ಲಕ್ಷ್ಯಗೊ ಡುವದು ಪ್ರತಿಯೊಂದು ಆದರ್ಶಶಾಲೆಯು ಮುಖ್ಯ ಕರ್ತವ್ಯವು. ಇವೆ ಲ್ಲವು ಒಳ್ಳೇ ಸುಗಮವಾಗಿಯೂ ಒಳ್ಳೇ ಪರಿಣಾಮಕಾರಿಯಾಗಿಯೂ ಜರಗುವಂತೆ ಶಿಕ್ಷಕರು ಪ್ರಯುತ್ನಿಸಬೇಕು. ಅದಕ್ಕಾಗಿ ಸಂಸ್ಥೆಯು ಚಾಲ ಕರೂ, ಹುಡುಗರ ಪಾಲಕರೂ, ಸಮಾಜವೂ, ವಿದ್ಯಾಖಾತೆಯೂ ಯೋಗ್ಯ ಸಲಹೆ ಪ್ರೋತ್ಸಾಹಗಳನ್ನೀಯುಬೇಕು. ಶಿಕ್ಷಣದಿಂದಲೇ ಬಾಲ ಕನ ಸಂಸ್ಕೃತಿಯು ಬೆಳೆಯುತ್ತದೆ. ಬಾಲಕನ ಶಾರೀರಿಕ, ಬೌದ್ಧಿಕ ಕಾಯುಕ, ನೈತಿಕ ಸಂಸ್ಕೃತಿಗಳಲ್ಲಿ ಯಾವದಾದರೊಂದು ಕಡಿಮೆಯಾ ದರೆ ಆ ಶಿಕ್ಷಣವು ಸಂಪೂರ್ಣವೆನಿಸುವದಿಲ್ಲ. ಇವೆಲ್ಲವುಗಳಿಗೂ ಶಿಕ್ಷಣ ಸಂಸ್ಥೆಯುಲ್ಲಿ ಆಸ್ಪದವು ಇದ್ದೇ ತೀರಬೇಕು. ಅಂದರೇನೇ ಅದು ಮಾದ ರಿಯು ಶಾಲೆಯಾಗುವದು.

(ಮುಂದುವರಿಯುವದು.)

ಕಥಾಂತರಗಳು:— ವೈಜವ್ವೆಯ ವಿಷಯವಾಗಿ ಕೆಲವು ಗ್ರಂಥ ಗಳಲ್ಲಿ ಕಥಾಂತರಗಳಿವೆ. ಅವುಗಳಲ್ಲಿ ಮುಖ್ಯವಾದುದು ಯಾವದೆಂದರೆ- ವೈಜವ್ವೆಯು ಜೈನ ಮುನಿಗಳಿಗೆಂದು ಸಿದ್ಧಮಾಡಿದ ಆಹಾರಪದಾರ್ಥ ಗಳನ್ನು ಒಬ್ಬ ಜಂಗಮನಿಗೆ ಕೊಟ್ಟಿದ್ದನ್ನು ಅವಳ ಗಂಡನು ನೋಡಿ ಬಹಳ ಕೋಪಗೊಂಡು ಅವಳನ್ನು ಬಹಳ ಹೊಡೆದು ಬಡಿದು ಮನೆಯ ಹೊರಗೆ ಹಾಕಿದನು. ಆಗ ಅವಳು ದುಃಖಿಸುತ್ತ ಬೀದಿಯಿಂದ ಹೋಗು ತ್ತಿರಲು ಮಧ್ಯದಲ್ಲಿ ಒಂದು ದೇವಾಲಯವನ್ನು ಕಂಡು ಅದು ಹರನ ಗುಡಿ ಎಂದು ತಿಳಿದು ಒಳಗೆ ಪ್ರವೇಶಿಸಿದಳು. ಆದರೆ ಅದು ಒಂದು ಚೈತ್ಯಾಲಯವಾಗಿತ್ತು. ದುಃಖದ ಭರದಲ್ಲಿ ಅವಳ ಕಣ್ಣಿಗೆ ಎಲ್ಲವೂ ಮಬ್ಬಾಗಿದ್ದು ಅವುದೂ ನಿಚ್ಚಳವಾಗಿ ಕಾಣುತ್ತಿದ್ದಿಲ್ಲ. ಅವಳು ದೇವಾ ಲಯವನ್ನು ಪ್ರವೇಶಿಸಿ ಅಲ್ಲಿಯ ಜಿನಮೂರ್ತಿಯು ಲಿಂಗವೆಂದು ಭಾವಿಸಿ ನಮಸ್ಕರಿಸಿದಳು. ಆಗ ಅವಳ ಭಾವನೆಯ ಮೂಲಕ ಆ ಮೂರ್ತಿಯು ಒಡೆದು ಹೋಗಿ ಅದರ ಸ್ಥಳದಲ್ಲಿ ಒಂದು ಲಿಂಗವು ಉದ್ಭವಿಸಿತು. ಅದೇ ವೈಜನಾಥ ಲಿಂಗವಾಯಿತು. ಗ್ರಾಮದಲ್ಲಿದ್ದ ಜೈನರು ಈ ಅದ್ಭುತ ವನ್ನು ಕಂಡು ವೈಜವ್ವೆಯು ಮಹಾತ್ಮಳೆಂದು ಭಾವಿಸಿ ಅವರೆಲ್ಲರೂ ಲಿಂಗಧಾರಿಗಳಾದರು.

ವೈಜವ್ವೆಯ ಹೆಸರು ಗಣಸಹಸ್ರದಲ್ಲಿ ಬಂದಿದೆ. ಆದ್ದರಿಂದ ಅವಳು ಪುರಾತನಳು. ಅವಳು ವೀರಶೈವ ಚಳವಳಿಯ ಆರಂಭಕಾಲದಲ್ಲಿ ಇದ್ದಂತೆ ತೋರುತ್ತದೆ. ಬಹುಶಃ ಬಸವೇಶ್ವರನಕಿಂತಲೂ ಕೆಲಕಾಲ ಹಿಂದಿನವಳಿರಬಹುದು. ಆಗ ಜೈನ, ವೀರಶೈವ ಮತ್ತು ಬ್ರಾಹ್ಮಣ ಸಮಾಜಗಳಲ್ಲಿ ಮತಾಂತರಗಳು ಪರಸ್ಪರ ಬಹಳ ಹೆಚ್ಚಾಗಿ ಆಗುತ್ತಿ ದ್ದವು. ಆದ್ದರಿಂದಲೇ ವೈಜವ್ವೆಯ ತಂದೆಯು ಅವಳನ್ನು ಒಬ್ಬ ಜೈನ ನಿಗೆ ಕೊಟ್ಟು ಲಗ್ನ ಮಾಡಿದ್ದಾನೆ. ಇಂಥ ಉದಾಹರಣೆಗಳು ಹಿಂದಿನ ಕಾಲದಲ್ಲಿರುವ ಶಿವಶರಣರಲ್ಲಿ ಅನೇಕವಿರುತ್ತವೆ. ಆದರೆ ಬಸವೇ ಶ್ವರನ ಕಾಲದಲ್ಲಿ ಶಿವಶರಣರ ಉದಾರ ತತ್ವಗಳು ದೇಶದಲ್ಲಿ ಪ್ರಸಾ ರವಾಗುತ್ತ ಹೋದಹಾಗೆ ಕೆಲಕಾಲದ ಮೇಲೆ ಈ ಮೂರು ಸಮಾಜ ಗಳು ತೀರ ಭಿನ್ನ ಭಿನ್ನವಾದವೆಂದು ತೋರುತ್ತದೆ.

ಈ ಕಾಲದಲ್ಲಿ ಗೋದಾವರೀತೀರ ಪ್ರದೇಶದಲ್ಲಿ ಉರಿಲಿಂಗದೇವ, ಉರಿಲಿಂಗಪೆದ್ದಿ, ಕಾಳವ್ವೆ, ಕೋಲಂಬೆ ಮೊದಲಾದ ಶಿವಶರಣ ಶಿವ

ಶರಣೆಯರು ಆಗಿಹೋಗಿದ್ದಾರೆ. ಕುಂಬಾರ ಗುಂಡಯ್ಯನು ಇದ್ದ ಬಲ್ಲಾಕಿ ಅಥವಾ ಭಾಲ್ಕಿ ಗ್ರಾಮವಾದರೂ ಈ ಪ್ರಾಂತಕ್ಕೆ ಸಮೀಪವಾಗಿಯೇ ಇದೆ. ಇದರಿಂದ ಶಿವಶರಣರ ತತ್ವಗಳು ಈ ಭಾಗದಲ್ಲೆಲ್ಲ ಪ್ರಸಾರವಾಗುತ್ತಲಿದ್ದದರಿಂದ ವೀರಶೈವ ಸಮಾಜದ ಉದಯವು ಈ ಉತ್ತರ ಭಾಗದಲ್ಲಿ ಉಂಟಾಗಿರುತ್ತದೆ.

ಈ ಭಾಗದಲ್ಲಾದ ಶಿವಶರಣ ಶರಣೆಯರಲ್ಲಿ ಕೆಲವರು ಕನ್ನಡ ವಚನಕಾರರಿದ್ದಾರೆ. ಈಗಲೂ ಇಲ್ಲಿಯ ಅನೇಕ ಗ್ರಾಮಗಳ ಹೆಸರುಗಳೂ ಕೂಡ ಕನ್ನಡವಿರುತ್ತವೆ. ಆದ್ದರಿಂದ ೧೧ನೇ ಮತ್ತು ೧೨ನೇ ಶತಮಾನಗಳಲ್ಲಿ ಈ ಗೋದಾವರೀ ತೀರ ಪ್ರದೇಶವು ೯ನೇ ಶತಮಾನದಲ್ಲಿ ಆಳಿದ ರಾಷ್ಟ್ರಕೂಟ ಅರಸನಾದ ನೃಪತುಂಗನ ಕಾಲದಲ್ಲಿದ್ದಂತೆ ಕನ್ನಡನಾಡಾಗಿತ್ತೆಂದು ತೋರುತ್ತದೆ.

ದೇವಿಯರ ತ್ರಿವಿಧಿಯಲ್ಲಿ ವೈಜವ್ವೆಯ ಉಲ್ಲೇಖವಿರುವದು ಹೇಗೆಂದರೆ:—

ರಾಜಾನ್ನದಡಿಗೆಯನ್ನೂ । ರ ಜೈನರಿಗುಣಿಸದೆ
ರಾಜಶೇಖರಗೆ ಉಣಿಸಿ ನಿತ್ಯವ ಪಡೆದ
ವೈಜಕ್ಕವ್ವೆಯೆ ಶರಣಾಗು ॥

---

## ಏಕಾಂತದ ರಾಮಯ್ಯ.

ನಿಜಾಮನ ರಾಜ್ಯದಲ್ಲಿ ಕಲಬುರ್ಗಿ ಜಿಲ್ಲೆಯಲ್ಲಿ ಆಲ್ದಿ ಎಂಬ ಗ್ರಾಮವಿದೆ. ಅದು ಈಗ ಒಂದು ತಾಲೂಕಿನ ಸ್ಥಳವಾಗಿರುತ್ತದೆ. ಅದು ಸೊಲ್ಲಾಪುರ ಪಟ್ಟಣದ ಪೂರ್ವಕ್ಕೆ ೨೨ ಮೈಲುಗಳ ಮೇಲೆ ಇರುವ ಅಕ್ಕಲಕೋಟೆಯಿಂದ ೩೨ ಮೈಲು ದೂರವಿರುತ್ತದೆ. ಈ ಗ್ರಾಮದ ಪೂರ್ವದ ಹೆಸರು 'ಅಲಂದೆ' ಎಂಬುದಾಗಿತ್ತು.

ಈ ಅಲಂದೆ ಗ್ರಾಮದಲ್ಲಿ ವತ್ಸಗೋತ್ರದ 'ಪುರುಷೋತ್ತಮ ಭಟ್ಟ' ಎಂಬ ಹೆಸರಿನ ಬ್ರಾಹ್ಮಣನು ಅಲ್ಲಿಯ ಬ್ರಹ್ಮಪುರಿ ಅಂದರೆ ಬ್ರಾಹ್ಮಣರ ಕೇರಿಯಲ್ಲಿ ವಾಸಮಾಡುತ್ತಿದ್ದನು. ಅವನ ಹೆಂಡತಿಯ ಹೆಸರು

ಸೀತಾದೇವಿಯು. ಅವರಿಗೆ ಮಕ್ಕಳಿದ್ದಿಲ್ಲ. ಅವರು ತಮ್ಮ ಗ್ರಾಮದಲ್ಲಿ ಅತ್ಯಂತ ಪ್ರಸಿದ್ಧಿ ಹೊಂದಿದ ಸೋಮನಾಥ ದೇವರಿಗೆ[೧] ಉಭಯ ದಂಪತಿಗಳು ತಮಗೆ ಒಬ್ಬ ಮಗನಾಗಬೇಕೆಂದು ಬೇಡಿಕೊಂಡು ಆ ದೇವರನ್ನು ಯಾವಾಗಲೂ ಪೂಜಿಸುವರು. ಹೀಗಿರಲು ಅವರಿಗೆ ಒಬ್ಬ ಮಗನು ಹುಟ್ಟಿದನು. ಅವನಿಗೆ ಅವರು 'ರಾಮ' ಎಂಬ ಹೆಸರನ್ನಿಟ್ಟರು.

ರಾಮನು ದೊಡ್ಡವನಾದ ಹಾಗೆ ಅವನಲ್ಲಿ ಶಿವಭಕ್ತಿಯು ಹೆಚ್ಚುತ್ತಲೇ ಬಂದಿತು. ಅವನು ನುಡಿದ ನುಡಿಯಲ್ಲಿ ಎಂದೂ ತಪ್ಪನು. ಹಿಡಿದ ಭಾಷೆಯನ್ನು ಬಿಡನು. ಅತ್ಯಂತ ನಿಸ್ಪೃಹವೃತ್ತಿಯುಳ್ಳವನು. ಶಿವಜ್ಞಾನಿಯಾಗಿ ಶಿವಯೋಗದಲ್ಲಿ ಯಾವಾಗಲೂ ನಿರತನು. ಅವನು ತನ್ನ ಶಿವಯೋಗಾಚರಣೆಯನ್ನು ಪಾಲಿಸುತ್ತ ಏಕಾಂತದಲ್ಲಿ ಧ್ಯಾನಮಗ್ನನಾಗಿ ಕಾಲಕಳೆಯುವನು. ಅವನ ಈ ಅಚಲವಾದ ಗುಪ್ತಭಕ್ತಿಯನ್ನು ಜನರು ನೋಡಿ ಅವನನ್ನು 'ಏಕಾಂತದ ರಾಮಯ್ಯ'ನೆಂಬ ಹೆಸರಿನಿಂದ ಕರೆಯಹತ್ತಿದರು. ಈ ಹೆಸರಿನಿಂದಲೇ ಅವನು ನಾಡಿನಲ್ಲಿ ಪ್ರಸಿದ್ಧನಾದನು.

ಆಲಂದೆ ಗ್ರಾಮದಲ್ಲಿ ಏಕಾಂತದ ರಾಮಯ್ಯನು ಶಿವಯೋಗಾಚರಣೆಯಲ್ಲಿ ಕಾಲಕಳೆಯುತ್ತಿರಲು ಅವನ ಮನಸ್ಸಿನಲ್ಲಿ ಶಿವಶರಣರು ತಮ್ಮ ಮಹಾತ್ಮೆಯನ್ನು ತೋರಿಸಿದ ಸ್ಥಳಗಳನ್ನು ನೋಡಬೇಕೆಂಬ ಕುತೂಹಲವು ಉಂಟಾಯಿತು. ಆಗ ಅವನು ಮೊದಲು ತನ್ನ ಗ್ರಾಮದಿಂದ ೩೬ ಮೈಲು ದೂರವಿರುವ ಕಲ್ಯಾಣ ಪಟ್ಟಣಕ್ಕೆ ಹೋಗಿ ಅದಕ್ಕೆ ಸಮೀಪವಾಗಿದ್ದ 'ಶಿವಪುರ' ಎಂಬ ಗ್ರಾಮಕ್ಕೆ ಬಂದನು. ಅದು ಕಲ್ಯಾಣಕ್ಕೆ ಹೋಗಿಬರುವ ಶಿವಶರಣರ ಮುಖ್ಯ ಆವಾಸಸ್ಥಾನವಾಗಿತ್ತು. ಅಲ್ಲಿ ಅವನು ಶಿವಾನುಭವ ಗೋಷ್ಠಿಯಲ್ಲಿ ಕೆಲಕಾಲವಿದ್ದು ಅಲ್ಲಿಂದ ದಕ್ಷಿಣ ದೇಶಕ್ಕೆ ಹೊರಟು, ಅಲ್ಲಲ್ಲಿಯ ಶಿವಶರಣರನ್ನು ಕಾಣುತ್ತ 'ಪುಲಿಗೆರೆ' ಅಂದರೆ ಈಗಿನ ಲಕ್ಷ್ಮೇಶ್ವರಕ್ಕೆ ಬಂದನು. ಅದು ಸೋಮಯ್ಯನ ಸ್ಥಾನವು. ಅಲ್ಲಿ ಅವನಿಂದುಂಟಾದ 'ಹುಲಿಗೆರೆಯ ಸೋಮನಾಥ'ನನ್ನು ಸಂದರ್ಶಿಸಿ

---

(೧, ಸೋಮನಾಥ ದೇವಾಲಯವನ್ನು ಉಲ್ಲೇಖಿಸುವ ಶಿಲಾಶಾಸನವು ಈ ಗ್ರಾಮದಲ್ಲಿ ಈಗಲೂ ಇದೆ. ಡಾ॥ ದೇಸಾಯಿ ಪಾಂಡುರಂಗರಾವ ಇವರ ಲೇಖನವನ್ನು ಶರಣ ಸಾಹಿತ್ಯ ೪-೫, ಪು.೧೨೮ ರಲ್ಲಿ ನೋಡಿರಿ.)

ಅಲ್ಲಿಂದ ಹೊರಟು ಅನೇಕ ಶಿವಶರಣರು ವಾಸಮಾಡುತ್ತಿದ್ದ ಬನವಾಸಿ ಪ್ರಾಂತದ ಕಡೆಗೆ ಹೊರಟನು. ಈ ನಾಡಿನಲ್ಲಿ ಬಳ್ಳಿಗಾವಿ, ಅಲ್ಲದೆ ಬನವಾಸಿಯ ಈಶಾನ್ಯ ದಿಕ್ಕಿಗೆ ೨೪ ಮೈಲುಗಳ ಮೇಲೆ ಇರುವ 'ರೇವಣಸಿದ್ಧಗಿರಿ' ಮುತ್ತಿಗಿ, ಹಿರೇಜಂಬೂರು ಇವೇ ಮೊದಲಾದ ಶಿವಶರಣರ ಕ್ಷೇತ್ರಗಳನ್ನು ಸಂದರ್ಶಿಸಲು ಹೊರಟು ಮಾರ್ಗದಲ್ಲಿ ಪುಲಿಗೆರೆಯಿಂದ ದಕ್ಷಿಣಕ್ಕೆ ೪೦ ಮೈಲುಗಳ ಮೇಲಿರುವ ಅಬ್ಬಲೂರು ಎಂಬ ಗ್ರಾಮವಿದ್ದು ಅಲ್ಲಿಗೆ ಬಂದನು. ಈ ಗ್ರಾಮವು ಬನವಾಸಿ ಪಟ್ಟಣದ ಪೂರ್ವ ದಿಕ್ಕಿಗೆ ೨೪ ಮೈಲು ದೂರವಿರುತ್ತದೆ.

ಅವನು ಈ ಅಬ್ಬಲೂರು ಗ್ರಾಮವನ್ನು ಪ್ರವೇಶಿಸಲಾಗಿ ಅಲ್ಲಿ ಎಲ್ಲೆಲ್ಲಿಯೂ ಜೈನರ ಸಂಚಾರವೂ ಅವರ ಬಸದಿಗಳೂ ಕಂಡ.ಬಂದವು. ಅಲ್ಲಿ ಶಿವಭಕ್ತರ್ಯಾರೂ ಅವನಿಗೆ ಕಾಣಬರಲಿಲ್ಲ. ಅವನು ಆ ದಿನ ಗ್ರಾಮದಲ್ಲಿ ಬಿಡಾರಬಿಡಬೇಕೆಂದು ಯೋಚಿಸಿ ಶಿವಾಲಯವನ್ನು ಹುಡುಕುತ್ತ ಹೊರಟನು. ಹೀಗೆ ಹೋಗುವಲ್ಲಿ ಮಾರ್ಗದಲ್ಲಿ ಒಂದು ಶಿವಾಲಯವು ಅವನ ದೃಷ್ಟಿಗೆ ಬಿದ್ದಿತು. ಅದನ್ನು ನೋಡಿ ಅವನು ಅದರ ಪ್ರವೇಶ ಮಾಡಿದನು.

ಅವನು ಒಳಗೆ ಪ್ರವೇಶಿಸಲಾಗಿ ಅದು 'ಬ್ರಹ್ಮೇಶ್ವರ ದೇವಾಲಯ' ವಿರುತ್ತದೆಂದು ಅವನಿಗೆ ತಿಳಿದುಬಂದಿತು. ಗರ್ಭಗುಡಿಯೊಳಗೆ ಹೋಗಿ ನೋಡುತ್ತಾನೆಯೇ ಒಳಗಿದ್ದ ಶಿವಲಿಂಗಕ್ಕೆ ಅರ್ಚನೆ ಪೂಜಾದಿ ಕಾರ್ಯಗಳು ಯಾವವೂ ನಡೆದಂತೆ ತೋರಲಿಲ್ಲ. ದೇವಾಲಯದಲ್ಲಿ ಎಲ್ಲೆಲ್ಲಿಯೂ ಕಸವೂ ದೂಳೂ ತುಂಬಿಹೋಗಿದ್ದವು. ರಾಮಯ್ಯನು ಅದನ್ನು ನೋಡಿ ಖಿನ್ನಮನಸ್ಕನಾಗಿ ದೇವಾಲಯವನ್ನೆಲ್ಲ ಶುಚಿಮಾಡಿ ನಿಟ್ಟುಸಿರುಬಿಡುತ್ತ ಉಮ್ಮಳಿಸುತ್ತ ಲಿಂಗದ ಪೂಜೆ ಮಾಡಬೇಕೆಂದು ಪುಷ್ಪಗಳನ್ನು ತರಲು ಹೊರಗೆಹೊರಟನು. ಅಷ್ಟರಲ್ಲಿ ಸಂಕರಗೌಡನೆಂಬ ಗ್ರಾಮದ ಜೈನ ಅಧಿಪತಿಯು ಕೆರಹುಗಾಲಿನಿಂದ ಗಳಗಳನೆ ಒಳಗೆ ಬಂದು ಗರ್ಭಗುಡಿಯಲ್ಲಿ ಬಂದು ನಿಂತನು. ಆಗ ಏಕಾಂತದ ರಾಮಯ್ಯನು ಕ್ರೋಧಾವಿಷ್ಟನಾಗಿ ಅವನಿಗೆ— ಶಿವದ್ರೋಹಿಯೇ, ಹೀಗೆ ನೀನು ಕೆರಹುಗಾಲಿನಿಂದ ಶಿವಾಲಯದ ಒಳಗೆ ಪ್ರವೇಶಿಸಬಹುದೇ? ಎಂದು ನುಡಿಯಲು, ಜೈನನು—ಗೊರವನೇ, ಇಲ್ಲೆಲ್ಲಿಯ ನಿನ್ನ ಶಿವನು? ಅವನಾರು?

ಬೊಗಳದಿರು. ಜಿನನೇ ದೈವವು. ಶಿವನೆಂಬುದು ಸುಳ್ಳು. ಆ ನಿನ್ನ ಶಿವನು ಯಾರಿಗೆ ಏನು ಕೊಟ್ಟಿದ್ದಾನೆ? ಎಂದು ನುಡಿದನು. ಅದಕ್ಕೆ ಏಕಾಂತದ ರಾಮಯ್ಯನು— ಎಲೋ ಕುನ್ನಿಯೇ, ಪರಿವಳಿಗೆಯಲ್ಲಿ ಶಿವನು ವೈಜವ್ವೆಗೋಸ್ಕರ ಜಿನನನ್ನು ಒಡೆದು ಲಿಂಗವನ್ನಾಗಿ ಮಾಡಿ ವೈಜನಾಥನಾದನೆಂಬುದು ನಿನಗೆ ಗೊತ್ತಿಲ್ಲವೇ? ಹುಲಿಗೆರೆಯಲ್ಲಿ ಸೋಮಯ್ಯನಿಗೋಸ್ಕರ ಶಿವನು ಜಿನನಲ್ಲಿ ಮೂಡಿ ಸೋಮನಾಥನಾದನೆಂಬುದನ್ನು ನೀನು ಅರಿಯೆಯಾ? ಪೊಟ್ಟಲಕೆರೆಯಲ್ಲಿ ದೇವರ ದಾಸಿಮಯ್ಯನಿಗೆ ಶಿವನು ಲಿಂಗವಾಗಿ ತೋರಿ ಅವನಿಗೆ ಶವನಿಧಿಯನ್ನು ಕೊಟ್ಟುದನ್ನು ಅರಿಯೆಯಾ? ಎಂದು ಕೇಳಿದನು. ಅದಕ್ಕೆ ಆ ಜೈನನು— ಆ ಹಿಂದಿನವರ ಕಥೆಗಳನ್ನು ನನಗೆ ಹೇಳಬೇಡ. ಈಗ ನೀನು ನಿನ್ನ ತಲೆಯನ್ನು ಕತ್ತರಿಸಿಕೊಂಡು ಅದನ್ನು ಮರಳಿ ಪಡೆದರೆ ನಿನ್ನ ಶಿವನು ನಿಜವೆಂದು ನಾನು ನಂಬುತ್ತೇನೆ. ಹಾಗೆ ಮಾಡಿದಲ್ಲಿ ನಮ್ಮ ಗ್ರಾಮದ ಬಸದಿಯಲ್ಲಿಯ ಜಿನಮೂರ್ತಿಯನ್ನು ತೆಗೆದುಹಾಕಿ ಅದರ ಸ್ಥಳದಲ್ಲಿ ಲಿಂಗವನ್ನು ನಾವು ಸ್ಥಾಪಿಸುವೆವು ಎಂದು ಹೇಳಿದನು. ಅದಕ್ಕೆ ರಾಮಯ್ಯನು— ಇದು ನಿಜವೇ? ಹಾಗಾದರೆ ನನ್ನ ಕತ್ತನ್ನು ಕತ್ತರಿಸಿಕೊಳ್ಳಲು ಒಪ್ಪುತ್ತೇನೆ. ಆದರೆ ಜಿನಮೂರ್ತಿಯನ್ನು ತೆಗೆದು ಅದರ ಸ್ಥಳದಲ್ಲಿ ಲಿಂಗವನ್ನು ಪ್ರತಿಷ್ಠಿಸುವೆವೆಂದು ನೀವು ಒಂದು ಭಾಷಾಪತ್ರವನ್ನು ನನಗೆ ಬರೆದುಕೊಡಬೇಕು. ಇದಕ್ಕೆ ಒಪ್ಪುವಿರೋ ಎಂದು ಕೇಳಲು, ಅಷ್ಟರಲ್ಲಿ ಅಲ್ಲಿ ನೆರೆದಿದ್ದ ಜೈನರು ಅದಕ್ಕೆ ಒಪ್ಪಿ ಆ ರೀತಿಯಾಗಿ ಅವರು ಏಕಾಂತದ ರಾಮಯ್ಯನಿಗೆ ಒಂದು ಓಲೆಯನ್ನು ಬರೆದುಕೊಟ್ಟರು.

ಏಕಾಂತದ ರಾಮಯ್ಯನು ತನ್ನ ಕತ್ತನ್ನು ಕತ್ತರಿಸಿ ಪುನಃ ಅದನ್ನು ಪಡೆಯುವನೆಂಬ ಸುದ್ದಿಯು ಸುತ್ತಲಿನ ಗ್ರಾಮಗಳಲ್ಲಿ ಹಬ್ಬಿತು. ಆಗ ಈ ಕೌತುಕವನ್ನು ನೋಡಬೇಕೆಂದು ಅಸಂಖ್ಯ ಜನ ಭಕ್ತರೂ ಜೈನರೂ ಪಟ್ಟಣಕ್ಕೆ ಬಂದು ದೇವಾಲಯದ ಮುಂದೆ ನೆರೆದರು. ಶಿವಶರಣರಲ್ಲಿ ಅತ್ಯಂತ ಪ್ರಸಿದ್ಧನಾದ ಅಗ್ಗವಣಿಯ ಹೊನ್ನಯ್ಯನೂ ಕೂಡ ಅಲ್ಲಿಗೆ ಬಂದಿದ್ದನು.

ಹೀಗೆ ಜನರು ನೆರೆಯಲು ಏಕಾಂತದ ರಾಮಯ್ಯನು ವೀರಗಾಸೆಯನ್ನುಟ್ಟು, ಹಣೆಯಲ್ಲಿ ಭಸಿತವನ್ನಿಟ್ಟು, ನೆರೆದ ಮಹೇಶ್ವರರಿಗೆ

ಅಲ್ಲಿಂದ ಹೊರಟು ಅನೇಕ ಶಿವಶರಣರು ವಾಸಮಾಡುತ್ತಿದ್ದ ಬನವಾಸಿ ಪ್ರಾಂತದ ಕಡೆಗೆ ಹೊರಟನು. ಈ ನಾಡಿನಲ್ಲಿ ಬಳ್ಳಿಗಾವಿ, ಅಲ್ಲದೆ ಬನವಾಸಿಯ ಈಶಾನ್ಯ ದಿಕ್ಕಿಗೆ ೨೪ ಮೈಲುಗಳ ಮೇಲೆ ಇರುವ 'ರೇವಣಸಿದ್ಧಗಿರಿ' ಮುತ್ತಿಗಿ, ಹಿರೇಜಂಬೂರು ಇವೇ ಮೊದಲಾದ ಶಿವಶರಣರ ಕ್ಷೇತ್ರಗಳನ್ನು ಸಂದರ್ಶಿಸಲು ಹೊರಟು ಮಾರ್ಗದಲ್ಲಿ ಪುಲಿಗೆರೆಯಿಂದ ದಕ್ಷಿಣಕ್ಕೆ ೪೦ ಮೈಲುಗಳ ಮೇಲಿರುವ ಅಬ್ಬಲೂರು ಎಂಬ ಗ್ರಾಮವಿದ್ದು ಅಲ್ಲಿಗೆ ಬಂದನು. ಈ ಗ್ರಾಮವು ಬನವಾಸಿ ಪಟ್ಟಣದ ಪೂರ್ವ ದಿಕ್ಕಿಗೆ ೨೪ ಮೈಲು ದೂರವಿರುತ್ತದೆ.

ಅವನು ಈ ಅಬ್ಬಲೂರು ಗ್ರಾಮವನ್ನು ಪ್ರವೇಶಿಸಲಾಗಿ ಅಲ್ಲಿ ಎಲ್ಲೆಲ್ಲಿಯೂ ಜೈನರ ಸಂಚಾರವೂ ಅವರ ಬಸದಿಗಳೂ ಕಂಡ.ಬಂದವು. ಅಲ್ಲಿ ಶಿವಭಕ್ತರಾರೂ ಅವನಿಗೆ ಕಾಣಬರಲಿಲ್ಲ. ಅವನು ಆ ದಿನ ಗ್ರಾಮದಲ್ಲಿ ಬಿಡಾರಬಿಡಬೇಕೆಂದು ಯೋಚಿಸಿ ಶಿವಾಲಯವನ್ನು ಹುಡುಕುತ್ತ ಹೊರಟನು. ಹೀಗೆ ಹೋಗುವಲ್ಲಿ ಮಾರ್ಗದಲ್ಲಿ ಒಂದು ಶಿವಾಲಯವು ಅವನ ದೃಷ್ಟಿಗೆ ಬಿದ್ದಿತು. ಅದನ್ನು ನೋಡಿ ಅವನು ಅದರ ಪ್ರವೇಶ ಮಾಡಿದನು.

ಅವನು ಒಳಗೆ ಪ್ರವೇಶಿಸಲಾಗಿ ಅದು 'ಬ್ರಹ್ಮೇಶ್ವರ ದೇವಾಲಯ' ವಿರುತ್ತದೆಂದು ಅವನಿಗೆ ತಿಳಿದುಬಂದಿತು. ಗರ್ಭಗುಡಿಯೊಳಗೆ ಹೋಗಿ ನೋಡುತ್ತಾನೆಯೋ ಒಳಗಿದ್ದ ಶಿವಲಿಂಗಕ್ಕೆ ಅರ್ಚನೆ ಪೂಜಾದಿ ಕಾರ್ಯಗಳು ಯಾವವೂ ನಡೆದಂತೆ ತೋರಲಿಲ್ಲ. ದೇವಾಲಯದಲ್ಲಿ ಎಲ್ಲೆಲ್ಲಿಯೂ ಕಸವೂ ದೂಳೂ ತುಂಬಿಹೋಗಿದ್ದವು. ರಾಮಯ್ಯನು ಅದನ್ನು ನೋಡಿ ಖಿನ್ನಮನಸ್ಕನಾಗಿ ದೇವಾಲಯವನ್ನೆಲ್ಲ ಶುಚಿಮಾಡಿ ನಿಟ್ಟುಸಿರುಬಿಡುತ್ತ ಉಮ್ಮಳಿಸುತ್ತ ಲಿಂಗದ ಪೂಜೆ ಮಾಡಬೇಕೆಂದು ಪುಷ್ಪಗಳನ್ನು ತರಲು ಹೊರಗೆಹೊರಟನು. ಅಷ್ಟರಲ್ಲಿ ಸಂಕರಗೌಡನೆಂಬ ಗ್ರಾಮದ ಜೈನ ಅಧಿಪತಿಯು ಕೆರಹುಗಾಲಿನಿಂದ ಗಳಗಳನೆ ಒಳಗೆ ಬಂದು ಗರ್ಭಗುಡಿಯಲ್ಲಿ ಬಂದು ನಿಂತನು. ಆಗ ಏಕಾಂತದ ರಾಮಯ್ಯನು ಕ್ರೋಧಾವಿಷ್ಟನಾಗಿ ಅವನಿಗೆ— ಶಿವದ್ರೋಹಿಯೇ, ಹೀಗೆ ನೀನು ಕೆರಹುಗಾಲಿನಿಂದ ಶಿವಾಲಯದ ಒಳಗೆ ಪ್ರವೇಶಿಸಬಹುದೇ? ಎಂದು ನುಡಿಯಲು, ಜೈನನು—ಗೊರವನೇ, ಇಲ್ಲೆಲ್ಲಿಯ ನಿನ್ನ ಶಿವನು? ಅವನಾರು?

ಬೊಗಳದಿರು. ಜಿನನೇ ದೈವವು. ಶಿವನೆಂಬುದು ಸುಳ್ಳು. ಆ ನಿನ್ನ ಶಿವನು ಯಾರಿಗೆ ಏನು ಕೊಟ್ಟಿದ್ದಾನೆ? ಎಂದು ನುಡಿದನು. ಅದಕ್ಕೆ ಏಕಾಂತದ ರಾಮಯ್ಯನು— ಎಲೋ ಕುನ್ನಿಯೇ, ಪರಿವಳಿಗೆಯಲ್ಲಿ ಶಿವನು ವೈಜವ್ವೆಗೋಸ್ಕರ ಜಿನನನ್ನು ಒಡೆದು ಲಿಂಗವನ್ನಾಗಿ ಮಾಡಿ ವೈಜನಾಥನಾದನೆಂಬುದು ನಿನಗೆ ಗೊತ್ತಿಲ್ಲವೇ? ಹುಲಿಗೆರೆಯಲ್ಲಿ ಸೋಮಯ್ಯನಿಗೋಸ್ಕರ ಶಿವನು ಜಿನನಲ್ಲಿ ಮೂಡಿ ಸೋಮನಾಥನಾದ ನೆಂಬುದನ್ನು ನೀನು ಅರಿಯೆಯಾ? ಪೊಟ್ಟಲಕೆರೆಯಲ್ಲಿ ದೇವರ ದಾಸಿಮಯ್ಯನಿಗೆ ಶಿವನು ಲಿಂಗವಾಗಿ ತೋರಿ ಅವನಿಗೆ ತವನಿಧಿಯನ್ನು ಕೊಟ್ಟಿದನ್ನು ಅರಿಯೆಯಾ? ಎಂದು ಕೇಳಿದನು. ಅದಕ್ಕೆ ಆ ಜೈನನು— ಆ ಹಿಂದಿನವರ ಕಥೆಗಳನ್ನು ನನಗೆ ಹೇಳಬೇಡ. ಈಗ ನೀನು ನಿನ್ನ ತಲೆಯನ್ನು ಕತ್ತರಿಸಿಕೊಂಡು ಅದನ್ನು ಮರಳಿ ಪಡೆದರೆ ನಿನ್ನ ಶಿವನು ನಿಜವೆಂದು ನಾನು ನಂಬುತ್ತೇನೆ. ಹಾಗೆ ಮಾಡಿದಲ್ಲಿ ನಮ್ಮ ಗ್ರಾಮದ ಬಸದಿಯಲ್ಲಿಯ ಜಿನಮೂರ್ತಿಯನ್ನು ತೆಗೆದುಹಾಕಿ ಅದರ ಸ್ಥಳದಲ್ಲಿ ಲಿಂಗವನ್ನು ನಾವು ಸ್ಥಾಪಿಸುವೆವು ಎಂದು ಹೇಳಿದನು. ಅದಕ್ಕೆ ರಾಮಯ್ಯನು— ಇದು ನಿಜವೇ? ಹಾಗಾದರೆ ನನ್ನ ಕತ್ತನ್ನು ಕತ್ತರಿಸಿಕೊಳ್ಳಲು ಒಪ್ಪುತ್ತೇನೆ. ಆದರೆ ಜಿನಮೂರ್ತಿಯನ್ನು ತೆಗೆದು ಅದರ ಸ್ಥಳದಲ್ಲಿ ಲಿಂಗವನ್ನು ಪ್ರತಿಷ್ಠಿಸುವೆವೆಂದು ನೀವು ಒಂದು ಭಾಷಾಪತ್ರವನ್ನು ನನಗೆ ಬರೆದುಕೊಡಬೇಕು. ಇದಕ್ಕೆ ಒಪ್ಪುವಿರೋ ಎಂದು ಕೇಳಲು, ಅಷ್ಟರಲ್ಲಿ ಅಲ್ಲಿ ನೆರೆದಿದ್ದ ಜೈನರು ಅದಕ್ಕೆ ಒಪ್ಪಿ ಆ ರೀತಿಯಾಗಿ ಅವರು ಏಕಾಂತದ ರಾಮಯ್ಯನಿಗೆ ಒಂದು ಓಲೆಯನ್ನು ಬರೆದುಕೊಟ್ಟರು.

ಏಕಾಂತದ ರಾಮಯ್ಯನು ತನ್ನ ಕತ್ತನ್ನು ಕತ್ತರಿಸಿ ಪುನಃ ಅದನ್ನು ಪಡೆಯುವನೆಂಬ ಸುದ್ದಿಯು ಸುತ್ತಲಿನ ಗ್ರಾಮಗಳಲ್ಲಿ ಹಬ್ಬಿತು. ಆಗ ಈ ಕೌತುಕವನ್ನು ನೋಡಬೇಕೆಂದು ಅಸಂಖ್ಯ ಜನ ಭಕ್ತರೂ ಜೈನರೂ ಪಟ್ಟಣಕ್ಕೆ ಬಂದು ದೇವಾಲಯದ ಮುಂದೆ ನೆರೆದರು. ಶಿವಶರಣರಲ್ಲಿ ಅತ್ಯಂತ ಪ್ರಸಿದ್ಧನಾದ ಅಗ್ಗವಣಿಯ ಹೊನ್ನಯ್ಯನೂ ಕೂಡ ಅಲ್ಲಿಗೆ ಬಂದಿದ್ದನು.

ಹೀಗೆ ಜನರು ನೆರೆಯಲು ಏಕಾಂತದ ರಾಮಯ್ಯನು ವೀರಗಾಸೆಯನ್ನುಟ್ಟು, ಹಣೆಯಲ್ಲಿ ಭಸಿತವನ್ನಿಟ್ಟು, ನೆರೆದ ಮಹೇಶ್ವರರಿಗೆ

ದುಡಿಯುವದಿಲ್ಲವೋ ಅವರಿಗಾಗಿ ಯಾರೂ ಕಾಯಕ ಮಾಡತಕ್ಕದ್ದಲ್ಲ, ಮತ್ತು ಅವರ ಸೇವೆಯನ್ನು ಮಾಡಕೂಡದು. ಪರಮಾತ್ಮನು ಶ್ರಮ ಜೀವಿಯಲ್ಲವೆಂದು ತಿಳಿದು ಕಕ್ಕಯ್ಯನು ಕಾಯಕವನ್ನು ಅವನಿಗೆ ಕೊಡು ವದನ್ನು ನಿರಾಕರಿಸಿದನು. ಶಿವಾನುಭವಿಯು ಇಂಥ ಸೋಮಾರಿಗಳು ಕೊಟ್ಟದ್ದನ್ನು ಸಹ ತೆಗೆದುಕೊಳ್ಳಬಾರದು. "ಪಾಪಿಯ ಧನ ಪ್ರಾಯ ಶ್ಚಿತ್ತಕ್ಕಲ್ಲದೆ ಸತ್ಪಾತ್ರಕ್ಕೆ ಸಲ್ಲದಯ್ಯ" ಎಂದು ಶಿವಶರಣರು ನುಡಿದಿದ್ದಾರೆ. ಈ ಶ್ರೇಷ್ಠ ತತ್ವವು ಈ ಕಥೆಯಲ್ಲಿದೆ. ಆದ್ದರಿಂದ ಸೋಮಾರಿಗಳೂ ದುಷ್ಟನಡತೆಯವರೂ ಆದ ಸಿರಿವಂತರು ಹಣ ಕೊಡಲಿಕ್ಕೆ ಬಂದರೂ ಅದನ್ನು ಸತ್ಕಾರ್ಯಕ್ಕೆ ತೆಗೆದುಕೊಳ್ಳಬಾರದು ಮತ್ತು ಅವರ ಸೇವೆ ಯನ್ನು ಸಹ ಕೈಕೊಳ್ಳಬಾರದು ಎಂಬ ಸಾಮಾಜಿಕ ಉಚ್ಚ ತತ್ವ ಗಳು ಕಂಕರೀ ಕಕ್ಕಯ್ಯನ ಆಚರಣೆಯಲ್ಲಿರುವದು ಕಂಡುಬರುತ್ತದೆ.

---

## ಇಳಿಹಾಳಿ ಬೊಮ್ಮಯ್ಯ.

ವಿಜಾಪುರ ಜಿಲ್ಲೆ ಬಾಗಲಕೋಟಿ ಗ್ರಾಮದಿಂದ ಉತ್ತರಕ್ಕೆ ೧೦ ಮೈಲುಗಳ ಮೇಲೆ ಇಳಿಹಾಳಿ ಎಂಬ ಗ್ರಾಮವಿರುತ್ತದೆ. ಅದರ ಈಗಿನ ಹೆಸರು ಇಲ್ಲಾಳವೆಂದಿದೆ. ಇಲ್ಲಿ ಬೊಮ್ಮಯ್ಯನೆಂಬ ಒಕ್ಕಲಿ ಗನು ವಾಸಮಾಡುತ್ತಿದ್ದನು. ಅವನ ಕಾಲದಲ್ಲಿ ಪೆರ್ಮಾಡಿರಾಯನು ಕಲ್ಯಾಣ ಪಟ್ಟಣದಲ್ಲಿ ರಾಜ್ಯವಾಳುತ್ತಿದ್ದನು. ಬೊಮ್ಮಯ್ಯನು ಅರಸನ ಕಡೆಯಿಂದ ೩೨ ಹೊಲಗಳನ್ನು ಲಾವಣಿಗೆ ತೆಗೆದುಕೊಂಡು ಘನತರ ವಾದ ರೀತಿಯಿಂದ ಬೇಸಾಯವನ್ನು ನಡಿಸುತ್ತ ಬಂದನು. ಅವನು ತಾನು ಹಿಡಿದ ಹೊಲಗಳನ್ನು ಮಾಡುವಲ್ಲಿ ಗ್ರಾಮದ ಗೌಡರನ್ನೂ ಸಹ ಹುದುವಿ ನಿಂದ ಕೂಡಿಸಿಕೊಂಡು ತನ್ನ ಒಕ್ಕಲುತನವನ್ನು ಸಾಗಿಸುವನು. ಅವನು ಇದ್ದ ಇಳಿಹಾಳಿ ಗ್ರಾಮವು ಘಟಪ್ರಭಾ ನದಿಯ ದಂಡೆಯ ಮೇಲಿದೆ. ಅಲ್ಲಿಯ ಹೊಲಗಳು ಅತ್ಯಂತ ಫಲದ್ರುಪವಾದವುಗಳು. ಬ್ರಹ್ಮಯ್ಯನು ತಾನು ಬೆಳೆದದ್ದರಲ್ಲಿ ಅರಸನಿಗೆ ಕೊಡತಕ್ಕ ಕಂದಾಯವನ್ನು ಕೊಟ್ಟು ತನ್ನೊಡನೆ ಪಾಲು ಕೂಡಿದ್ದ ಗೌಡರುಗಳಿಗೆ ಅವರ ಕೋರನ್ನು ಕೊಟ್ಟು ಉಳಿದದ್ದನ್ನು ತಾನು ತೆಗೆದುಕೊಂಡು ಅದನ್ನು ದಾನಧರ್ಮ ಮಾಡಿ

ಬಿಡುವನು. ಅವನು ಅತ್ಯಂತ ಉದಾರಿಯು. ಈ ಪ್ರಕಾರ ಅವನು ವರ್ತಿಸುತ್ತ ಬಂದದ್ದರಿಂದ ಜನರಲ್ಲಿ ಅವನು ಬಹಳ ಪ್ರಿಯನಾಗಿದ್ದನು.

ಬೊಮ್ಮಯ್ಯನು ಹೇಗೆ ಉದಾರಿಯೋ ಹಾಗೆಯೇ ಶಿವಾನುಭವಿಯೂ ಆಗಿದ್ದನು. ಅವನು ಭಕ್ತ ಜಂಗಮರಿಗೋಸ್ಕರ ಅತ್ಯಂತ ಭಕ್ತಿ ಭಾವವನ್ನು ತಾಳಿದವನಾಗಿದ್ದನು. ಅವರಿಗೆ ದಾಸೋಹಭಾವದಿಂದ ತಾನು ಗಳಿಸಿದ್ದನ್ನು ಅರ್ಪಿಸಿ ಉಪಭೋಗಿಸುವವನಾಗಿದ್ದನು. ಈ ಪ್ರಕಾರ ಷಟ್‌ಸ್ಥಲದಲ್ಲಿ ಅವನು ಪ್ರಸಾದಿಸ್ಥಲದವನಾಗಿ ಬಹು ಪ್ರಸಿದ್ಧನಾಗಿದ್ದನು.

ಹೀಗಿರಲು ಕೆಲವೊಂದು ವರುಷ ಈ ಸೀಮೆಯಲ್ಲಿ ಬರಗಾಲವು ಬಿದ್ದು ಬಿತ್ತಲಿಕ್ಕೆ ಬೀಜಗಳು ದೊರಿಯದಂತಾದವು. ಆಗ ಬ್ರಹ್ಮಯ್ಯನು ಅಲ್ಲಲ್ಲಿ ಬೀಜಗಳನ್ನು ಹುಡುಕುತ್ತ ಹೋಗಿ ಐಗಳದಷ್ಟು ಕಡಲೆಯನ್ನು ತಂದು ಅವುಗಳನ್ನು ಬಿತ್ತಬೇಕೆಂಬುವಷ್ಟರಲ್ಲಿ ಬಿತ್ತುವ ಹದವು ಹೋಗಿಬಿಟ್ಟಿತ್ತು. ಆದ್ದರಿಂದ ಅವನು ತಾನು ತಂದ ಕಡಲೆಯನ್ನು ರಾತ್ರಿಯಲ್ಲಿ ನೆನೆಹಾಕಿ ಬೆಳಗಾದ ಬಳಿಕ ಅವುಗಳನ್ನು ಹೆಡಿಗೆಯಲಿ ತುಂಬಿಕೊಂಡು ಹೊಲದಲ್ಲಿ ಬಿತ್ತಬೇಕೆಂದು ಹೊರಟನು.

ಅವನು ಹೊಲಕ್ಕೆ ಹೋಗುವ ಕಾಲದಲ್ಲಿ ಶ್ರೀಶೈಲಕ್ಕೆ ಹೋಗುವ ಒಂದು ಪರಿಸೆಯು ಅವನ ಸಮೀಪದಲ್ಲಿಯೇ ಹಾಯ್ದು ಹೋಗುತ್ತಿತ್ತು. ಆದರಲ್ಲಿ ಅನೇಕ ಭಕ್ತರೂ ಜಂಗಮರೂ ಇದ್ದರು. ಅವರು ಆ ಕ್ಷಾಮದ ಕಾಲದಲ್ಲಿ ಬಹಳ ನೀರಡಿಸಿ ಹಸಿದವರಾಗಿದ್ದರು. ಅವರು ಬೊಮ್ಮಯ್ಯನ ಹತ್ತಿರ ಇದ್ದ ಹೆಡಿಗೆಯನ್ನು ನೋಡಿ, ಅದು ಬುತ್ತಿ ಎಂದು ತಿಳಿದು, ಅವರು ಅವನ ಸಮೀಪಕ್ಕೆ ಬಂದರು. ಅವರನ್ನು ಬೊಮ್ಮಯ್ಯನು ಕಂಡು ಸ್ವಾಮಿ ಏಕೆ ಇಲ್ಲಿಗೆ ಬಂದಿರೆಂದು ಕೇಳಲು ಅವರು-- ನಾವು ಹಸಿದಿದ್ದೇವೆ. ಉಣ್ಣಲಿಕ್ಕೆ ನಮಗೆ ಏನೂ ದೊರೆತಿಲ್ಲ. ನಿಮ್ಮಲ್ಲಿ ಏನಾದರೂ ದೊರೆಯಬಹುದೋ ಎಂದು ಕೇಳಲು ಬೊಮ್ಮಯ್ಯನ ಮನಸ್ಸು ಕರಗಿತು. ಅವನು ಬಿತ್ತಲಿಕ್ಕೆ ಧಾನ್ಯವು ಕಡಿಮೆಯಾಗಬಹುದೆಂಬುದನ್ನು ಏನೂ ಎಣಿಸದೆ ತನ್ನ ಹೆಡಿಗೆಯಲ್ಲಿದ್ದ ಕಡಲೆಗಳನ್ನು ಒಂದೊಂದು ಬೊಗಸೆ ಪರಿಸೆಯಲ್ಲಿದ್ದವರಿಗೆಲ್ಲ ಕೊಟ್ಟುಬಿಟ್ಟನು. ಅವರು ಅದನ್ನು ತಿಂದು ಅವನನ್ನು ಹರಿಸಿ ಮುಂದೆ ಹೊರಟುಹೋದರು.

ನಮಿಸಿ— ನನ್ನ ಶಿರವನ್ನು ಪರಮಾತ್ಮನಿಗೆ ಅರ್ಪಿಸಿ ಅದನ್ನು ಅವನಿಂದ ಪಡೆದು ಶಿವಮತದ ಶ್ರೇಷ್ಠತೆಯನ್ನು ಬೆಳಗುವೆನು ಎಂದು ಉಚ್ಚರಿಸುತ್ತ, ಶಿವನನ್ನು ಧ್ಯಾನಿಸುತ್ತ ತನ್ನ ಶಿರವನ್ನು ಕತ್ತರಿಸಿ ಪರಮಾತ್ಮನಿಗರ್ಪಿಸಿದನು. ಆಗ ಅಗ್ಗವಣಿಯ ಹೊನ್ನಯ್ಯನು ಆ ಶಿರವನ್ನು ತನ್ನ ಕಯ್ಯಲ್ಲಿ ಹಿಡಿದು ಮುಂಡಕ್ಕೆ ಹಚ್ಚುವಷ್ಟರಲ್ಲಿ ನೆರೆದ ಜೈನರು— ಇದು ಕೃತಕವು. ಮದ್ದು ಮಂತ್ರ ಮಹೇಂದ್ರ ಜಾಲವು. ಇದು ಸುಳ್ಳು. ಆದರೆ ಇನ್ನೇಳು ದಿನಗಳ ವರೆಗೆ ಈ ತಲೆಯನ್ನು ನೀವು ಹೀಗೆಯೇ ಇಟ್ಟು ಆಮೇಲೆ ಮುಂಡಕ್ಕೆ ಹತ್ತಿಸಿದರೆ ನಾವು ಒಪ್ಪುತ್ತೇವೆ. ಆಗ ನಾವು ನಮ್ಮ ಜಿನದೇವತೆಯನ್ನು ತ್ಯಜಿಸುವೆವು, ಎಂದೆನ್ನಲು ಶಿವ ಶರಣನಾದ ಅಗ್ಗವಣಿಯ ಹೊನ್ನಯ್ಯನು— ಹಾಗೆಯೇ ಆಗಲಿ ಎಂದು ನುಡಿದು, ಅವನು ಆ ತಲೆಯನ್ನು ಒಂದು ಹರಿವಾಣದಲ್ಲಿ ವಿಭೂತಿಯೊಡನೆ ಇಟ್ಟು, ಅದರಮೇಲೆ ಪಾದೋದಕವನ್ನು ತಳಿದು ಏಳು ದಿನಗಳ ವರೆಗೆ ಅಲ್ಲಿಯೇ ಇಟ್ಟನು. ಮುಂದೆ ಏಳು ದಿನಗಳಾದ ಮೇಲೆ ಹೊನ್ನಯ್ಯನು ಆ ಶಿರವನ್ನು ಮುಂಡಕ್ಕೆ ಹಚ್ಚಲು ಏಕಾಂತದ ರಾಮಯ್ಯನಿಗೆ ಪ್ರಾಣವು ಬಂದು ಅವನು ಎದ್ದು ನಿಂತನು. ಅದನ್ನು ನೆರೆದ ಜನರು ನೋಡಿ ವಿಸ್ಮಿತರಾಗಿ ಶಿವನ ಮಹಿಮೆಯನ್ನು ಹೊಗಳುವವರಾದರು.

ಏಕಾಂತದ ರಾಮಯ್ಯನಿಗೆ ಹಾಗೆ ಪ್ರಾಣವು ಬಂದದ್ದನ್ನು ನೋಡಿ ಜೈನರು ತಮ್ಮ ಜಿನನಿಗೆ ಇನ್ನುಮೇಲೆ ಪ್ರಳಯವಾಗುವದೆಂದು ಭಯಭೀತರಾದರು. ಆಗ ಭಕ್ತರು ಕಯ್ಯಲ್ಲಿ ಖಡ್ಗಗಳನ್ನು ಹಿಡಿದುಕೊಂಡು ಇದಿರ್ಗೊಂಡ ಜೈನರನ್ನು ಸಂಹರಿಸುತ್ತ ಬಸದಿಯನ್ನು ಪ್ರವೇಶಿಸಿದರು. ಮತ್ತು ಅಲ್ಲಿದ್ದ ಜಿನಮೂರ್ತಿಯನ್ನು ಒಡೆದು ಬತ್ತಲೆ ಬೊಂಬೆಗಳನ್ನು ಕಿತ್ತುಹಾಕಿದರು. ಆಮೇಲೆ ರಾಮಯ್ಯನು ಒಂದು ಶ್ರೇಷ್ಠತರವಾದ ಲಿಂಗವನ್ನು ಆ ಜಿನನ ಸ್ಥಳದಲ್ಲಿ ಪ್ರತಿಷ್ಠಿಸಿದನು. ಹೀಗಾದ ಬಳಿಕ ಭಕ್ತ ಜನರೆಲ್ಲರೂ ರಾಮಯ್ಯನನ್ನು ಹೊಗಳುತ್ತ ತಮ್ಮ ತಮ್ಮ ಸ್ಥಳಗಳಿಗೆ ಹೋಗುವವರಾದರು.

ಹೀಗೆ ಜಿನಾಲಯದಲ್ಲಿ ಲಿಂಗವನ್ನು ಪ್ರತಿಷ್ಠಿಸಿದ ಬಳಿಕ ಆ ಲಿಂಗಕ್ಕೆ 'ವೀರಸೋಮೇಶ'ನೆಂಬ ಹೆಸರು ಪ್ರಾಪ್ತವಾಯಿತು.

ಈ ಎಲ್ಲ ವಿವರಗಳು ಅಬಲೂರು ಗ್ರಾಮದಲ್ಲಿರುವ ಸೋಮನಾಥ ದೇವಾಲಯದ ಗೋಡೆಯಲ್ಲಿ ಈಗಲೂ ಇರುವ ಶಿಲಾಶಾಸನದಲ್ಲಿ ಲಿಖಿಸಲ್ಪಟ್ಟಿರುತ್ತವೆ. (೧) ಅವುಗಳನ್ನು ನಾವು ಮುಖ್ಯವಾಗಿ ಇಟ್ಟುಕೊಂಡು ಅವುಗಳಿಗೆ ವಿರೋಧವಲ್ಲದ ಸಂಗತಿಗಳನ್ನು ಬೇರೆ ಪುರಾಣ ಗ್ರಂಥಗಳಿಂದ ಎತ್ತಿ ಇಲ್ಲಿ ತೆಗೆದುಕೊಂಡಿರುತ್ತೇನೆ. ಈ ಶಿಲಾಶಾಸನದಲ್ಲಿ ಮುಂದೆ ಕಾಣಿಸಿದ ಐತಿಹಾಸಿಕ ಸಂಗತಿಗಳು ಹೇಳಲ್ಪಟ್ಟವೆ.

ಹೀಗೆ ಏಕಾಂತದ ರಾಮಯ್ಯನು ದೇವಾಲಯದಲ್ಲಿದ್ದ ಜಿನಪ್ರತಿಮೆಯನ್ನು ತೆಗೆದುಹಾಕಿದ ಬಳಿಕ ನಾಡಿನಲ್ಲೆಲ್ಲ ಹೀಗೆಯೇ ಮುಂದೆ ಜಿನಪ್ರಳಯವಾಗುವದೆಂದು ಜೈನರು ಭೀತಿಯುಳ್ಳವರಾಗಿ ಅವರು ಬಿಜ್ಜಳ ನೃಪನ ಕಡೆಗೆ ಹೋಗಿ ರಾಮಯ್ಯನು ಮಾಡಿದ ಈ ಕೃತ್ಯಗಳನ್ನು ಕುರಿತು ಬಹಳ ಹೆಚ್ಚಾಗಿ ಅವನ ಮುಂದೆ ದೂರು ಹೇಳಿದರು. ಬಿಜ್ಜಳನು ಈ ವೃತ್ತಾಂತವನ್ನು ಕೇಳಿ ಕುಪಿತನಾಗಿ ಏಕಾಂತದ ರಾಮಯ್ಯನನ್ನು ತನ್ನಲ್ಲಿಗೆ ಬರಮಾಡಿಕೊಂಡು ಅವನಿಗೆ— ನೀನಿದೇನು ಮಾಡಿದೆ? ನೀನು ಹೀಗೇಕೆ ಮಾಡಿದೆ? ಎಂದು ಕೇಳಲು ಅವನು ಜೈನರು ತನಗೆ ಬರೆದುಕೊಟ್ಟ ಭಾಷಾಪತ್ರವನ್ನು ಅವನ ಮುಂದಿರಿಸಿ ಅವನಿಗೆ— ಈ ಓಲೆಯು ನಿನ್ನ ಭಾಂಡಾರದಲ್ಲಿರಲಿ. ಜೈನರು ಒಪ್ಪಿದಲ್ಲಿ ಈಗಲೂ ಸಹ ನಾನು ನನ್ನ ತಲೆಯನ್ನು ಪುನಃ ಕತ್ತರಿಸಿಕೊಂಡು ಅದನ್ನು ಪಡೆಯುವೆನು. ಆದರೆ ನಾನು ಹೀಗೆ ಪಡೆದದ್ದಾದರೆ ಜೈನರು ಈ ನಾಡಿನಲ್ಲಿರುವಂಥ ಆನೆಸೆಜ್ಜೆ ಬಸದಿ ಮೊದಲಾದ ಎಂಟುನೂರು ಬಸದಿಗಳನ್ನು ಪಣವಾಗಿ ಒಡ್ಡಿ ಅವುಗಳಲ್ಲಿರುವ ಜಿನಪ್ರತಿಮೆಗಳ ಬದಲಾಗಿ ಶಿವಲಿಂಗಗಳನ್ನು ಪ್ರತಿಷ್ಠಿಸುವೆವೆಂದು ಒಪ್ಪಿಕೊಳ್ಳಬೇಕು ಎಂದು ಹೇಳಿದನು. ಅದಕ್ಕೆ ಬಿಜ್ಜಳನು ಈ ಕೌತುಕವನ್ನು ನೋಡಬೇಕೆಂದು ಆ ಬಸದಿಗಳ ಒಡೆಯರನ್ನು ತನ್ನಲ್ಲಿಗೆ ಬರಮಾಡಿಕೊಂಡು ಅವರಿಗೆ— ನೀವು ನಿಮ್ಮ ಬಸದಿಗಳನ್ನು ರಾಮಯ್ಯನಿಗೆ ಹೀಗೆ ಪಣವಾಗಿ ಇಡಲು ಒಪ್ಪಿಕೊಂಡು ಹಾಗೆ ಓಲೆಯನ್ನು ಬರಕೊಡುವಿರಾ ಎಂದು ಕೇಳಲು ಅದಕ್ಕೆ ಅವರು— ನಾವು ಈ ಮೊದಲಿಗೆ ಒಡೆದುಹೋದ ಬಸದಿಯ ವಿಷಯವಾಗಿ ದೂರು ಹೇಳಲು ಬಂದಿರು

---

(೧) ಅಬಲೂರು ಶಾಸನದ ಪೂರ್ಣವಿವರಗಳು ಶಿವಾನುಭವ ಸಂಚಿಕೆ ೪-೧೨-೮ ಇದರಲ್ಲಿ ಬಂದಿರುತ್ತವೆ.

ತ್ತೀವೆಯೋ ಹೊರ್ತು ಉಳಿದ ಬಸದಿಗಳನ್ನು ಪಣವಾಗಿಟ್ಟುಕೊಂಡು ಅವು ಗಳಿಗೆ ಪ್ರಳಯ ಮಾಡಲು ಬಂದಿಲ್ಲ, ಎಂದು ಹೇಳಲು ಬಿಜ್ಜಳರಾಯನು ನಕ್ಕು— ನೀವಿನ್ನು ಹಿಂದಿರುಗಿ ಹೋಗಿರಿ ಎಂದು ಹೇಳಿ, ಏಕಾಂತದ ರಾಮಯ್ಯನಿಗೆ ಜಯಪತ್ರವನ್ನು ಕೊಟ್ಟನು. ಇಷ್ಟೇಅಲ್ಲ, ಏಕಾಂತದ ರಾಮಯ್ಯನು ತೋರಿಸಿದ ನಿರತಿಶಯವಾದ ಮಾಹೇಶ್ವರ ಭಕ್ತಿ ಮತ್ತು ಸಾಹಸಗಳನ್ನು ಹೊಗಳಿ ಮೆಚ್ಚಿದವನಾಗಿ ಅವನು ಸ್ಥಾಪಿಸಿದ ವೀರ ಸೋಮನಾಥ ದೇವರ ಪ್ರಸಾದ, ಜೀರ್ಣೋದ್ಧಾರ, ಅಂಗಭೋಗ, ನೈವೇದ್ಯ ಇವುಗಳ ಸಲುವಾಗಿ ಬನವಾಸೆ ೧೨ ಸಾವಿರ ಪ್ರಾಂತದಲ್ಲಿ ರುವ ಗೋಗಾವೆ ಎಂಬ ಗ್ರಾಮವನ್ನು ಅವನ ಪಾದಪೂಜೆ ಮಾಡಿ ಅವನಿಗೆ ಉಂಬಳಿ ಹಾಕಿ ಕೊಟ್ಟನು. ಈ ಗೋಗಾವೆ ಗ್ರಾಮಕ್ಕೆ ಈಗ ಭೋಗಾವಿ ಎಂಬ ಹೆಸರಿದ್ದು ಅದು ಅಬ್ಬಲೂರಿನ ಉತ್ತರಕ್ಕೆ ೨ ಮೈಲು ಗಳ ಮೇಲೆ ಇರುತ್ತದೆ.

ಅಬ್ಬಲೂರು ಶಿಲಾಶಾಸನದಿಂದ ಏಕಾಂತದ ರಾಮಯ್ಯನು ತನ್ನ ಮಹಾತ್ಮೆಯನ್ನು ಮೆರೆಯಿಸಿದ್ದು ಬಿಜ್ಜಳರಾಯನು ಇನ್ನೂ ಚಕ್ರವರ್ತಿ ಯಾಗಿರದೆ ಕೇವಲ ಮಹಾಮಂಡಲೇಶ್ವರ ಎಂದರೆ ಮಾಂಡಲಿಕನಾಗಿ ದ್ದಾಗ ಎಂದು ತಿಳಿದುಬರುತ್ತಿದೆ. ಅವನು ಮಾಂಡಲಿಕನಾಗಿದ್ದದ್ದು ೧೧೪೮ ರಿಂದ ೧೧೫೬ ರ ವರೆಗೆ ಮಾತ್ರ. ಈ ಅವಧಿಯ ಆರಂಭಕಾಲ ದಲ್ಲಿ ಅವನು ಕೆಲಕಾಲ ಮಂಗಳವಾಡದಲ್ಲಿಯೂ, ಆ ಮೇಲೆ ಬನ ವಾಸಿ ನಾಡಿನಲ್ಲಿಯೂ ಚಾಲುಕ್ಯರಾಜರಿಗೆ ಮಾಂಡಲಿಕನಾಗಿ ರಾಜ್ಯ ವಾಳಿದನೆಂದು ಇತಿಹಾಸದಿಂದ ತಿಳಿದುಬರುತ್ತಿದೆ. ಆದರೆ ಈ ಅವ ಧಿಯ ತರುವಾಯ ಅವನು ಪ್ರಬಲನಾಗಿ ೧೧೫೬ ರಿಂದ ೧೧೬೨ ವರೆಗೆ ನೂರ್ಮಡಿ ತೈಲಪ ತ್ರಿಭುವನಮಲ್ಲ ಚಾಲುಕ್ಯರಾಜನ ಸರ್ವಾಧಿಕಾರಿ ಯಾಗಿ ಬನವಾಸಿಯಲ್ಲಿಯೂ ಆ ಮೇಲೆ ೧೧೬೨ ರಿಂದ ೧೧೬೮ ವರೆಗೆ ಈ ಚಾಲುಕ್ಯರಾಜನನ್ನು ತಳ್ಳಿ ಚಕ್ರವರ್ತಿಯಾಗಿ ಕಲ್ಯಾಣಪಟ್ಟಣದ ಲ್ಲಿಯೂ ರಾಜ್ಯವಾಳಿದನು.

ಈ ಸಂಗತಿಗಳನ್ನೆಲ್ಲ ಲಕ್ಷಿಸಿದಲ್ಲಿ ಏಕಾಂತದ ರಾಮಯ್ಯನ ಮಹಾ ತ್ಮೆಯು ಘಟಿಸಿದ್ದು ಬಿಜ್ಜಳನು ಬನವಾಸಿಯಲ್ಲಿ ಮಾಂಡಲಿಕನಾಗಿ ಆಳು ತ್ತಿದ್ದಾಗ ಅಂದರೆ ೧೧೫೬ ರ ಕಿಂತಲೂ ಸ್ವಲ್ಪ ಮೊದಲು ಇರಬಹು

ದೆಂಬ ಅನುಮಾನವು ಉಂಟಾಗುತ್ತದೆ. ಆದರೆ ಬಸವೇಶ್ವರನು ಕಲ್ಯಾಣ ಪಟ್ಟಣಕ್ಕೆ ಬಂದು ಧರ್ಮಕ್ರಾಂತಿಯನ್ನು ಮಾಡಿದ್ದು ಬಿಜ್ಜಳನು ಚಕ್ರ ವರ್ತಿಯಾದಾಗ್ಗೆ, ಅಂದರೆ ೧೧೫೭ ಅಥವಾ ೧೧೬೨ ರ ತರುವಾಯ. ಆದ್ದರಿಂದ ಏಕಾಂತದ ರಾಮಯ್ಯನ ಕ್ರಾಂತಿಯ ಪ್ರಾರಂಭವು ಬಸವೇಶ್ವರ ನಕಿಂತಲೂ ಸ್ವಲ್ಪ ಮೊದಲು ಆಗುತ್ತದೆ.

ಬಿಜ್ಜಳನು ೧೧೬೮ ರ ವರೆಗೆ ರಾಜ್ಯವಾಳಿದ ಬಳಿಕ ಅವನ ವಂಶ ಜರು ೧೧೮೨ ರ ವರೆಗೆ ರಾಜ್ಯವಾಳಿದರು. ಆಮೇಲೆ ಚಾಲುಕ್ಯವಂಶದ ನೂರ್ಮಡಿ ತೈಲಪನ ಮಗನಾದ ೪ನೇ ಸೋಮೇಶ್ವರನು ತನ್ನ ಸೇನಾನಾ ಯಕನಾದ ಬರ್ಮದೇವನ ಸಹಾಯದಿಂದ ಬಿಜ್ಜಳನ ವಂಶದ ಕಡೆಯ ಅರಸನನ್ನು ಪಟ್ಟದಿಂದ ತಳ್ಳಿ, ಮೊದಲು ಅಣ್ಣಿಗೇರಿಯಲ್ಲಿ, ಆಮೇಲೆ ಕಲ್ಯಾಣದಲ್ಲಿ ರಾಜ್ಯವಾಳಹತ್ತಿದನು. ಹೀಗೆ ಈ ರಾಜನಿಗೆ ಸಹಾಯ ಮಾಡಿದ್ದಕ್ಕಾಗಿ ಬರ್ಮದೇವನಿಗೆ 'ಚಾಳುಕ್ಯರಾಜ್ಯ ಪ್ರತಿಷ್ಠಾಪಕ'ನೆಂಬ ಹೆಸರು ಬಂದಿರುತ್ತದೆ. ಮೇಲೆ ಉಲ್ಲೇಖಿಸಿದ ಅಬ್ಬಲೂರು ಶಿಲಾ ಶಾಸನದಿಂದ ತಿಳಿದುಬರುವ ಬೇರೆ ಸಂಗತಿಗಳು ಅವವೆಂದರೆ:—

ಈ ಬರ್ಮದೇವ ಸೇನಾಪತಿಯೂ ರಾಜನಾದ ಸೋಮೇಶ್ವರನೂ ಸೆಲೆಯಹಳ್ಳಿಯಕೊಪ್ಪ ಎಂಬ ಗ್ರಾಮದಲ್ಲಿ ಬಿಡಾರ ಬಿಟ್ಟಾಗ್ಗೆ ಅವರು 'ಧರ್ಮಗೋಷ್ಠಿ'ಯನ್ನು ಅಲ್ಲಿ ನಡಿಸುತ್ತಾ ಇದ್ದರು. ಆಗ ಹಿಂದಿನ ವರೂ ನೂತನರೂ ಆದ ಶಿವಭಕ್ತರ ಗುಣಸ್ತವನವು ಅವರ ಮುಂದೆ ನಡಿಯುತ್ತಾ ಇದ್ದಿತು. ಆ ಸಮಯದಲ್ಲಿ ಸೋಮೇಶ್ವರ ರಾಜನು ಅಬ್ಬಲೂರಲ್ಲಿ ಏಕಾಂತದ ರಾಮಯ್ಯನು ನಡಿಸಿದ ಮಹಾತ್ಮೆಯನ್ನು ಕೇಳಿ, ಅವನಿಗೋಸ್ಕರ ಪೂಜ್ಯಭಾವವನ್ನು ತಾಳಿದವನಾಗಿ ಅವನನ್ನು ತಾನಿದ್ದ ಸೆಲೆಯಹಳ್ಳಿಯಕೊಪ್ಪಕ್ಕೆ ಬರಮಾಡಿಕೊಂಡನು. ಆಗ ಅವನನ್ನು ಪೂಜಿಸಿ, ಅವನು ಸ್ಥಾಪಿಸಿದ ವೀರಸೋಮನಾಥ ದೇವಾಲಯದ ಜೀರ್ಣೋದ್ಧಾರಕ್ಕೂ ಅಂಗಭೋಗ, ರಂಗಭೋಗ, ನೈವೇದ್ಯಕ್ಕೂ, ಉತ್ಸವಾದಿ ಪರ್ವಗಳಿಗೂ, ಅನ್ನದಾನ ವಿದ್ಯಾದಾನಕ್ಕೂ ಬನವಸೆ ಹನ್ನೆರಡು ಸಾವಿರ ಪ್ರಾಂತದಲ್ಲಿದ್ದ ಅಬ್ಬಲೂರು ಗ್ರಾಮವನ್ನು ಅದರ ಮೇಲಾಳಿಕೆ, ಮನ್ನೆಯ ಸುಂಕ, ದಂಡ ದೋಷ, ನಿಧಿ ನಿಕ್ಷೇಪ ಸಹ ವಾಗಿ ಧಾರಾಪೂರ್ವಕವಾಗಿ ರಾಮಯ್ಯನಿಗೆ ಉಂಬಳಿ ಹಾಕಿಕೊಟ್ಟನು.

ಈ ಚಾಲುಕ್ಯ ಸೋಮೇಶ್ವರನು ೧೧೮೧ ರಿಂದ ೧೧೮೯ ವರೆಗೆ ಆಳಿದ್ದ ರಿಂದ ಈ ವರ್ಷಗಳ ಮಧ್ಯದಲ್ಲಿ ಈ ಉಂಬಳಿಯು ಏಕಾಂತ ರಾಮೇಶ್ವ ರನಿಗೆ ದೊರಕಿರಬಹುದೆಂದು ತೋರುತ್ತದೆ. ಆಗ ಅವನು ಇನ್ನೂ ಜೀವಂತ ಇದ್ದನೆಂಬುದು ಸ್ಪಷ್ಟವು.

೧೧೮೯ ರ ಸುಮಾರಿನಲ್ಲಿ ದೇವಗಿರಿ ಯಾದವರಾಜನಾದ ಭಿಲ್ಲಮನು ಚಾಲುಕ್ಯ ರಾಜ್ಯವನ್ನು ಅಭಿಯೋಗಿಸಿ ಈಗಿನ ಕಲಬುರ್ಗಿ ಮತ್ತು ವಿಜಾಪುರ ಜಿಲ್ಲೆಗಳನ್ನು ಆಕ್ರಮಿಸಿದನು. ಆದ್ದರಿಂದ ಕಲ್ಯಾಣ ಚಾಲು ಕ್ಯರ ರಾಜ್ಯವು ಅಂದಿನಿಂದ ಪೂರ್ಣವಾಗಿ ನಿಂತುಹೋಯಿತು.

ಇದರ ತರುವಾಯ ಅಬ್ಬಲೂರು ಇದ್ದ ಪ್ರದೇಶವನ್ನು ಕದಂಬ ರಾಜನಾದ ಕಾಮದೇವನು ಹಾನಗಲ್ಲನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಮಾಂಡಲಿಕನಾಗಿ ರಾಜ್ಯವಾಳುತ್ತಿದ್ದನು. ಅವನು ಒಂದುದಿನ ಅಬ್ಬಲೂರಿಗೆ ಬಂದಾಗ್ಗೆ ಅಲ್ಲಿ ಬಹು ಉನ್ನತವೂ ವಿಸ್ತಾ ರವೂ ಆದ ವೀರಸೋಮನಾಥನ ದೇವಾಲಯವನ್ನು ಕಂಡು ಏಕಾಂತದ ರಾಮಯ್ಯನು ನಡಿಸಿದ ಮಹಾತ್ಮೆಯನ್ನು ತಿಳಿದು, ಅವನನ್ನು ತನ್ನ ರಾಜಧಾನಿಯಾದ ಹಾನಗಲ್ಲಿಗೆ ಕರೆದುಕೊಂಡು ಬಂದು, ಅವನ ಕೂಡ ಶಿವಗೋಷ್ಠಿಗಳನ್ನು ನಡಿಸಿ, ಅವನಿಗೆ ಹಾನುಗಲ್ಲು ಐದುನೂರು ಪ್ರಾಂತ ದಲ್ಲಿದ್ದ ಮಲ್ಲವಳ್ಳಿ ಎಂಬ ಗ್ರಾಮವನ್ನು ವೀರಸೋಮನಾಥ ದೇವರ ದೇಗುಲದ ಜೀರ್ಣೋದ್ಧಾರಕ್ಕೂ ದೇವರ ಅಂಗಭೋಗ ರಂಗಭೋಗ ನೈವೇದ್ಯಕ್ಕೂ ಉತ್ಸವಾದಿ ಪರ್ವಗಳಿಗೂ ಅನ್ನದಾನಕ್ಕೂ ರಾಮಯ್ಯನ ಕಾಲನ್ನು ತೊಳೆದು ಧಾರಾಪೂರ್ವಕವಾಗಿ ದಾನಮಾಡಿಕೊಟ್ಟನು. ಈ ಮಲ್ಲವಳ್ಳಿಯು ಈಗ ಮುಂಡುಗೋಡ ಗ್ರಾಮದ ನೈಋತ್ಯ ದಿಕ್ಕಿಗೆ ಮೂರು ಮೈಲುಗಳ ಮೇಲೆ ಇದೆ.

ಕಾಮದೇವನ ಶಿಲಾಶಾಸನಗಳು ೧೧೮೮ ರಿಂದ ೧೨೧೧ ವರೆಗೆ ಉಪ ಲಬ್ಧವಿರುತ್ತವೆ. ಆದ್ದರಿಂದ ಈ ಅವಧಿಯ ಮಧ್ಯದಲ್ಲಿ ಆವುದೇ ಒಂದು ವರ್ಷ ಮೇಲೆ ಕಾಣಿಸಿದ ಸಂಗತಿಯು ಘಟಿಸಿರಬಹುದು. ಈ ಕಾಲ ದಲ್ಲಿಯೂ ಏಕಾಂತದ ರಾಮಯ್ಯನು ಜೀವಿಸಿದ್ದನು.

ಈ ಬನವಾಸಿ ಭಾಗವನ್ನು ಕೆಲವುಕಾಲ ಕೇಶಿರಾಜ ದಂಡನಾ ಯಕನೆಂಬುವನು ಆಳುತ್ತಿದ್ದನು. ಅವನು ಅಬ್ಬಲೂರಿಗೆ ಬಂದಾಗ್ಗೆ

ಏಕಾಂತರಾಮಯ್ಯನ ಮಹಾತ್ಮೆಯನ್ನು ತಿಳಿದುಕೊಂಡು ಅದರ ವಿವರ ವನ್ನು ‘ಶರಣ’ ಎಂಬವನಿಂದ ಈ ಶಿಲಾಶಾಸನದಲ್ಲಿ ತಿದ್ದಿ ಬರೆಯಿಸಿದ ನೆಂದು ತಿಳಿಯುತ್ತದೆ. ಇದು ಯಾವ ವರ್ಷ ಎಂಬುದು ಶಾಸನದಲ್ಲಿ ಹೇಳಿಲ್ಲ. ಆದರೆ ಈ ಕಾಲದಲ್ಲಿ ಏಕಾಂತದ ರಾಮಯ್ಯನು ಜೀವಿಸಿದ್ದ ನೆಂದು ತೋರುವದಿಲ್ಲ. ಹಿಂದಿನ ಎಲ್ಲ ಸಂಗತಿಗಳನ್ನು ಸಂಗ್ರಹಿಸಿ ಈ ಶಾಸನವನ್ನು ಬರೆಯಿಸಿದವನು ಈ ಕೇಶರಾಜನೆಂದು ತೋರುತ್ತದೆ.

ಕದಂಬವಂಶದ ಕಾಮದೇವನ ತರುವಾಯ ಅದೇ ವಂಶದ ಮಲ್ಲಿ ದೇವನೆಂಬ ರಾಜನು ಈ ಭಾಗವನ್ನು ಆಳುತ್ತಿದ್ದನು. ಅವನು ಸಹ ಈ ದೇವಾಲಯಕ್ಕೆ ಉಂಬಳಿಯನ್ನು ಹಾಕಿಕೊಟ್ಟಿದ್ದು ಈ ಅಬ್ಬಲೂರು ಶಾಸನದಲ್ಲಿ ಹೇಳಿದೆ. ಅವನ ಶಾಸನಗಳು ೧೨೧೯ ರಿಂದ ೧೨೩೧ ವರೆಗೆ ಉಪಲಬ್ಧವಿವೆ. ಆದರೆ ಈ ಕಾಲದಲ್ಲಿ ಏಕಾಂತದ ರಾಮಯ್ಯನು ಜೀವಿ ಸಿದ್ದಿಲ್ಲೆಂದು ತೋರುತ್ತದೆ. ಶಿಲಾಶಾಸನದ ಅಕ್ಷರಗಳು ಇಲ್ಲಿಯು ಮುಂದೆ ಅಳಿಸಿ ಹೋಗಿರುವದರಿಂದ ಈ ಉಂಬಳಿ ಹಾಕಿದ ವರ್ಷವು ತಿಳಿಯುವದಿಲ್ಲ.

ಈ ಪ್ರಕಾರ ಏಕಾಂತದ ರಾಮಯ್ಯನು ಬಿಜ್ಜಳನು ೧೧೫೫ ಅಥವಾ ಅದಕ್ಕೂ ಸ್ವಲ್ಪ ಮೊದಲು ಬನವಾಸಿನಾಡಿನಲ್ಲಿ ಆಳಹತ್ತಿದಂದಿನಿಂದ ಸುಮಾರು ೪೦-೫೦ ವರ್ಷಗಳ ವರೆಗೆ ಜೀವಿಸಿ ತನ್ನ ಶಿವಯೋಗ ಸಾಮರ್ಥ್ಯವನ್ನು ಜನರಲ್ಲಿ ತೋರಿಸಿ ಪ್ರಸಿದ್ಧನಾಗಿದ್ದಾನೆ. ಈ ಕಾಲ ದಲ್ಲಿ ಅವನು ಅನೇಕ ರಾಜರಿಂದಲೂ ಸಾಮಂತರಿಂದಲೂ ಮನ್ನಣೆ ಯನ್ನು ಹೊಂದಿದ್ದಾನೆ. ಅವನು ಬಸವೇಶ್ವರನ ಸಮಕಾಲೀನನು. ಆದರೂ ಅವನು ಅವನಕಿಂತಲೂ ಸ್ವಲ್ಪಕಾಲ ಹಿಂದಿನವನು ಮತ್ತು ಅವನ ತರುವಾಯ ಸಹ ಅನೇಕ ವರ್ಷ ಜೀವಿಸಿದನು. ಈ ಕಾಲದಲ್ಲಿ ಅವನು ಈ ಭಾಗದಲ್ಲಿ ವೀರಶೈವ ಧರ್ಮವನ್ನು ವಿಸ್ತರಿಸಿರಲಿಕ್ಕೆಬೇಕೆಂಬ ಅನು ಮಾನವು ಉಂಟಾಗುತ್ತದೆ.

ಏಕಾಂತದ ರಾಮಯ್ಯನ ಕಾಲದಲ್ಲಿ ಬಸವೇಶ್ವರನಕಿಂತಲೂ ಮೊದಲು ಅನೇಕ ಶಿವಶರಣರು ಆಗಿಹೋಗಿದ್ದುದು ಈ ಶಿಲಾಶಾಸನ ದಲ್ಲಿ ಬರ್ಮದೇವ ಮತ್ತು ಸೋಮೇಶ್ವರರಾಜ ಇವರಿಗೆ ಸಂಬಂಧ ಪಟ್ಟ ಉಲ್ಲೇಖಗಳಲ್ಲಿ ಬಂದಿರುತ್ತದೆ. ಇದನ್ನು ನಾವು ಲಕ್ಷಿಸತಕ್ಕದ್ದು. ಇದರಿಂದ ಬಸವೇಶ್ವರನಕಿಂತಲೂ ಮೊದಲು ಶಿವಶರಣರಿದ್ದುದು ಸ್ಪಷ್ಟ ವಾಗುತ್ತದೆ.

ಏಕಾಂತದ ರಾಮಯ್ಯನು ಉಚ್ಚಸ್ಥಿತಿಯನ್ನು ಹೊಂದಿದ ಶಿವ ಯೋಗಿಯಾಗಿದ್ದನು. ಅವನು ಹೊಂದಿದ ಈ ಸ್ಥಿತಿಯಲ್ಲಿ ಶಿವಯೋಗಿಯ ದೇಹವು ಬಯಲು ಸ್ವರೂಪವನ್ನು ಹೊಂದುತ್ತದೆಂದು ಶಿವಾನುಭವದ ತತ್ವವಿರುತ್ತದೆ. ಆಗ ಅವನು ತನ್ನ ಅಂಗಚೈತನ್ಯವನ್ನು ತನ್ನ ಧೀನದಲ್ಲಿಟ್ಟುಕೊಂಡು ತನ್ನ ಶರೀರ ಭಾಗಗಳು ಕತ್ತರಿಸಿಹೋದರೂ ಅವುಗಳನ್ನು ಅವನು ಸಮಪಡಿಸಿಕೊಳ್ಳುವ ಸಾಮರ್ಥ್ಯವು ಅವನಲ್ಲಿ ಬರುತ್ತದೆಂಬುದು ಅನೇಕ ಶಿವಶರಣರ ಚರಿತ್ರೆಗಳಿಂದ ತಿಳಿದುಬರುತ್ತದೆ. ಇದನ್ನು ನಂಬುವದು ಅಥವಾ ಬಿಡುವದು ವಾಚಕರ ತಿಳಿವಳಿಕೆ ಮತ್ತು ವಿಶ್ವಾಸದ ಮೇಲೆ ಅವಲಂಬಿಸಿದೆ. ಆದರೆ ಐತಿಹಾಸಿಕ ದೃಷ್ಟಿಯಿಂದ ನಾವು ವಿಚಾರಮಾಡಿದಲ್ಲಿ ಏಕಾಂತದ ರಾಮಯ್ಯನು ಬನವಾಸಿನಾಡಿನಲ್ಲಿ ಅಂದರೆ ಈಗಿನ ಧಾರವಾಡ ಜಿಲ್ಲೆಯ ದಕ್ಷಿಣ ಭಾಗದಲ್ಲಿ ಅನೇಕ ವರ್ಷ ಇದ್ದುಕೊಂಡು ವೀರಶೈವ ಧರ್ಮವನ್ನು ಇಲ್ಲಿ ಪ್ರಸಾರಗೊಳಿಸಿದನೆಂಬುದು ನಿರ್ವಿವಾದವಾಗಿರುತ್ತದೆ.

ಏಕಾಂತದ ರಾಮಯ್ಯನ ಹೆಸರು ಗಣಸಹಸ್ರದಲ್ಲಿ ಬಂದಿರುತ್ತದೆ.

ಏಕಾಂತದ ರಾಮಯ್ಯನು ವಚನಕಾರನೂ ಇದ್ದಾನೆ. ಇದರಿಂದ ಅವನು ಮೊದಲು ಬ್ರಾಹ್ಮಣನಾಗಿದ್ದರೂ ಶಿವಶರಣರ ನಡೆಯಂತೆ ನಡೆಯುತ್ತ ಶಿವಾನುಭವದ ತತ್ವಗಳನ್ನು ಬನವಾಸಿನಾಡಿನಲ್ಲಿ ಪ್ರಸಾರ ಮಾಡಿದ್ದಾನೆಂದು ನಾವು ಊಹಿಸಬೇಕಾಗುತ್ತದೆ. ಅವನ ಮುದ್ರಿಕೆಯು 'ಎನ್ನಯ್ಯ ಚನ್ನರಾಮೇಶ್ವರ' ಎಂದಿರುತ್ತದೆ. ಅವನ ಆರು ವಚನಗಳು ಮಾತ್ರ ನಮಗೆ ದೊರಿತಿರುತ್ತವೆ. ಅವುಗಳನ್ನೆಲ್ಲ ನಾವು ಕೆಳಗೆ ಕೊಟ್ಟದ್ದೇವೆ.

## ವಚನಗಳು.

(೧) ಮನ ಲಿಂಗದಲ್ಲಿ ನಿಂದಿತ್ತೆಂಬಲ್ಲಿ ಆ ಮನ ಲಿಂಗಕ್ಕೆ ನೆಲೆಯೋ, ಲಿಂಗ ಮನದ ಸಂಗಿಯೋ, ಎಂಬುದ ತಿಳಿದೆನೆಂಬುದು ಸಂಗಿಯೋ, ನಿಸ್ಸಂಗಿಯೋ? ಬೀಜದೊಳಗಿನ ತಿರುಳು ಭೇದಿಸಿ ಹುಟ್ಟುವಲ್ಲಿ ಅದು ತನ್ನಯ ಸುನಾದದಿಂದವೋ, ಅಪ್ಪುವಿನ ಬಿಂದುವಿನ ಭೇದದಿಂದವೋ? ಈ ಉಭಯ ನೆಲೆ ಘಟಿಸಿದಲ್ಲಿ ಯೋಗಕೂಟವಾತ್ಮ

ಲಿಂಗ ಭೇದಯುಕ್ತಿ. ಭೇದಾಭೇದ ನಿಂದಲ್ಲಿ ಎನ್ನಯ್ಯ ಚನ್ನರಾಮನ ಕೂಟದ ಬೆಳಗು.

(೨) ಸಿಲೆ ಹಲವು ತೆರದಲ್ಲಿ ಹೊಲಬಿಗರಿಗೆ ಹೊಲಬಿಗನಾಗಿ, ಒಲವರವಿಲ್ಲದೆ ಅವರವರ ಭಾವದಲ್ಲಿ ನಿಲುವುದು ಸಿಲೆಯೋ, ಮನವೋ? ಆ ನಿಜದ ನೆಲೆಯ ತಿಳಿವುದು ದರ್ಪಣದ ತನ್ನೊಪ್ಪದ ಭಾವ ಎನ್ನಯ ಚನ್ನರಾಮನನರಿವಲ್ಲಿ.

(೩) ಕಲ್ಪಿತಾಂತರವನುಂಬುದು ಕಾಯವೋ? ಜೀವನ ಜೀವ ವೆಂದೊಡೆ ನಿರ್ನಾಮಭೇದ. ಕಾಯವೆಂದಡೆ ಅಚೇತನ ಘಟ. ಉಭಯ ಸಂಗ ಸಂಬಂಧವಾದಲ್ಲಿ ಎನ್ನಯ್ಯ ಚನ್ನರಾಮನ ಭೇದ.

(೪) ಕಾಯ ಹಲವು ಭೇದಗಳಾಗಿ ಆತ್ಮನನೇಕವೆಂಬುದದೇತರ ಮಾತು? ಬೆಂಕಿಯಿಂದಾದ ಬೆಳಗು ಸುಡಬಲ್ಲುದೇ ಬೆಂಕಿಯಲ್ಲದೆ? ಹಲವು ಘಟದಲ್ಲಿ ಅವರವರ ಹೊಲಬಿನಲ್ಲಿ ಅನುಭವಿಸುತ್ತ ಮತ್ತೊಂದರಲ್ಲಿಯ ಕೂಟಸ್ಥವಪ್ಪ ಸುಖ ಉಂಟೇ? ಈ ಗುಣ ಎನ್ನಯ್ಯ ಚನ್ನರಾಮನ ನರಿದಲ್ಲಿ.

(೫) ಗುರುಭಕ್ತನಾದಲ್ಲಿ ಘಟಧರ್ಮವಳಿದು, ಲಿಂಗಭಕ್ತನಾದಲ್ಲಿ ಸಂಚಲವಳಿದು, ಜಂಗಮಭಕ್ತನಾದಲ್ಲಿ ತ್ರಿವಿಧಾಂಗ ಸಲೆಸಂದು, ಇಂತೀ ತ್ರಿವಿಧಭಕ್ತಿಯಲ್ಲಿ ತ್ರಿಕರಣ ಶುದ್ಧನಾದಾತ್ಮಂಗೆ ಮರ್ತ್ಯಕ್ಕೆ ಕೈಲಾಸ ವೆಂಬ ಕಾಳು ಮಾಡಿಲ್ಲ. ಆತ ನಿತ್ಯಮುಕ್ತನೆನ್ನಯ್ಯ ಚನ್ನರಾಮನಾಗಿ.

(೬) ಅಶನ ವ್ಯಸನ ಸರ್ವವಿಷಯಾದಿಗಳಲ್ಲಿ ಹುಸಿದು ಪಿಸುಣ ತ್ವದಿಂದ ಗಸಣಿಗೊಂಡು ಮಾಡಿಸಿಕೊಂಬುದು ಸದ್ಗುರುವಿಗೆ ಸಂಬಂಧ ವಲ್ಲ. ತಿಲರಸ ವಾರಿಯ ಭೇದದಂತೆ ಮಣಿಯೊಳಗಿದ್ದ ಸೂತ್ರದಂತೆ ಅಂಗವ ತೀರ್ಚಿ ಪಾಯ್ದು ನಿಂದ ಅಹಿಯ ಅಂಗದಂತೆ ಗುರುಸ್ಥಲ ಸಂಬಂಧ ಎನ್ನಯ್ಯ ಚನ್ನರಾಮೇಶ್ವರಲಿಂಗವನರಿಯಬಲ್ಲಡೆ.

ಈ ವಚನಗಳಲ್ಲಿ ಏಕಾಂತದ ರಾಮಯ್ಯನು ಲಿಂಗಾಂಗಸಾಮರ ಸ್ಯದ ತತ್ವಗಳನ್ನು ವಿವೇಚಿಸಿದ್ದಾನೆ.

---

# ಗಜೇಶ ಮಸಣಯ್ಯ.

ಅಕ್ಕಲಕೋಟೆ ಸಂಸ್ಥಾನದಲ್ಲಿ ಕರಜಿಗೆ ಎಂಬ ಹೆಸರಿನ ಒಂದು ಗ್ರಾಮವಿರುತ್ತದೆ. ಅದು ವಿಜಾಪುರ ಪಟ್ಟಣದಿಂದ ಈಶಾನ್ಯಕ್ಕೆ ೬೦ ಮೈಲುಗಳ ಮೇಲೆ ಮತ್ತು ಸೊಲ್ಲಾಪುರ ಪಟ್ಟಣದಿಂದ ಆಗ್ನೇಯಕ್ಕೆ ೨೦ ಮೈಲುಗಳ ಮೇಲೆ ಇರುತ್ತದೆ. ಈ ಗ್ರಾಮದಲ್ಲಿ ಗಜೇಶ ಮಸಣಯ್ಯನೆಂಬ ಶಿವಶರಣನು ವಾಸಮಾಡುತ್ತಿದ್ದನು.

ಎಲ್ಲ ಶಿವಶರಣರಲ್ಲಿ ಕೆಲವೊಂದು ಶಿವಾನುಭವದ ವಿಶಿಷ್ಟ ಗುಣವಿರುತ್ತದೆ. ಇಷ್ಟಲಿಂಗದ ಪೂಜೆಯನ್ನು ಸತಿಪತಿ ಭಾವದಿಂದ ಮಾಡುವದೇ ಗಣೇಶ ಮಸಣಯ್ಯನ ವೈಶಿಷ್ಟ್ಯವಾಗಿತ್ತು. ಇದರಿಂದ ಅವನು ಶ್ರೇಷ್ಠನಾದ ಶಿವಯೋಗಿ ಎಂದು ಜನರಲ್ಲಿ ಪ್ರಸಿದ್ಧನಾದನು. ಲಿಂಗಪೂಜೆಯನ್ನು ಮಾಡುವಲ್ಲಿ ಅವನು ಅದರಲ್ಲಿಯೇ ಮೈಮರೆದು ಬಿಡುವನು. ಆಗ ಅವನಿಗೆ ಚಳಿ, ಮಳೆ, ಬಿಸಿಲು, ಗಾಳಿ ಇವಾವೂ ಭಾಸವಾಗುತ್ತಿರಲಿಲ್ಲ. ಹೊರಗಿನದರ ಅರಿವು ಅವನಿಗೆ ಏನೂ ಉಳಿಯುತ್ತಿದ್ದಿಲ್ಲ. ಆಗ ಸರ್ಪ, ವೃಶ್ಚಿಕ, ಭೂತ ಪಿಶಾಚಿಗಳು, ಕಾಡುಮೃಗಗಳು ಅವನನ್ನು ಸಮೀಪಿಸಲು ಹಿಂಜರಿಯುತ್ತಿದ್ದವು.

ವೀರಶೈವನು ಗುರೂಪದೇಶದಿಂದ ಇಷ್ಟಲಿಂಗವನ್ನು ಪಡೆದುಕೊಂಡು, ಗುರುವಿನಿಂದ ಅದರ ನೆಲೆಕಲೆಗಳನ್ನು ಅರಿತುಕೊಂಡು ತನ್ನ ಇಷ್ಟಲಿಂಗದಲ್ಲಿ ಧ್ಯಾನಮಗ್ನನಾಗಬೇಕು. ಇಂಥ ಧ್ಯಾನದಿಂದ ಪ್ರಾಣಲಿಂಗವು ಅವನಲ್ಲಿ ಅರಳುವದು. ಹೀಗಾಗಲು ಅದು ಅವನ ಹೃದಯ ಕಮಲಮಧ್ಯದಲ್ಲಿ ವಾಸಮಾಡಹತ್ತುತ್ತದೆ. ಆಗ ಆ ಭಕ್ತನು ನಡೆವಲ್ಲಿ, ನುಡಿವಲ್ಲಿ, ಹೊಂದುವಲ್ಲಿ, ಉಸಿರುವಲ್ಲಿ, ಕಾಣುವಲ್ಲಿ, ಕೇಳುವಲ್ಲಿ, ಲಿಂಗಚೈತನ್ಯವೇ ಅವನದಾಗುತ್ತದೆ. ಹೀಗೆ ಪ್ರಾಣಲಿಂಗವು ಅವನಲ್ಲಿ ತೊಳಗಿ ಬೆಳಗಹತ್ತಲು ಅವನ ಭಾವಲಿಂಗವೂ ಕೂಡ ಪ್ರಜ್ವಲಿಸಹತ್ತುತ್ತದೆ. ಅದು ಓಂಕಾರ ರೂಪಾಗಿದ್ದು ಅನೇಕ ಪ್ರಣವಗಳ ದ್ವಾರಾ ಅವನ ಅಂಗೋಪಾಂಗಗಳಲ್ಲಿ ಚಲಿಸಹತ್ತುತ್ತದೆ. ಹೀಗೆ ಇಷ್ಟ ಪ್ರಾಣ ಭಾವವಲಿಂಗಗಳನ್ನು ಭಕ್ತನು ಗ್ರಹಿಸಿ, ಅವುಗಳಾಚೆ ಇರುವ ತ್ರಿವೇಣಿಸಂಗಮವನ್ನು ಪ್ರವೇಶಿಸಿ ಅಲ್ಲಿಂದ ಮುಂದೆ ಹೋಗಿ, ನಿಷ್ಕಳಲಿಂಗ ಆಮೇಲೆ ಶೂನ್ಯಲಿಂಗ ಆಮೇಲೆ ನಿಶ್ಶೂನ್ಯಲಿಂಗ, ಇವುಗಳಲ್ಲಿದ್ದುಕೊಂಡು ಕಡೆಗೆ

ಬಯಲಲ್ಲಿ ಬೆರೆಯುವನು. ಹೀಗೆ ಬೆರೆತುಹೊಗುವದೇ ಲಿಂಗಪೂಜೆಯ ಉದ್ದೇಶವಿರುತ್ತದೆ. ಇದೇ ಶಿವಯೋಗವೆನಿಸಿಕೊಳ್ಳುತ್ತದೆ. ಹಾಗೆ ಆಚರಿಸುವವನಲ್ಲಿ ಕ್ರಮೇಣ ವಿಶ್ವಶಕ್ತಿಯು ತಲೆದೋರುತ್ತದೆ. ಇಂಥವನಿಗೆ ಬಾಹ್ಯಪೀಡೆಗಳು ತಗಲಲಾರವು. ಹೀಗೆ ಲಿಂಗಪೂಜೆಯನ್ನು ಸಾಧಿಸಿದ ಶಿವಶರಣರು ಹಿಂದಿನ ಕಾಲದಲ್ಲಿ ಅನೇಕರು ಆಗಿಹೋಗಿದ್ದಾರೆ. ಇಂಥವರಲ್ಲಿ ಗಜೇಶ ಮಸಣಯ್ಯನು ಒಬ್ಬನಾಗಿದ್ದಾನೆ.

ಹೀಗೆ ಗಜೇಶ ಮಸಣಯ್ಯನು ಇರುವಲ್ಲಿ ಅವನು ಒಂದು ದಿವಸ ಗುರುದರ್ಶನವನ್ನು ಹೊಂದಬೇಕೆಂದು ತನ್ನ ಗ್ರಾಮವಾದ ಕರಿಜಗೆಯಿಂದ ಹೊರಟನು. ಅವನು ಹೋಗುತ್ತಿರುವಾಗ ದಾರಿಯಲ್ಲಿ ಅವನಿಗೆ ಒಂದು ಮಹಾನದಿಯು ಹತ್ತಿತು. ಅದರ ವಿಶಾಲ ಪಾತ್ರವೂ, ಅದರ ಸುತ್ತಲೂ ಮೆರೆಯುತ್ತಿದ್ದ ಬನಗಳೂ, ಪಕ್ಷಿಗಳೂ ,ಸುಂದರವಾದ ಸೃಷ್ಟಿಯ ನೋಟವೂ, ಅವನನ್ನು ಲಿಂಗ ಪೂಜೆಗೆ ಎಳಸಿತು. ಆಗ ಅವನು ಅಲ್ಲಿ ಒಂದು ಏಕಾಂತ ಸ್ಥಳವನ್ನು ಆಯ್ದು ಅಲ್ಲಿ ತಳಿರು ಹಾಸಿಕೆಯನ್ನು ಹಾಸಿ, ಲಿಂಗಪೂಜೆಯನ್ನು ಮಾಡುತ್ತ ಅದರಲ್ಲಿಯೇ ಮಗ್ನನಾದನು.

ಹೀಗಿರಲು ಆಕಾಶದಲ್ಲಿ ಮೋಡಗವಿಯಿತು. ಸ್ವಲ್ಪ ವೇಳೆಯಲ್ಲಿ ಗಗನವು ಇಬ್ಭಾಗವಾಗುವದೋ ಏನೋ ಅನ್ನುವಂತೆ ಮಳೆಯು ಭೋರ್ಗರೆಯಹತ್ತಿತು. ಮೂರು ಜಾವದ ವರೆಗೂ ಅದು ಒಂದೇಸವನೇ ಸುರಿಯಿತು. ಆದರೆ ಗಜೇಶ ಮಸಣಯ್ಯನಿಗೆ ಅದರ ಅರಿವು ಆವುದೂ ಇರಲಿಲ್ಲ. ಅವನ ಶರೀರದ ಮೇಲೆ ಮಳೆ ಹನಿಗಳ ಬಲವಾದ ಹೊಡೆತಗಳು ಬೀಳುತ್ತಿದ್ದವು. ಅವನ ವಸ್ತ್ರಗಳು ನೆನೆದು ಹೋದವು. ಆದರೆ ಚಳಿಯೂ ಗಾಳಿಯೂ ಅವನಿಗೆ ಏನೂ ಅನಿಸಲಿಲ್ಲ. ಅವನು ಆ ಸ್ಥಳದಿಂದ ಕದಲಲಿಲ್ಲ. ಲಿಂಗಧ್ಯಾನದಲ್ಲಿ ಮಗ್ನನಾಗಿ ನಿಷ್ಚೆರಗಾಗಿ ಕುಳಿತು ಬಿಟ್ಟಿದ್ದನು. ಹೀಗೆ ಮೂರು ಜಾವಗಳು ಸಂದಿ ಹೋದವು. ಆಗ ನದಿಯ ನೀರು ಏರುತ್ತ ಏರುತ್ತ ಬಂದಿತು. ಅದು ಅವನ ಮೇಲೆ ಮುಸುಕಿ ಬರಹತ್ತಿತು. ಆದರೆ ಬಾಹ್ಯ ಸೃಷ್ಟಿಯು ಇಂಥ ಶಿವಯೋಗಿಗೆ ಏನು ಮಾಡಬಲ್ಲದು? ನದಿಯ ಹರಿಯುವ ನೀರು ಅವನನ್ನು ಸಮೀಪಿಸದೆ ಅವನ ಮಗ್ಗುಲಿನಿಂದ ಹಾಯ್ದು ಹೋಗಹತ್ತಿತು. ಮಸಣಯ್ಯನಲ್ಲಿದ್ದ ಲಿಂಗಶಕ್ತಿಯು ಅದನ್ನು ಬೇರೆ ಕಡೆಗೆ ನೂಕಿಬಿಟ್ಟಿತು. ಮುಂದೆ ಸ್ವಲ್ಪ

ಹೊತ್ತಿನಲ್ಲಿ ನದಿಯ ನೀರು ಹೆಚ್ಚಿಚ್ಚಾಗಿ ಬರಲು, ಅದು ಅವನ ಮೇಲೆ ಹಾಯ್ದು ಹೋಗದೆ ಅವನ ಹಿಂದೆ ಬಂದ ಕೂಡಲೆ ಅದು ಒಡೆದು ಇಬ್ಭಾಗವಾಗಿ ಅವನ ಸುತ್ತಲೂ ಎರಡು ಟಿಸಿಲುಗಳಾಗಿ ಹರಿದು ಹೋಗಿ, ಮುಂದೆ ಅವು ಪುನಃ ಕೂಡಿ ಹರಿದು ಹೋಗುತ್ತಿದ್ದವು. ಹೀಗೆ ನದಿಯು ತಾಳಮರದುದ್ದವಾಗಿ ಹರಿಯುತ್ತಿದ್ದರೂ ಅದು ಅವನ ಮೇಲೆ ಹಾಯದೆ ಮಗ್ಗುಲಿನಿಂದ ಹರಿದುಹೋಗುತ್ತಿತ್ತು. ಇದನ್ನು ಸಮೀಪದ ಜನರು ನೋಡಿ ಅಚ್ಚರಿಗೊಂಡು, 'ಹರಪೂಜೆಯಲ್ಲಿರುವ ಭಕ್ತನಿಗೆ ಶರಧಿ ಯಂಜುವದೆ'ಂಬ ನಾಣ್ನುಡಿಯು ಇಂದು ದಿಟವಾಯಿತು ಎಂದು ಕೊಂಡಾಡಿದರು. ಕೆಲವು ಹೊತ್ತಿನ ಮೇಲೆ ಮುಸಣಯ್ಯನಿಗೆ ಎಚ್ಚರಾ ಗಲು ಅವನಿಗೆ ನಡೆದ ಸಂಗತಿಗಳು ತಿಳಿದು ಬರಲು ಅದು ಕನಸಿ ನಲ್ಲಿದ್ದಂತೆ ಅವನಿಗೆ ಭಾಸವಾಯಿತು. ಹೀಗೆ ಮುಸಣಯ್ಯನು ಲೋಕ ದಲ್ಲಿ ಆಚರಿಸುತ್ತ ಲಿಂಗಾಚರಣೆಯಂತೆ ನಡಿಯುತ್ತ ಲಿಂಗಾಂಗ ಸಾಮರ ಸ್ಯವನ್ನು ಹೊಂದಿದನು.

ಮುಸಣಯ್ಯನು ಲಿಂಗದೊಡನೆ ಸತಿಪತಿ ಭಾವದಿಂದ ಆಚರಿಸುತ್ತ ಹೀಗೆ ಸಾಮರಸ್ಯವನ್ನು ಹೊಂದಿದ್ದಾನೆ. ಅವನು ವಚನಕಾರನಿದ್ದಾನೆ. ಅವನ ವಚನಗಳು ಅತ್ಯಂತ ಶ್ರೇಷ್ಠತರವಾದವುಗಳು. ಅವನ ೫೯ ವಚನ ಗಳನ್ನು ನಾವು ಶಿವಾನುಭವ ಗ್ರಂಥಮಾಲೆಯಲ್ಲಿ ಪ್ರಸಿದ್ಧಿಸಿದ್ದೇವೆ. ಅವೆಲ್ಲವೂ ಸತಿಪತಿ ಭಾವದ ವಚನಗಳು. ಮಹಾದೇವಿಯಕ್ಕನ ವಚನ ಗಳಂತೆಯೇ ಅವು ಸೌಂದರ್ಯವುಳ್ಳವಾಗಿವೆ. ವಿಶ್ವದ ಸೌಂದರ್ಯವನ್ನು ಅವನು ಕಂಡವನಾಗಿ, ವಿಶ್ವದಲ್ಲಿ ಅವನು ಲಿಂಗವನ್ನು ಕಾಣುತ್ತಾನೆ. ವಿಶ್ವ ಶಕ್ತಿಯು ಅವನಲ್ಲಿ ಬೆರೆದು ಹೋದಂತೆ ಅವನ ವಚನಗಳಲ್ಲಿ ಭಾಸವಾಗುತ್ತದೆ. ಇಷ್ಟು ಭಾವ ಪೂರ್ಣವು ಅವಾಗಿರುತ್ತವೆ.

ಗಜೇಶಮುಸಣಯ್ಯನ ಹೆಸರು ಗಣಸಹಸ್ರದಲ್ಲಿ ಬಂದಿದೆ. ಅವನು ಬಹುಶಃ ಬಸವೇಶ್ವರನ ಕಾಲದವನು. ಅವನ ವಚನಗಳನ್ನು ಹಿಂದಿನ ಕಾಲದ ವಚನಸಂಗ್ರಹಕಾರರು ಯಾವಾಗಲೂ ಉದಹರಿಸುತ್ತ ಬಂದಿ ದ್ದಾರೆ. ಇಷ್ಟು ಅವು ಮಹತ್ವದವಾಗಿವೆ. ಅವನ ಭಾಷೆಯು ಬಲು ಮೋಹಕವಾದದ್ದು, ಸವಿಯಾದದ್ದು, ಮೃದುವಾದದ್ದು. ಕನ್ನಡ ನುಡಿಯ ಸವಿಯು ಅವನ ವಚನಗಳಲ್ಲಿ ತುಂಬಿತುಳುಕುತ್ತದೆ. ಅವನ ಕೆಲವು ವಚನಗಳನ್ನು ಮಾದರಿಗಾಗಿ ಕೆಳಗೆ ಉದಹರಿಸುತ್ತೇವೆ.






ಪ್ರತಿ ತಿಂಗಳ ೧೫ನೇ ತಾರೀಖಿಗೆ ಪ್ರಕಟವಾಗುವದು.

ವಾರ್ಷಿಕ ಚಂದಾ ಅಂಚೆವೆಚ್ಚಸಹಿತ ರೂ. ೪–೮–೦ ವ್ಹಿ. ಪಿ. ಖರ್ಚು ೦–೪–೦

ಸಂಪುಟ ೨೦ ] ಡಿಸೆಂಬರ ೧೯೪೫. [ ಸಂಚಿಕೆ ೩

## ವಿಷಯಾನುಕ್ರಮಣಿಕೆ.

# ಶಿವಾನುಭವ

ವರ್ಷ ೨೦ | ಜನೇವರಿ ೧೯೪೭. | ಸಂಚಿಕೆ ೪

## ನಮ್ಮ ಪಾಠಶಾಲೆಗಳು.

( ಲೇಖಕ—ಓರ್ವ ಶಿಕ್ಷಕ )

### ಪಾಠಶಾಲೆಗಳು.

ವೀರಶೈವ ಸಂಸ್ಕೃತ ಪಾಠಶಾಲೆಗಳು ಅನೇಕ ಸ್ಥಳಗಳಲ್ಲಿ ಸ್ಥಾಪಿತವಾಗಿರುವವಷ್ಟೇ! ಅವುಗಳ ಮುಖ್ಯ ಗುರಿಯೇನು? ವೀರಶೈವ ಸಂಸ್ಕೃತಿ ಮತ್ತು ಮತ ತತ್ವಗಳು ವಿದ್ಯಾರ್ಥಿಗಳಲ್ಲಿ ಆಳವಾಗುವಂತೆ ಮಾಡುವದೇ ಅವುಗಳ ಮುಖ್ಯ ಧ್ಯೇಯವು. ಸಂಸ್ಕೃತಿಯೆಂದರೆ [illegible] ಕೌಶಲ್ಯ. ತಮ್ಮ ಸಮಾಜದಲ್ಲಿ ಕುಶಲತನದಿಂದ ನಡೆದುಕೊಂಡು ಪ್ರಪಂಚವನ್ನು ಸುಗಮವಾಗಿಯೂ ಸುಖರೂಪವಾಗಿಯೂ ಸಾಗಿಸಿಕೊಂಡು ಹೋಗುವಂತೆ ಬಾಲಕರನ್ನು ಸಮರ್ಥರನ್ನಾಗಿ ಮಾಡುವದೇ ಮುಖ್ಯೋದ್ದೇಶ.

ನಮ್ಮ ಸಮಾಜವು ಪ್ರಪಂಚದ ಎಲ್ಲತರಹದ ಕಸುಬು ಕಾಯಕಗಳನ್ನು ಮಾಡುವ ಜನರಿಂದ ಸರ್ವಾಂಗ ಸುಂದರವಾಗಿ ಶೋಭಿಸುತ್ತದೆ. ಅವರು ತಮ್ಮ ಕಾಯಕಗಳಲ್ಲಿ ಒಳ್ಳೆ ತಜ್ಞತೆಯನ್ನು ಪಡೆದು ಪ್ರಪಂಚದ ಸುಖೋಪಭೋಗಗಳನ್ನು ಯಥೇಚ್ಛವಾಗಿ ಭೋಗಿಸುತ್ತ ಸಮಾಜದ ಅಭಿವೃದ್ಧಿಗಾಗಿ ತನುಮನಧನಗಳಿಂದ ಸೇವೆಯನ್ನು ಸಲ್ಲಿಸುವದೇ ಸಂಸ್ಕೃತಿಯ ರಹಸ್ಯವು. ಪಾಠಶಾಲೆಗಳಲ್ಲಿ ಇಂಥ ಸಂಸ್ಕೃತಿಗೆ ಪ್ರಥಮ ಸ್ಥಾನವಿರತಕ್ಕದ್ದು. ಪಾಠಶಾಲೆಗಳಲ್ಲಿ ಹಳೇ ಪದ್ಧತಿಯ ಕಸುಬು ಕಾಯಕಗಳಿಗೆ ಹೊಸತರದ ಆಕಾರಗನ್ನು ಕೊಟ್ಟು ಈಗಿನ ಪ್ರಪಂಚಕ್ಕೆ

ಅನುಗುಣವಾಗಿ ತಮ್ಮ ಕಾರ್ಯಕಗಳನ್ನು ಮಾರ್ಪಡಿಸಿಕೊಳ್ಳುವಂತೆ ವಿದ್ಯಾರ್ಥಿಗಳಿಗೆ ಸೌಕರ್ಯಗಳನ್ನು ಒದಗಿಸಿಕೊಡುವದೇ ಪಾಠಶಾಲಾ ಚಾಲಕರ ಮುಖ್ಯ ಕರ್ತವ್ಯ. ಉದಾಹರಣಾರ್ಥವಾಗಿ ಹಳ್ಳಿಗಳಲ್ಲಿ ಒಕ್ಕಲತನ, ನೇಕಾರಿಕೆ, ಕುಂಬಾರಿಕೆ, ಕಂಬಾರಿಕೆ, ಬಡಿಗತನ, ಸಿಂಪಿಗತನ; ಅಂಗಡಿ ವ್ಯವಹಾರ, ಮೊದಲಾದ ಒಂದಿಲ್ಲೊಂದು ಉದ್ಯೋಗಗಳು ಇದ್ದೇ ಇರುತ್ತವೆ. ಊರೊಳಗೆ ಆಯಾಯ ಕಸಬುಗಳಲ್ಲಿ ತಜ್ಞನಾದವನನ್ನು ಆರಿಸಿ ಕಸಬುದಾರರ ಮಕ್ಕಳಿಗೆ ಆಯಾಯ ಶಿಕ್ಷಣವನ್ನು ಕೊಡಿಸಬೇಕು. ಸಮಾಜದವರು ಅಂಥ ತಜ್ಞನನ್ನು ಬೇರೆ ಕಡೆಗೆ ಕಳಿಸಿ ಯೋಗ್ಯ ಶಿಕ್ಷಣವನ್ನು ಕೊಡಿಸಿದರೆ ಊರೊಳಗೆ ಅವರು ಕುಶಲ ಶಿಕ್ಷಕರಾಗಿ ಕೆಲಸಮಾಡುವರು.

ಇದೇ ಮೇರೆಗೆ ವೀರಶೈವ ಮತತತ್ವಗಳನ್ನು ಚನ್ನಾಗಿ ಅಭ್ಯಾಸ ಮಾಡಿ ಅವುಗಳಲ್ಲಿ ಕೌಶಲ್ಯವನ್ನು ಪಡೆದ ಪಂಡಿತರಿಂದ ಶಿಕ್ಷಣವನ್ನು ಕೊಡಿಸಬೇಕು. ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲ, ನೂರೊಂದುಸ್ಥಲ ಸಕೀಲಸಂಬಂಧಗಳು ಮೊದಲಾದ ಮತ ತತ್ವಗಳನ್ನು ಪ್ರತಿಪಾದಿಸುವ ಗ್ರಂಥಗಳೆಂದರೆ, ವಚನಗಳು-ಶತಕಗಳು—ಕೈವಲ್ಯಗಳು—ಸಂಸ್ಕೃತಾಗಮಗಳು—ಪುರಾಣಗಳು ಆಗಿರುತ್ತವೆ. ಅವುಗಳ ಅಭ್ಯಾಸವನ್ನು ವಿದ್ಯಾರ್ಥಿಗಳಿಗೆ ಕ್ರಮದಿಂದ ಮಾಡಿಸುತ್ತ ಹೋದರೆ ವಿದ್ಯಾರ್ಥಿಗಳಲ್ಲಿ ತಮ್ಮ ಮತತತ್ವಗಳರಿವುಂಟಾಗುವದು. ಸ್ವಮತದಬಗ್ಗೆ ಅಭಿಮಾನವುಂಟಾಗುವದು. ಸಂಸ್ಕೃತವು ಸನಾತನ ಭಾಷೆಯಿದ್ದು ಅವುಗಳಲ್ಲಿ ಉತ್ತಮ ಸಾಹಿತ್ಯ ಗ್ರಂಥಗಳೂ ಉಪನಿಷತ್ತು, ಆಗಮ, ಭಗವದ್ಗೀತೆ ಮೊದಲಾದ ತತ್ವ ಗ್ರಂಥಗಳೂ ಇರುವವರಿಂದ ತುಲನಾತ್ಮಕ ದೃಷ್ಟಿಯ ಅಭ್ಯಾಸಕ್ಕೆ ಆ ಭಾಷೆಯನ್ನು ಪಾಠಶಾಲೆಗಳಲ್ಲಿ ತಕ್ಕಮಟ್ಟಿಗೆ ಕಲಿಸುವದು ಅವಶ್ಯಕ. ಅದರಂತೆ ಹಿಂದೀಭಾಷೆಯು ರಾಷ್ಟ್ರಭಾಷೆಯಾದ್ದರಿಂದ ಅದನ್ನು ನಿರಾಕರಿಸಿದೆ ಆ ಭಾಷೆಯು ತಿಳಿಯುವ ಮಟ್ಟಿಗೆ ಅಂದರೆ ಅದರ ಪ್ರಥಮಾ ಪರೀಕ್ಷೆಯನ್ನು ಮಾಡಿಸುವದಾದರೂ ವಿಹಿತವೇ ಆಗಿದೆ. ಇನ್ನು ಇಂಗ್ಲಿಷು ಆಳರಸರ ಭಾಷೆಯಿದ್ದು ಈಗಿನ ರಾಜಕೀಯ ವ್ಯವಹಾರಕ್ಕೆ ಅದು ಅವಶ್ಯ ಬೇಕಾದ್ದರಿಂದ ಅದರ ಅಭ್ಯಾಸವನ್ನಾದರೂ 'ಮ್ಯಾಟ್ರಿಕ್'ದವರೆಗೆ ಮಾಡಿಸುವದು ಉಪಯುಕ್ತವೆಂದು ತಿಳಿಯಬೇಕು. ಇವೆಲ್ಲ ಸಂಗತಿಗಳನ್ನು ಲಕ್ಷಿಸಿ ಒಂದು ಸಮಾನವಾದ ಯೋಜನೆಯನ್ನು ಗೊತ್ತುಪಡಿಸಿ

ಎಲ್ಲ ಪಾಠಶಾಲೆಗಳು ಅದನ್ನು ಅನುಸರಿಸಿ ನಡೆದರೆ ಸಮಾಜಕ್ಕೆ ಹಿತಕರ. ಈಗಿನ ಪಾಠಶಾಲೆಗಳಲ್ಲಿ ಕಂಡುಬರುವ ವೈವಿಧ್ಯವು ಹೋಗಿ ಅವುಗಳಲ್ಲಿ ಏಕೀಭಾವವುಂಟಾಗುವಂತೆ ಸಮಾಜದ ಮುಂದಾಳುಗಳು ಪ್ರಯತ್ನಿಸಬೇಕು.

## ಈಗಿನ ಪಾಠಶಾಲೆಗಳ ಪರಿಸ್ಥಿತಿ.

ಸದ್ಯಕ್ಕೆ ನಾವು ಈಗಿನ ಪಾಠಶಾಲೆಗಳ ಪರಿಸ್ಥಿತಿಯನ್ನಷ್ಟು ಅವಲೋಕಿಸೋಣ. ನಮ್ಮವರು ಹುಬ್ಬಳ್ಳಿ-ಯಾದಗಿರಿಗಳಲ್ಲಿ ಸಂಸ್ಕೃತ ಕಾಲೇಜಗಳನ್ನು ಸ್ಥಾಪಿಸಿದ್ದಾರೆ. ಅದರಂತೆ ಸೊಲ್ಲಾಪೂರ, ಧಾರವಾಡ, ಬಾಗಲಕೋಟ, ಅಥಣಿ, ಮಹಾಗಾಂವ ಮುಂತಾದ ಅನೇಕ ಸ್ಥಳಗಳಲ್ಲಿ ಸಂಸ್ಕೃತ ಪಾಠಶಾಲೆಗಳುಂಟು. ಮಾಧ್ಯಮಿಕ ಶಾಲೆಗಳಲ್ಲಿ ಇಂಗ್ಲೀಷು ಮುಖ್ಯ ವಿಷಯವಾಗಿರುವಂತೆ ಪಾಠಶಾಲೆಗಳಲ್ಲಿ ಸಂಸ್ಕೃತವು ಮುಖ್ಯ ವಿಷಯವಾಗಿದೆ. ನಮ್ಮ ಸಂಸ್ಕೃತ ಕಾಲೇಜ ಪಾಠಶಾಲೆಗಳಲ್ಲಿ ವೀರಶೈವ ಸಂಸ್ಕೃತಿ ಮತತತ್ವಗಳ ಅಧ್ಯಯನಕ್ಕೆ ಲವಲೇಶವಾದರೂ ಅವಕಾಶವಿರದೆ ಅವು ಕಲಕತ್ತಾ, ಬನಾರಸ ವಿದ್ಯಾಪೀಠಗಳಿಗೊಳಪಟ್ಟು ಅಲ್ಲಿಯ ಪರೀಕ್ಷೆಗಳ ಅಭ್ಯಾಸಕ್ರಮವನ್ನು ಸಾಗಿಸಿರುತ್ತವೆ. ಅಲ್ಲಿಯ ಕ್ರಮದ ಪ್ರಕಾರ ಸಾಹಿತ್ಯ-ವ್ಯಾಕರಣ-ನ್ಯಾಯ-ವೇದಾಂತ ಪರೀಕ್ಷೆಗಳಿಗಾಗಿ ವಿದ್ಯಾರ್ಥಿಗಳನ್ನು ಹುರಿಗೊಳಿಸಿ ಕೊನೆಗೆ ಅವರನ್ನು ಶಾಸ್ತ್ರಿಗಳನ್ನು ಮಾಡುವದೇ ಮುಖ್ಯೋದ್ದೇಶವಾಗಿದೆ. ಈ ಶಾಸ್ತ್ರಿಗಳು ಮುಂದೆ ಎಲ್ಲಿಯಾದರೂ ಸ್ವಾಮಿಗಳ ಇಲ್ಲವೆ ಊರೊಳಗಿನ ಪ್ರಮುಖರ ಆಶ್ರಯವನ್ನು ಹೊಂದಿ ಅಲ್ಲಿ ಒಂದು ಪಾಠಶಾಲೆಯನ್ನು ಸ್ಥಾಪಿಸುವರು. ಅವರಿಗೆ ವೇತನವು ಸರಿಯಾಗಿ ನಡೆಯುವ ತನಕ ಪಾಠಶಾಲೆಗಳು ಹಾಗೂ ಹೀಗೂ ನಡೆಯುವವು. ಒಮ್ಮೊಮ್ಮೆ ಪಾಠಶಾಲೆಗಳಲ್ಲಿ ವಿದ್ಯಾರ್ಥಿಗಳ ಸಂಖ್ಯೆಯು ಜೀರ್ಣಿಸುತ್ತ ಹೋದರಂತೂ ಪಾಠಶಾಲೆಗಳು ನಾಮಶೇಷವಾಗುವವು. ಇಂಥ ಪಾಠಶಾಲೆಗಳೆಷ್ಟೋ ಹುಟ್ಟಿ ಬೆಳೆದು ಅಲ್ಪಾವಧಿಯಲ್ಲಿಯೇ ನಿಂತುಹೋದ ಉದಾಹರಣೆಗಳೆಷ್ಟೋ ಇವೆ. ಅನೇಕ ಶಾಸ್ತ್ರಿಗಳು ಉದರನಿರ್ವಾಹಕ್ಕೆ ಉಪಾಯಗಾಣದೆ ಅನನ್ಯಗತಿಕರಾಗಿದ್ದಾರೆ. ಇಂಗ್ಲಿಷ ಕಲಿತವರು ನೌಕರಿ ದೊರೆಯದೆ ಯಾವ ರೀತಿಯಿಂದ ತೊಳಲುತ್ತಿರುವರೋ ಅದೇ ರೀತಿಯಾಗಿ ಸಂಸ್ಕೃತ ಶಾಸ್ತ್ರಿಗಳ ಹಾಡೂ ಆಗಿದೆ.

ಪಾಠಶಾಲೆಗೆ ಬರುವ ವಿದ್ಯಾರ್ಥಿಗಳೆಂದರೆ ಮಠಸ್ಥರ ಮಕ್ಕಳು. ಅವರಿಗೆ ಕನ್ನಡ ಸಹ ಚೆನ್ನಾಗಿ ಬರುತ್ತಿರುವದಿಲ್ಲ. ವ್ಯಾಕರಣ ಜ್ಞಾನ ವಂತೂ ಎಳ್ಳಷ್ಟಿರುವದಿಲ್ಲ. ಅವರು ಒಮ್ಮೊಮ್ಮೆ ಪಾಠಶಾಲೆಗೆ ಬಂದು ಗಿಳಿಗಳಂತೆ ಅಮರಕೋಶವನ್ನು ಬಾಯಿಪಾಠ ಮಾಡಹತ್ತುವರು. ತಿಳಿ ಯದ ವ್ಯಾಕರಣದ ನೇಮಗಳನ್ನೂ ಶ್ಲೋಕಗಳ ಅರ್ಥವನ್ನೂ ಗಟ್ಟಿ ಮಾಡಿ ಒಪ್ಪಿಸುವರು. ಪಾಠಶಾಲಾ ಶಿಕ್ಷಣವು ಹುಡುಗರ ಬುದ್ಧಿವಿಕಾ ಸಕ್ಕೆ ಆಸ್ಪದ ಕೊಡದೆ ಕೇವಲ ಕಂಠ ಪಾಠವನ್ನು ಮಾತ್ರ ಹೆಚ್ಚಿಸು ವದಾಗಿರುತ್ತದೆ. ಕಂಠಪಾಠವು ಒಂದು ರೀತಿಯಿಂದ ಯೋಗ್ಯವೆಂದು ತಿಳಿಯಲ್ಪಟ್ಟರೂ ಅರ್ಥದ ಮಾರ್ಗವನ್ನರಿಯದ ಬಾಯಿಪಾಠವು ವ್ಯರ್ಥ ವೆಂದೇ ಹೇಳಬೇಕು. ಇಂಥ ಶಿಕ್ಷಣ ಕೊಡುವದರಿಂದ ವಿದ್ಯಾರ್ಥಿಗ ಳಿಗೆ ಯಾವ ತರಹದ ಲಾಭವೂ ಆಗದು. ಆಧುನಿಕ ಹೊಸಪದ್ಧ ತಿಯ ಮೇರೆಗೆ ಅವರಿಗೆ ಶಿಕ್ಷಣ ಕೊಡತಕ್ಕದ್ದು.

ಪಾಠಶಾಲೆಗಳಲ್ಲಿ ನಮ್ಮ ಮಾತೃಭಾಷೆಯಾದ ಕನ್ನಡಕ್ಕೆ ಪ್ರಾಮುಖ್ಯ ವಾದ ಸ್ಥಾನವಿರತಕ್ಕದ್ದು. ಅದರಲ್ಲಿಯ ಸಾಹಿತ್ಯ ಮತತತ್ವಗಳ ಪರಿ ಚಯವು ವಿದ್ಯಾರ್ಥಿಗಳಿಗೆ ಹೆಚ್ಚಾಗಬೇಕು. ಬರೇ ಮಠಸ್ಥರ ಮಕ್ಕ ಳಿಗೇಕೆ? ಎಲ್ಲ ವರ್ಗದ ಭಕ್ತರ ಮಕ್ಕಳಿಗೂ ಪಾಠಶಾಲೆಗಳಲ್ಲಿ ಪ್ರವೇಶ ದೊರೆಯಬೇಕು. ವೀರಶೈವ ಇತಿಹಾಸ ಸಂಶೋಧನೆಯ ಕಡೆಗೆ ವಿದ್ಯಾ ರ್ಥಿಗಳ ದೃಷ್ಟಿಕೋನವನ್ನು ಹೊರಳಿಸಬೇಕು. ನಮ್ಮಲ್ಲಿರುವ ಸಂಸ್ಕೃತ ಸಾಹಿತ್ಯವನ್ನು ತಿಳಿದುಕೊಳ್ಳುವ ಮಟ್ಟಿಗೆ ಮಾತ್ರ ನಮಗೆ ಸಂಸ್ಕೃತ ಬಂದರೆ ತೀರಿತು. ನಮ್ಮ ಮತಗ್ರಂಥಗಳು ಸಂಸ್ಕೃತದಲ್ಲಿ ವಿಶೇಷವಾ ಗಿರದೆ ಕನ್ನಡದಲ್ಲಿ ವೆಗ್ಗಳವಾಗಿರುವವು. ಅದಕ್ಕಾಗಿ ಕನ್ನಡವು ನಮಗೆ ಮುಖ್ಯವಲ್ಲದೆ ಸಂಸ್ಕೃತವಲ್ಲ. ಬ್ರಾಹ್ಮಣರ ಧರ್ಮಗ್ರಂಥಗಳೆಲ್ಲ ಸಂಸ್ಕೃ ತದಲ್ಲಿರುವದರಿಂದ ಅವರಿಗೆ ಸಂಸ್ಕೃತ ಭಾಷೆಯು ಒಂದು ವೇಳೆ ಮುಖ್ಯವಾಗಬಹುದು. ಆದರೆ ನಮಗೆ ಅದು ಗೌಣವಾಗಿದೆ. ಗೌಣ ವಾದುದಕ್ಕೆ ಪ್ರಾಮುಖ್ಯತೆಯನ್ನು ಕೊಡುವದು ಯೋಗ್ಯವಲ್ಲ. ನಮ್ಮ ವರು ನ್ಯಾಯ, ವ್ಯಾಕರಣ, ವೇದಾಂತ ಪರೀಕ್ಷೆಗಳನ್ನು ಕಟ್ಟುವದು ಸಮಂಜಸ ಕಾಣುವದಿಲ್ಲ. ಅದರಿಂದ ಯಾವ ಇಹಪರಗಳೂ ಸಾಧಿ ಸವು. ಸಮಾಜಕ್ಕೂ ವ್ಯಕ್ತಿಗೂ ಆ ಪರೀಕ್ಷೆಗಳಿಂದ ಯಾವ ಲಾಭವೂ ಇಲ್ಲ. ಆದ್ದರಿಂದ ನಮ್ಮವರು ಆ ಪರೀಕ್ಷೆಗಳಿಗೆ ಶರಣು ಹೊಡೆಯು ವದೇ ಮುಖ್ಯ ಕೆಲಸ.

ಇನ್ನು ಮೇಲೆ ಪಾಠಶಾಲೆಗಳ ಹಾಗೂ ಸಂಸ್ಕೃತ ಕಾಲೇಜಗಳ ಅಭ್ಯಾಸಕ್ರಮದಲ್ಲಿ ಸ್ವತಂತ್ರವಾದ ಹೊಸ ಮಾರ್ಪಾಟುಗಳಾದ ಹೊರತು ಗತ್ಯಂತರವಿಲ್ಲ. ಕಲಕತ್ತಾ, ಬನಾರಸ ವಿದ್ಯಾಲಯಗಳಿಗೇಕೆ ನಮ್ಮವರು ಅಧೀನರಾಗಬೇಕು? ಸ್ವತಂತ್ರರೇಕಾಗಬಾರದು? ಅಂಥ ಕರ್ತೃತ್ವ ಶಕ್ತಿಯು ನಮ್ಮಲ್ಲಿಲ್ಲವೇ ಹೇಗೆ? ಈ ಪ್ರಶ್ನೆಯನ್ನು ನಮ್ಮ ಸಂಸ್ಕೃತ ಪಂಡಿತರ ಹಾಗೂ ಶಾಸ್ತ್ರಿಗಳ ಅವಗಾಹನೆಗಾಗಿ ನಾನು ಎತ್ತಿದ್ದೇನೆ. ಅವರು ಸಾರಾಸಾರ ವಿಚಾರ ಮಾಡಬೇಕು. ವೀರಶೈವ ಮತಭಾಷೆಯು ಸಂಸ್ಕೃತವಲ್ಲ, ಕನ್ನಡವೆಂಬುದನ್ನು ಎಲ್ಲರೂ ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ಆದ್ದರಿಂದ ಪಾಠಶಾಲೆಗಳಲ್ಲಿ ಕನ್ನಡಕ್ಕೆ ಅಗ್ರಸ್ಥಾನವನ್ನಿತ್ತು ಸಂಸ್ಕೃತಕ್ಕೆ ಗೌಣಸ್ಥಾನವನ್ನೀಯುವದು ವಿಹಿತ.

ಇನ್ನು ಮೇಲೆ ಸಂಸ್ಕೃತ ಪಾಠಶಾಲೆಗಳ ತಳಹದಿಯನ್ನು ವೀರಶೈವ ಮತ ತತ್ವಗಳಿಗನುಗುಣವಾಗಿ ಹಾಕಿದರೆ ಕರ್ನಾಟಕದಲ್ಲಿ ಪ್ರಾಥಮಿಕ-ಮಾಧ್ಯಮಿಕ--ಉಚ್ಚಶಿಕ್ಷಣದ ವಿದ್ಯಾಲಯಗಳು ನಮ್ಮವೇ ಆಗುವವು. ಅಂಥ ಯೋಜನೆಯನ್ನು ಮಾಡುವದು ವೀರಶೈವ ಮುಖಂಡರ ಮುಖ್ಯ ಕರ್ತವ್ಯ. ನಾವು ನಮ್ಮದೇ ಆದ ಒಂದು ವಿದ್ಯಾಪೀಠವನ್ನು ಮಾಡಿಕೊಂಡು ಈಗಿನ ನಿರುಪಯೋಗಿಯಾದ ಇಂಗ್ಲಿಷ ಹಾಯಸ್ಕೂಲು ಕಾಲೇಜಗಳ ಶಿಕ್ಷಣಕ್ಕೆ ಶರಣು ಹೊಡೆಯಬಹುದು. ಆದರೆ ನಮ್ಮ ಪಾಠಶಾಲೆಗಳ ಉದ್ದೇಶ ಧ್ಯೇಯಗಳನ್ನು ಮಾರ್ಪಡಿಸಿ ಅವುಗಳಿಗೆ ಹೊಸ ಸ್ವರೂಪವನ್ನು ಮಾತ್ರ ಕೊಡಬೇಕಾಗುತ್ತದೆ. ಈ ಕಲ್ಪನೆಯು ಅನೇಕರಿಗೆ ವಿಲಕ್ಷಣವೆನಿಸಬಹುದು. ಇಂಥ ಯೋಜನೆಯು ಅಸಾಧ್ಯವಾಗಿ ತೋರಬಹುದು. ಆದರೂ ಸಮಾಜದ ಮುಂದಾಳುಗಳು ಪ್ರಯತ್ನಬಟ್ಟರೆ ಅದು ಸುಲಭವಾಗಿ ನೆರವೇರಬಹುದು. ಸಮಾಜವು ಮೊದಲಿನಂತೆ ತನ್ನ ಸಂಸ್ಕೃತಿ ಮತತತ್ವಗಳ ಪ್ರಕಾಶದಿಂದ ಪುನಃ ತಲೆಯೆತ್ತಿ ಮೆರೆಯಬಹುದು.

## ಮಠವೇ ಪಾಠಶಾಲೆ.

ವೀರಶೈವರಿಗೆ ಪ್ರತಿಯೊಂದು ಹಳ್ಳಿಯಲ್ಲಿ ಸ್ವಾಮಿಗಳಿರಲಿ, ಇಲ್ಲದಿರಲಿ, ವಿರಕ್ತ ಮಠವು ಬಹುಶಃ ಇರುತ್ತದೆ. ಅಲ್ಲಿ ಪ್ರಾಪಂಚಿಕರು ಸಂಸಾರ

ವಿದ್ಯಾರ್ಥಿ ವೇತನ(*Scholarships*) ಪಾರಿತೋಷಕ (*Prizes*) ಸಾಂಪತ್ತಿಕ ಯೋಜನೆ (*Funds*) ಮುಂತಾದವುಗಳ ಏರ್ಪಾಟು ಮಾಡಬೇಕು. ಈ ವಿದ್ಯಾಪೀಠದವರು ಸರಕಾರದಿಂದ ಮತ್ತು ಲೋಕನಿಯುಕ್ತ ಸಂಸ್ಥೆಗಳಿಂದ ವರುವರುಷ ಆಯಾಯು ವಿದ್ಯಾಸಂಸ್ಥೆಗಳಿಗಾಗಿ ವೆಗ್ಗಳವಾಗಿ ಗ್ರಾಂಟನ್ನು ಪಡಕೊಳ್ಳಬೇಕು. ಯಾಕಂದರೆ ಕರ್ನಾಟಕದಲ್ಲಿ ವೀರಶೈವರು ಸರಕಾರಕ್ಕೂ ಲೋಕನಿಯುಕ್ತ ಸಂಸ್ಥೆಗಳಿಗೂ ತೆರಿಗೆ, ಕರಗಳ ರೂಪದಿಂದ ಹೆಚ್ಚಾಗಿ ಹಣವನ್ನು ಸಲ್ಲಿಸುತ್ತಿರುವದರಿಂದ ಆ ಪ್ರಮಾಣದಮೇರೆಗೆ ಅವರು ವೀರಶೈವ ಸಂಸ್ಕೃತಿ ಪ್ರಸಾರಕ್ಕಾಗಿ ಗ್ರಾಂಟ್ ಬೇಡುವ ಹಕ್ಕು ಅವರಿಗುಂಟು. ಆ ಪ್ರಕಾರ ಗ್ರಾಂಟು ಸಲ್ಲಿಸುವದಾದರೂ ಸರಕಾರದ ಮತ್ತು ಲೋಕನಿಯುಕ್ತ ಸಂಸ್ಥೆಗಳ ಆದ್ಯ ಕರ್ತವ್ಯವೇ ಆಗಿದೆ. ಇದಕ್ಕಾಗಿ ಸಮಾಜದ ಮುಂದಾಳುಗಳು ಒಂದೇ ಸವನೆ ಹೋರಾಡಬೇಕು.

( ಮುಂದುವರಿದುದು. )

---

## ವಚನ.

ಸಹಸ್ರಶೀರ್ಷಾ ಪುರುಷಃ। ಸಹಸ್ರಾಕ್ಷ ಸಹಸ್ರಪಾತ್ । ಎಂದೆನಿಸುವ ಲಿಂಗದೇವನ ಕಂಡೆನಯ್ಯಾ ಎನ್ನಕರಸ್ಥಲದಲ್ಲಿ. ಸ ಭೂಮಿಂ ವಿಶ್ವತೋ ವೃತ್ವಾ । ಅತ್ಯತಿಷ್ಠದ್ದಶಾಂಗುಲಂ । ಎಂದೆನಿಸುವ ಲಿಂಗದೇವನ ಕಂಡೆನಯ್ಯಾ ಎನ್ನ ಕರಸ್ಥಲದಲ್ಲಿ. ಅಯಂ ಮೆಹಸ್ತೋ ಭಗವಾನ್ ಬಸವಲಿಂಗ ಪ್ರಿಯ ಕಟ್ಟಿಯ ಬಸವೇಶ್ವರಾ ಎಂದೆನಿಸುವ ಲಿಂಗದೇವನ ಕಂಡೆನಯ್ಯಾ ಎನ್ನ ಕರಸ್ಥಲದಲ್ಲಿ.

---

# ಮಾದರಿಯ ಮಾಧ್ಯಮಿಕ ಶಾಲೆ.

**ಲೇಖಕಃ— ಓರ್ವಶಿಕ್ಷಕ.**

(ಹಿಂದಿನಿಂದ ಮುಂದೆ ಸಾಗಿದ್ದು)

## ಶಾರೀರಿಕ ಸಂಸ್ಕೃತಿ.

ಮೊದಲು ನಾವು ಬಾಲಕನ ಶಾರೀರಿಕ ಸಂಸ್ಕೃತಿಯ ಕಡೆಗೆ ಗಮನಿಸೋಣ. ಬಾಲಕನು ವ್ಯಾಯಾಮದ ಸಲುವಾಗಿ ಸ್ವಂತ ಅಡ್ಡಾಡಲಿಕ್ಕೆ ಹೋಗಬಹುದು. ಬಾವಿಯಲ್ಲಿ ಈಸಾಡಬಹುದು. 'ಸಾಮು ಜೂಟಾಕೈಸು'ಗಳನ್ನು ತೆಗೆಯಬಹುದು. ಆದರೆ ಸ್ವಂತಮಾಡುವ ವ್ಯಾಯಾಮವು ಶಾರೀರಿಕ ಶಿಕ್ಷಣವೆನಿಸುವದಿಲ್ಲ. ಅವುಗಳಿಂದ ಬಾಲಕನ ಶರೀರಕ್ಕೆ ಸಾಕಷ್ಟು ವ್ಯಾಯಾಮ ದೊರೆಯುವವೇನೋ ನಿಜ. ಆದರೆ ಶಾರೀರಿಕ ಶಿಕ್ಷಣದಲ್ಲಿ ಕಂಡುಬರುವಂಥ ಗುಣಾಂಶಗಳು ಅಂಥ ವ್ಯಾಯಾಮದಲ್ಲಿ ಕಂಡುಬರಲಾರವು. ಶಾರೀರಿಕ ಶಿಕ್ಷಣದಲ್ಲಿ ಶಿಸ್ತು, ಸಾಮೂಹಿಕ ಭಾವನೆ ( *Team spirit* ), ನಿಯಮ ಪಾಲನೆ, ಕ್ರೀಡಾಗೌರವ ( *Sportsmanship* ), ಉತ್ಸಾಹ, ಪಕ್ಷಾಭಿಮಾನ, ಮೊದಲಾದ ಗುಣಗಳು ಆಡುವವರಲ್ಲಿ ಉಂಟಾಗುತ್ತವೆ. ಇದಲ್ಲದೆ ಪಕ್ಷಾಂಧತೆ, ದುಷ್ಟ ಸ್ಪರ್ಧೆ, ನಿಯಮೋಲ್ಲಂಘನ, ದುಡುಕುತನ, ಮೊದಲಾದ ದುಷ್ಟ ಪ್ರವೃತ್ತಿಗಳಿಗೆ ಶಾರೀರಿಕ ಶಿಕ್ಷಣದಲ್ಲಿ ಸ್ಥಾನವಿಲ್ಲದಿರುವದರಿಂದ ಅವು ತಾವಾಗಿಯೇ ಕುಗ್ಗಿ ಹೋಗುವವು. ಶಾರೀರಿಕ ಶಿಕ್ಷಕರು ನಿಷ್ಪಕ್ಷಪಾತ ಬುದ್ಧಿಯುಳ್ಳವರಾಗಿ ಆಟದ ಗುಣಾಂಶಗಳನ್ನು ಪ್ರೋತ್ಸಾಹಿಸುತ್ತಲೂ ದೋಷಗಳನ್ನು ಖಂಡಿಸುತ್ತಲೂ ವಿವಿಧ ಆಟಗಳಲ್ಲಿ ಉತ್ಸಾಹ ಮನೋರಂಜನೆಗಳನ್ನು ಹುಟ್ಟಿಸುತ್ತಲೂ ಸಾಗಿದರೆ ಶಾರೀರಿಕ ಶಿಕ್ಷಣವು ವಿದ್ಯಾರ್ಥಿಗಳಿಗೆ ಭಾರವಾಗದೆ ವಿನೋದಕರವಾಗಿ, ಅದು ತಮಗೆ ಅವಶ್ಯವಾಗಿ ಬೇಕೆಂಬ ಸದ್ಭಾವನೆಯು ವಿದ್ಯಾರ್ಥಿಗಳ ಮನಸ್ಸಿನಲ್ಲಿ ಒಡಮೂಡುವದು. ಲಾಠಿ, ಲೇಝಿಮ್, ಡಂಬೆಲ್ಸ ಮೊದಲಾದ 'ಕಾಂಡಿವಲಿ' ಆಟಗಳನ್ನು ಬ್ಯಾಂಡಿನ ಜೊತೆಗೆ ಸಾಗಿಸಿದರೆ ಅದೊಂದು ಒಳ್ಳೆ ಮನೋರಂಜಕ ದೃಶ್ಯವಾಗುವದು. 'ಮಾರ್ಚಿಂಗ' ಮಾಡುವಾಗ ವೀರಾವೇಶದ ಪದಗಳನ್ನು ಬಾಲಕರು ಉತ್ಸಾಹದಿಂದ ಹಾಡಹತ್ತಿದರೆ ಅವರಿಗೆ ಶಾರೀರಿಕ ಪರಿಶ್ರಮವೇ ಅನಿಸುವದಿಲ್ಲ. ಅದೇ ಮೇರೆಗೆ

'ಕ್ಯಾಂಪ ಫಾಯರ್'ಗಳನ್ನು ಏರ್ಪಡಿಸಿ ವಿವಿಧ ಮನೋರಂಜಕವಾದ ಶಾರೀರಿಕ ಚಟುವಟಿಕೆಗಳನ್ನು ಜನರಿಗೆ ಪ್ರದರ್ಶಿಸಿದರೆ ಅದೆಂಥ ಕಣ್ಣಿನ ಹಬ್ಬವೋ !

## ಸ್ಕಾವುಟ್ ಶಿಕ್ಷಣ.

ಶಾರೀರಿಕ ಶಿಕ್ಷಣದ ಜೊತೆಗೆ ಸ್ಕಾವುಟ್ ಶಿಕ್ಷಣವನ್ನು ಸೇರಿಸಿದರೆ ಬಂಗಾರಕ್ಕೆ ಸುಗಂಧವನ್ನು ಬೆರಿಸಿದಂತಾಗುವದು. ಸ್ಕಾವುಟನಲ್ಲಿ ಮುಖ್ಯವಾಗಿ ಸ್ವಾವಲಂಬನ, ಪರೋಪಕಾರ, ಧೈರ್ಯ, ಸಾಹಸ ಮೊದಲಾದ ಉಚ್ಚ ಗುಣಗಳು ನೆಲೆಸಿರುತ್ತವೆ. ಉದಾಹರಣಾರ್ಥವಾಗಿ ಬಾಲಕನು ತನ್ನ ಬಟ್ಟೆಯನ್ನು ತಾನೇ ಸ್ವಚ್ಛವಾಗಿ ಒಗೆದುಕೊಂಡು ಇಸ್ತ್ರಿ ಮಾಡಿಕೊಂಡರೆ ಅದೇ ಸ್ವಾವಲಂಬನ; ಬೀದಿಯಲ್ಲಿ ತಪ್ಪಿಸಿಕೊಂಡ ಶಿಶುವನ್ನು ಎತ್ತಿಕೊಂಡು ಅದರ ತಾಯಿತಂದೆಗಳ ಪತ್ತೆ ಹಚ್ಚಿ ಅವರಿಗೆ ಒಪ್ಪಿಸುವದೇ ಪರೋಪಕಾರ; ಯಾವದಾದರೂ ಮನೆಗೆ ಬೆಂಕಿ ಹತ್ತಿದಾಗ ಒಳಗಿನವರ ಜೀವ ಉಳಿಸಲಿಕ್ಕೆ ಮುಂದುವರಿಯುವದು ಧೈರ್ಯ ಸಾಹಸದ ಕೆಲಸವು. ಇಂಥ ಉತ್ತಮ ಗುಣಗಳು ಸ್ಕಾವುಟ ಶಿಕ್ಷಣದಲ್ಲಿ ಅಡಕವಾಗಿರುವದರಿಂದ ಸ್ಕಾವುಟ ಶಿಕ್ಷಕರು ಚಿಕ್ಕ ಮಕ್ಕಳಲ್ಲಿ ಅವು ಬೇರೂರುವಂತೆ ಎಲ್ಲ ತರಹದ ಆಸ್ಪದಗಳನ್ನು ಒದಗಿಸಿ ಕೊಡಬೇಕು.

## ಶಾರೀರಿಕ ಸ್ಕೌಟ ಶಿಕ್ಷಣಗಳಿಗೆ ಅನಾದರ.

ಆದರೆ ಈಗಿನ ಬಹುಶಃ ಎಲ್ಲ ಮಾಧ್ಯಮಿಕ ಶಾಲೆಗಳಲ್ಲಿ ಶಾರೀರಿಕ ಶಿಕ್ಷಣ, ಸ್ಕೌವುಟ ಶಿಕ್ಷಣಗಳಿಗೆ ಬಹುಮಟ್ಟಿಗೆ ಅನಾದರವುಂಟಾದದ್ದು ಕಂಡು ಬರುತ್ತದೆ. ಹಾಕಿ, ಫುಟ್‌ಬಾಲ್, ಹಾಲಿಬಾಲ್ ಮೊದಲಾದ ಪಾಶ್ಚಾತ್ಯ ಆಟಗಳು 'ಕಾಂಡಿವಲಿ'ಯ ಆಟಪಾಟಗಳೂ ಏನೋ ಹಳೆಯ ಯಂತ್ರದಂತೆ ಸಾಗಿರುತ್ತವೆ, ಶಾರೀರಿಕ ಶಿಕ್ಷಕರಿಗೆ ಎಲ್ಲವನ್ನೂ ಸಾಗಿಸಿಕೊಂಡು ಹೋಗಲಿಕ್ಕೆ ಶಕ್ಯವಿಲ್ಲ. ಆದಕ್ಕೆ ಉಳಿದ ಶಿಕ್ಷಕರ ಸಹಾಯ ಸಹಕಾರಗಳಿಲ್ಲ. ಶಾರೀರಿಕ ಶಿಕ್ಷಣವು ಪರೀಕ್ಷಾ ವಿಷಯವಲ್ಲದ್ದರಿಂದ ಎಷ್ಟೋ ಶಿಕ್ಷಕರು ಅದರ ಕಡೆಗೆ ಉದಾಸೀನ ಮಾಡುವರು. ಶಿಕ್ಷಕರ ಉದಾಸೀನತೆಯನ್ನು ಕಂಡು ಬಾಲಕರು ಮನೆಯ ಹಾದಿ ಹಿಡಿಯುವರು. ಸ್ಕಾವುಟ ಶಿಕ್ಷಣವಂತೂ ಎಷ್ಟೋ ಶಾಲೆಗಳಲ್ಲಿ ನಾಮಶೇಷವಾ

ಗಿರುವದು. ಶಾಲೆಯಲ್ಲಿ ಕಲಿಸಲ್ಪಡುವ ಅನೇಕ ವಿಷಯಗಳ ತಲೆ ಭಾರದ ಮೂಲಕ ವಿದ್ಯಾರ್ಥಿಗಳಲ್ಲಿ ಜಿಗಟು ಇಲ್ಲದಂತಾಗಿ ಶಾರೀರಿಕ ಶಿಕ್ಷಣವೆಂದರೆ ಅನೇಕರಿಗೆ ವೈಗೆ ಮುಳ್ಳೇ ಬಂದಂತಾಗುತ್ತದೆ. ಶಿಕ್ಷಕ ರಲ್ಲಿ ೧೦೦ಕ್ಕೆ ೯೦ ಜನರು ಶಾರೀರಿಕ ಶಿಕ್ಷಣದ ಬದ್ಧ ವೈರಿಗಳಿರುತ್ತಾರೆ. ಅವರಿಗೆ ಸ್ವಂತ ಶಾರೀರಿಕ ಶಿಕ್ಷಣ ಪಡೆಯುವದು ಬೇಡ. ಹುಡುಗ ರನ್ನಾಡಿಸುವದೆಂದರೆ ಅವರಿಗೆ ತಲೆಬೇಸರ. ಹುಡುಗರನ್ನು ಆಡ ಹಚ್ಚಿ ಹರಟೆ ಹೊಡೆಯಲಿಕ್ಕೆ ಶಿಕ್ಷಕರ ಕೋಣೆಗೆ ಹೊರಟು ಹೋಗುವರು. ಆದುದರಿಂದ ಯಾವವೇ ಶಿಕ್ಷಣ ಸಂಸ್ಥೆಯವರಾದರೂ ಹೊಸದಾಗಿ ಶಿಕ್ಷ ಕರನ್ನು ನೇಮಿಸಿಕೊಳ್ಳುವಾಗ ಡಾಕ್ಟರ ಪರೀಕ್ಷೆ ಮಾಡಿಸಿ ಅವರು ೧ ತಿಂಗಳ ಸಶ್ರಮವಾದ ಶಾರೀರಿಕ ಶಿಕ್ಷಣ ಪಡೆದ ನಂತರವೇ ನೇಮಿಸಿ ಕೊಳ್ಳಬೇಕು. ಅಂದರೆ ದುರ್ಬಲರಾದವರು ಸಾಲೆಯ ಸನಿಹಕ್ಕೆ ಕಾಲಿ ಡುವದಿಲ್ಲ. ಇದಲ್ಲದೆ ಮಕ್ಕಳ ಶಾರೀರಿಕ ಶಿಕ್ಷಣದಲ್ಲಿ ಯಾವನಾದರೂ ಶಿಕ್ಷಕನು ಭಾಗವಹಿಸುವದಿಲ್ಲೆಂದು ಕಂಡು ಬಂದಲ್ಲಿ ಅಂಥವನಿಗೆ ಮೇಲ ಧಿಕಾರಿಗಳು ತಕ್ಕ ಶಾಸನವನ್ನು ಮಾಡಲೇಬೇಕು. ಅಂದರೇನೇ ಶಾರೀ ರಿಕ ಶಿಕ್ಷಣಕ್ಕೆ ಮಹತ್ವ ಬರುವದು. ಸ್ಕಾವುಟ್ ಶಿಕ್ಷಣವು ಈಗ ಕ್ರಮೇಣ ಸಾಯುತ್ತ ನಡೆದಿದ್ದರೂ ಅದರ ಪುನರುಜ್ಜೀವನವಾದರೆ ವಿದ್ಯಾರ್ಥಿ ಗಳಿಗೆ ಹೆಚ್ಚು ಫಲಪ್ರದವಾದೀತು.

## ಹಾಸ್ಟೆಲ್ ಫ್ರೀ ಬೋರ್ಡಿಂಗಗಳು.

ಬಾಲಕನ ಶಾರೀರಿಕ ಶಿಕ್ಷಣಕ್ಕೆ ಅನುಕೂಲವಾಗಿ ಆತನ ಆರೋ ಗ್ಯದ ಬೆಳವಣಿಗೆಯಾದರೂ ಅವಶ್ಯವಾಗಿರುತ್ತದೆ. ಬಾಲಕನ ಆರೋ ಗ್ಯಕ್ಕೆ ಸಾತ್ವಿಕ ಹಾಗೂ ಪೌಷ್ಟಿಕ ಆಹಾರವು ಅವಶ್ಯವಾಗಿ ಬೇಕು. ಬಾಲಕರ ತಾಯಿತಂದೆಗಳು ಅದೇ ಊರವರಾಗಿದ್ದರೆ ವಿದ್ಯಾರ್ಥಿಗಳಿಗೆ ಎಂಥ ಊಟ ಕೊಡಬೇಕು, ಎಷ್ಟು ಪ್ರಮಾಣ ಕೊಡಬೇಕು, ಹಾಲು ಎಷ್ಟು ಕೊಡಬೇಕು ಎಂಬ ಸಂಗತಿಗಳನ್ನು ಕಾರ್ಡಿನಲ್ಲಿ ಮುದ್ರಿಸಿ ಕಳಿಸಿ ಕೊಡಬೇಕು. ಆದರೆ ಪರಸ್ಥಳದಿಂದ ಬಂದ ವಿದ್ಯಾರ್ಥಿಗಳು ಖಾನಾ ವಳಿಯಲ್ಲಿ ಊಟ ಮಾಡುವದರಿಂದ ಆ ಆಹಾರವು ಅವರ ಆರೋಗ್ಯಕ್ಕೆ ಹಿತಕರವಾಗಲಾರದು. ಆದ್ದರಿಂದ ಯೋಗ್ಯ ಆಹಾರವನ್ನು ಒದಗಿಸಿ ಕೊಡುವ ಹಾಸ್ಟೆಲುಗಳನ್ನು ಶಾಲೆಗಳಿಗೆ ಜೋಡಿಸುವದು ಅತ್ಯವಶ್ಯಕ. ವಿದ್ಯಾರ್ಥಿಗಳು ಬಡವರಾಗಿದ್ದರೆ ಅಂಥವರಿಗೆ ಫ್ರೀ ಬೋರ್ಡಿಂಗುಗಳ

ಅನುಕೂಲತೆಯನ್ನು ಒದಗಿಸಿಕೊಡಬೇಕು. ಆದರೆ ಅವರಿಗೆ ಕೊಡುವ ಆಹಾರವು ಮಾತ್ರ ಹಾಲು, ತುಪ್ಪ, ಕಾಯಿಪಲ್ಲೆ, ಬೆಲ್ಲ, ಸಕ್ಕರೆ ಮೊದಲಾದ ಸಾತ್ವಿಕ ಹಾಗೂ ಪೌಷ್ಟಿಕ ಪದಾರ್ಥಗಳುಳ್ಳದ್ದಾಗಿರಬೇಕು. ಹಾಸ್ಟೆಲ್ಲಿನವರು ತಾವು ಶ್ರೀಮಂತರೆಂದು ಅನೇಕ ಮೋಜವಾನಿಗಳಿಗಾಗಿ ತಾಯಿತಂದೆಗಳ ದುಡ್ಡನ್ನು ಅನಾವ್ರಯವಾಗಿ ವೆಚ್ಚ ಮಾಡುವದೆಷ್ಟು ಅನುಚಿತವೋ, ಅಷ್ಟೇ ಫ್ರೀ ಬೋರ್ಡಿಂಗಿನವರು ಬಡವರೆಂದು ತಿರುಕರಿಗಿಂತಲೂ ಕಡೆಯಾಗಿ ಊಟ ಹಾಕಿ ಕೆಟ್ಟ ರೀತಿಯಿಂದ ನಡೆಯಿಸಿಕೊಳ್ಳುವದೂ ಅನುಚಿತವು. ಆದರೆ ಆ ಬಡಮಕ್ಕಳು ತಮ್ಮ ಮಕ್ಕಳೆಂದೇ ಭಾವಿಸಿ ಅವರ ಪಾಲನ ಪೋಷಣ ಶಿಕ್ಷಣಗಳನ್ನು ಪ್ರೋತ್ಸಾಹಿಸುವದು ಆಯಾಯ ಸಂಸ್ಥೆಗಳ ಚಾಲಕರಿಗೂ ಗೌರವ. ಸಮಾಜಕ್ಕೂ ಗೌರವ. ಬರೇ ಊಟದ ಪ್ರಶ್ನೆಯನ್ನು ಬಿಡಿಸಲಿಕ್ಕೆ ಮಾತ್ರ ಹಾಸ್ಟೆಲ್, ಫ್ರೀ ಬೋರ್ಡಿಂಗುಗಳನ್ನು ಸ್ಥಾಪಿಸಬೇಕೆಂದಲ್ಲ. ಬಾಲಕರಲ್ಲಿ ಪರಸ್ಪರ ಕೌಟುಂಬಿಕ ಪ್ರೇಮವನ್ನು ಬೆಳೆಯಲಿಕ್ಕೂ ಅವರಲ್ಲಿ ಸ್ವಚ್ಛತೆ, ಅಚ್ಚುಕಟ್ಟುತನ, ಶಿಸ್ತುಗಳನ್ನುಂಟುಮಾಡಲಿಕ್ಕೂ ಲೆಕ್ಕ ಪತ್ರ ವ್ಯವಹಾರದ ಸಂಗತಿಗಳನ್ನು ಮಾಹಿತಿ ಮಾಡಿಕೊಳ್ಳಲಿಕ್ಕೂ ಅವರಿಗೆ ದುರ್ವ್ಯಸನಗಳು ಅಂಟಿಕೊಳ್ಳದಂತೆ ನೋಡಿಕೊಳ್ಳಲಿಕ್ಕೂ ಉತ್ತಮ ಚಟಗಳ ಅಭ್ಯಾಸಕ್ಕೆ ಅನುವು ಮಾಡಿಕೊಡಲಿಕ್ಕೂ ಹಾಸ್ಟೆಲ್ ಫ್ರೀ ಬೋರ್ಡಿಂಗುಗಳ ಅವಶ್ಯಕತೆಯು ಹೆಚ್ಚಾಗಿರುತ್ತದೆ. ಅವರು ಕೂಡಿ ಆಡಬಹುದು, ಕೂಡಿ ಓದಬಹುದು, ಕೂಡಿ ವಿಷಯಗಳನ್ನು ಚರ್ಚಿಸಬಹುದು, ಕೂಡಿಕೊಂಡು ದೇವರಿಗೆ ಪ್ರಾರ್ಥನೆ ಮಾಡಬಹುದು. ಈ ಮೇರೆಗೆ ಸಾಮೂಹಿಕ ಜೀವನ ಸೌಂದರ್ಯವು ಪ್ರತಿನಿತ್ಯ ೨೪ ತಾಸುಗಳ ವರೆಗೆ ಬಾಲಕರಿಗೆ ದೊರೆಯುತ್ತದೆ. ಆದ್ದರಿಂದ ಮಾದರಿಯ ಶಾಲೆಗೆ ಹಾಸ್ಟೆಲ್, ಫ್ರೀ ಬೋರ್ಡಿಂಗುಗಳ ಅವಶ್ಯಕತೆಯು ಹೆಚ್ಚಾಗುತ್ತದೆ.

## ಶಾಲೆಯಲ್ಲಿ ಫಲಾಹಾರದ ಅಂಗಡಿ.

ಈಗಿನ ಎಷ್ಟೋ ವಿದ್ಯಾರ್ಥಿಗಳೂ ಶಿಕ್ಷಕರೂ ಚಹಾದ ಅಂಗಡಿಗಳ ದಾಸರಾಗಿ ಬಿಟ್ಟಿದ್ದಾರೆ. ಆದರಿಂದ ಅವರ ಶರೀರದ ಮೇಲೆ ಬಹಳ ಕೆಡಕು ಪರಿಣಾಮವಾಗುತ್ತದೆ. ಎಷ್ಟೋ ಸಲ ಚಹಾದಂಗಡಿಯ ಥಂಗಳ ಮತ್ತು ಕರಿದ ಪದಾರ್ಥಗಳ ಸೇವನೆಯಿಂದ ಬಾಲಕರ ಮತ್ತು ಶಿಕ್ಷ

ಕರ ಆರೋಗ್ಯವು ಕೆಟ್ಟು ಹೋಗುತ್ತದೆ. ಚಹಾವಂತೂ ಪ್ರಕೃತಿಗೆ ಬಹಳೇ ಕೆಡಕೆಂದು ಬೇರೆ ಹೇಳಬೇಕಾಗಿಲ್ಲ. ಆದ್ದರಿಂದ ಶಾಲೆಯ ಕಂಪಾವುಂಡಿನಲ್ಲಿ ಒಂದು ಹಣ್ಣಿನ, ಹಾಲಿನ ಮತ್ತು ತಾಜಾ ತಿನಸುಗಳನ್ನು ಸಿದ್ಧಗೊಳಿಸುವ ಒಂದು ಅಂಗಡಿಯನ್ನು ಸ್ಥಾಪಿಸುವದು ವಿದ್ಯಾರ್ಥಿಗಳ ಆರೋಗ್ಯಕ್ಕೆ ಹಿತಕರವು. ಮಧ್ಯಾಹ್ನದ ಸೂಟಿಯಲ್ಲಿ ಹುಡುಗರಿಗೆ ಏನಾದರೂ ತಿನಸುಗಳು ಬೇಕಾಗಿದ್ದರೆ ಸಕಾಲಕ್ಕೆ ಅವುಗಳನ್ನು ದೊರೆಯುವಂತೆ ಮಾಡಿದರೆ ಶಾಲೆಗೆ ಅದೆಷ್ಟೋ ಭೂಷಣ.

## ವೈದ್ಯ ಪರೀಕ್ಷೆ.

ಎಷ್ಟೋ ಮಕ್ಕಳು ಅನೇಕ ಪ್ರಕಾರದ ರೋಗಗಳಿಂದ ಬಳಲುತ್ತಿರುತ್ತಾರೆ. ಅವರ ತಾಯಿತಂದೆಗಳು ಊರವರಾಗಿದ್ದರೆ ಡಾಕ್ಟರರಿಗೆ ತೋರಿಸಿ ಔಷಧೋಪಚಾರ ಮಾಡಬಹುದು. ಆದರೆ ಎಷ್ಟೋ ಗುಪ್ತ ರೋಗಗಳು ವಿದ್ಯಾರ್ಥಿಗಳಿಗೆ ಅಂಟಿಕೊಂಡಿರುತ್ತವೆ. ಅವು ಪಾಲಕರ ಅಥವಾ ತಾಯ್ತಂದೆಗಳ ಗಮನಕ್ಕೆ ಬರುವದಿಲ್ಲ. ಪರಸ್ಥಳದಿಂದ ಬಂದ ಅನೇಕ ವಿದ್ಯಾರ್ಥಿಗಳು ಒಂದಿಲ್ಲೊಂದು ರೋಗದಿಂದ ಬಳಲುತ್ತಿರುತ್ತಾರೆ. ಅವರ ಆರೈಕೆ ಮಾಡಲು ಯಾರೂ ದಿಕ್ಕಿರುವದಿಲ್ಲ. ಆದ್ದರಿಂದ ಬಾಲಕರ ಆರೋಗ್ಯ ಪರೀಕ್ಷೆ ಮಾಡುವದರ ಸಲುವಾಗಿ ಒಬ್ಬ ಯೋಗ್ಯ ಡಾಕ್ಟರರನ್ನು ನೇಮಿಸಿ ದಿನಾಲು ೧೦ ಕೇಸುಗಳನ್ನಾದರೂ ಅವರು ತಪಾಸು ಮಾಡಿ ಹೋಗುವಂತೆ ವ್ಯವಸ್ಥೆ ಇಡಬೇಕು. ಅಂದರೆ ಮಕ್ಕಳ ಆರೋಗ್ಯವು ಕೆಟ್ಟಿದ್ದರೆ ಶೀಘ್ರವೇ ಉಪಾಯುಗಳನ್ನು ಕೈಕೊಳ್ಳಲು ಅನುಕೂಲವಾಗುವದು.

## ಪಾಯಖಾನೆ-ಮೂತ್ರಿ ಮತ್ತು ನೀರಿನ ಟಾಕಿಗಳು.

ಶಾಲೆಯ ಕಂಪೌಂಡಿನಲ್ಲಿ ಶಾಲೆಯ ಕಟ್ಟಡದಿಂದ ಸಾಕಷ್ಟು ಅಂತರದಲ್ಲಿ ಪಾಯಿಖಾನೆ ಮೂತ್ರಿಗಳನ್ನು ಕಟ್ಟಿಸಬೇಕು. ಅಂದರೆ ವಿದ್ಯಾರ್ಥಿಗಳಿಗೂ ಶಿಕ್ಷಕರಿಗೂ ಪ್ರಸಂಗ ಬಂದಾಗ ಅನುಕೂಲವಾಗುವದು. ಅವು ಇಲ್ಲದಿದ್ದರೆ ಶಾಲೆಯ ಕಂಪೌಂಡೆಲ್ಲ ಮಲಿನವಾಗುವ ಸಂಭವವುಂಟು. ಒಂದು ದೊಡ್ಡ ವೃಕ್ಷದ ನೆರಳಿನಲ್ಲಿ ಹೌದಿನ ಟಾಕಿಯನ್ನಿರಿಸಿ ಅಥವಾ ಹೌದನ್ನು ಕಟ್ಟಿಸಿ ಅದರ ಸುತ್ತಲೂ ನೆಲಕ್ಕೆ ಪರಸಿ

ಮಾಡಿಸಿಬಿಟ್ಟರೆ ಮಧ್ಯಾಹ್ನ ಸೂಟಿಯಲ್ಲಿ ಚಿಕ್ಕ ಬಾಲಕರು ಅಲ್ಲಿ ಕುಳಿತು ತಮ್ಮ ಬುತ್ತಿಯನ್ನು ಸೊಗಸಾಗಿ ಊಟಮಾಡಲು ಅನುಕೂಲವಾಗು ವದು. ಶಾಲೆಯ ಪ್ರತಿಯೊಂದು ಮೂಲಿಗೂ ನೀರು ತುಂಬಿದ ಭಾಂಡೆ ವಾಟಿಗಳನ್ನು ಇರಿಸಿ ಬಾಲಕರಿಗೆ ಅನುಕೂಲ ಮಾಡಿ ಕೊಡಬೇಕು.

## ಬೌದ್ಧಿಕ ಶಿಕ್ಷಣ.

ಈಗಿನ ಅಭ್ಯಾಸ ಪತ್ರಿಕೆಯ ಪ್ರಕಾರ ವಿದ್ಯಾರ್ಥಿಗಳಿಗೆ ರುಚಿಸಲಿ ಅಥವಾ ರುಚಿಸದಿರಲಿ ಅನೇಕ ವಿಷಯಗಳು ಕಲಿಸಲ್ಪಡುತ್ತಾ ಇವೆ. ಆದರೆ ಆ ಎಲ್ಲ ವಿಷಯಗಳಲ್ಲಿಯೂ ವಿದ್ಯಾರ್ಥಿಗೆ ಗತಿಯುಂಟಾಗಲಾ ರದು. ಅವನಿಗೆ ಅಭಿರುಚಿಯಿದ್ದ ವಿಷಯಗಳಲ್ಲಿ ಮಾತ್ರ ಗತಿಯುಂ ಟಾಗಿ ಉಳಿದ ವಿಷಯಗಳು ತಲೆಬೇಸರವಾಗಿ ಹಾಗೇ ಕಚ್ಚಾ ಉಳಿ ಯುವವು. ಆದರೆ ಎಲ್ಲ ವಿಷಯಗಳು ವಿದ್ಯಾರ್ಥಿಯ ಜೀವನಕ್ಕೆ ಅವ ಶ್ಯವೆಂತಲೂ ಅಲ್ಲ. ಅರ್ಥದ ಮರ್ಮವನ್ನರಿಯದ ವಿಷಯಗಳನ್ನೋದಿ ಹುಡುಗರು ಗಿಳಿಗಳಾಗುತ್ತಾರೆ. ಪರೀಕ್ಷೆಯೆಂಬ ಕಾಳರಕ್ಕಸಿಯ ದನ ಡೆಗೆ ವ್ಯರ್ಥ ಬಲಿ ಬೀಳುತ್ತಾರೆ. ಬಹಳ ಓದಿ ಓದಿ ತಲೆ ಕೆಟ್ಟು, ಆರೋಗ್ಯ ಕೆಟ್ಟು, ಅಲ್ಪಾಯುಗಳಾಗುತ್ತಾರೆ. ಬೇಡಾದ ವಿಷಯಗಳನ್ನು ಕಲಿಯಲು ಬಲವಂತ ಪಡಿಸಿದರೆ ಬಾಲಕನು ಎದೆ ಬಡಕೊಂಡು ಎಲ್ಲ ವಿಷಯಗಳಲ್ಲಿಯೂ ಸರ್ವಸಾಧಾರಣ ಪ್ರಗತಿಯುಳ್ಳವನಾಗುವನು. ಆದ್ದರಿಂದ ವಿದ್ಯಾರ್ಥಿಗೆ ಹೆಚ್ಚಿಗೆ ವಿಷಯಗಳನ್ನು ಪರೀಕ್ಷೆಗಿಡುವದು ಆತನ ಶಾರೀರಿಕ ಹಾಗೂ ಮಾನಸಶಾಸ್ತ್ರದೃಷ್ಟಿಯಿಂದ ಹಿತಕರವಲ್ಲ. ಆದ್ದರಿಂದ ಕೆಳಗೆ ಕಾಣಿಸಿದ ೫ ವಿಷಯಗಳಲ್ಲಿ ಮಾತ್ರ ಪರೀಕ್ಷೆ ಕಟ್ಟಲು ವಿದ್ಯಾರ್ಥಿಗೆ ಆಸ್ಪದವಿರಬೇಕು.

(೧) ಮಾತೃಭಾಷೆ (ಅಗತ್ಯ)
(೨) ರಾಷ್ಟ್ರಭಾಷೆ (ಅಗತ್ಯ)
(೩) ಸಾಮಾನ್ಯ ಮಾತೃಭಾಷೆ
(೪) ಒಂದು ಕೈಗಾರಿಕೆ (ಅಗತ್ಯ)
(೫) ಸನಾತನ ಭಾಷೆ
(೬) ಇತಿಹಾಸ
(೧೩) ರಸಾಯನ ಶಾಸ್ತ್ರ
(೧೪) ಪ್ರಾಣಿ ಶಾಸ್ತ್ರ
(೧೫) ವನಸ್ಪತಿ ಶಾಸ್ತ್ರ
(೧೬) ಇಂದ್ರಿಯ ವಿಜ್ಞಾನ ಶಾಸ್ತ್ರ
(೧೭) ಆರೋಗ್ಯ ಶಾಸ್ತ್ರ
(೧೮) ಲೇಖನ ಕಲೆ

(೭) ಭೂಗೋಲ
(೮) ಅಂಕಗಣಿತ
(೯) ಬೀಜಗಣಿತ
(೧೦) ಭೂಮಿತಿ
(೧೧) ಜಮಾಖರ್ಚು
(೧೨) ಪದಾರ್ಥವಿಜ್ಞಾನ ಶಾಸ್ತ್ರ
(೧೯) ಗಾಯನ ಕಲೆ
(೨೦) ನಾಟ್ಯಕಲೆ
(೨೧) ಕಾವ್ಯರಚನಾ ಕಲೆ
(೨೨) ಗಮಕ ಕಲೆ
(೨೩) ಒಕ್ಕಲುತನ
(೨೪) ವ್ಯಾಪಾರ.

ಈಗ *Jack of all trades is the master of none* ಅಂದರೆ "ಎಲ್ಲಾ ಬಲ್ಲಪ್ಪಾ ಕೇಳಿದರೆ ಕಲ್ಲಪ್ಪಾ" ಎಂಬ ಪರಿಸ್ಥಿತಿಯು ಕಂಡು ಬರುತ್ತಿದೆ. ಆದ್ದರಿಂದ ಬಾಲಕರು ಇಂಗ್ಲಿಷ ೧ನೇ ಇಯತ್ತೆಗೆ ಬಂದ ಕೂಡಲೆ ತಮ್ಮ ಮನಸ್ಸಿಗೆ ರುಚಿಸುವ ೫ ವಿಷಯಗಳನ್ನಾರಿಸಿ ಕೊಳ್ಳಲಿಕ್ಕೆ ಸ್ವಾತಂತ್ರ್ಯವನ್ನು ಕೊಟ್ಟು ಆ ಪ್ರಕಾರ ಆ ವಿಷಯಗಳಲ್ಲಿ ಅವರಿಗೆ ಒಳ್ಳೇ ಶಿಕ್ಷಣ ಕೊಡಬೇಕು. ಅಂದರೆ ಶಿಕ್ಷಣವು ಹೆಚ್ಚು ಫಲಕಾರಿಯಾಗುವದು. ಪರೀಕ್ಷೆಗಾಗಿ ಗಿಳಿಯಂತೆ ಪಾಠಮಾಡುವ ಮತ್ತು ಆರೋಗ್ಯವನ್ನು ಕೆಡಿಸಿಕೊಳ್ಳುವ ಅನಿಷ್ಟಪ್ರಸಂಗವನ್ನು ತಪ್ಪಿಸಿ ದಂತಾಗುವದು. ಆದರೆ ಪ್ರತಿಯೊಂದು ವಿಷಯದಲ್ಲಿ ವಿದ್ಯಾರ್ಥಿಗೆ ಸ್ವಲ್ಪಿಲ್ಲ ಸ್ವಲ್ಪ ಜ್ಞಾನವಿರುದದು ಅವಶ್ಯವೆಂದು ತಿಳಿದರೆ ಆಯಾಯ ವಿಷಯಗಳ ಮೇಲೆ ತಜ್ಞ ಶಿಕ್ಷಕರಿಂದ ವ್ಯಾಖ್ಯಾನ ಮ್ಯಾಜಿಕ್‌ಲ್ಯಾಂಟರ್ನ ಲೆಕ್ಚರ್ಸಗಳ ಮುಖಾಂತರ ಸಾಮೂಹಿಕ ರೀತಿಯಲ್ಲಿ ವಿದ್ಯಾರ್ಥಿಗಳಿಗೆ ಜ್ಞಾನವನ್ನು ಮಾಡಿಕೊಡಬಹುದು. ಆದರೆ ಆ ವಿಷಯಗಳು ಪರೀಕ್ಷೆ ಗಾಗಿ ಇರಕೂಡದು.

(ಮುಂದುವರಿವುದು.)

---

## ನಿವೃತ್ತ ಮುಖ್ಯ ನ್ಯಾಯಾಧೀಶರಾದ ರಾಜಧರ್ಮ ಪ್ರವೀಣ ದಿವಾನಬಹಾದ್ದೂರ ಶ್ರೀಮಾನ್ ಪಿ. ಮಹದೇವಯ್ಯ ಬಿ. ಎ. ಬಿ. ಎಲ್.

### ಇವರ ಭಾಷಣ.



ಬೆಂಗಳೂರು ಚಿಕ್ಕಪೇಟೆ ಶ್ರೀಮಹಾಂತಿನ ಮಠದಲ್ಲಿ ಮೈಸೂರು ಸಂಸ್ಥಾನದ ದಿವಾನರವರಾದ ಪ್ರಧಾನ ಶಿರೋಮಣಿ ಶ್ರೀಮಾನ್ ಎನ್. ಮಾಧವರಾವ ಬಿ. ಎ. ಬಿ. ಎಲ್. ಸಿ. ಐ. ಇ. ಇವರ ಅಧ್ಯಕ್ಷತೆಯಲ್ಲಿ ತಾ॥ ೨೯-೩-೧೯೪೩ನೇ ದಿನ ಏರ್ಪಡಿಸಿದ್ದ ರಾಷ್ಟ್ರೀಯ ಪ್ರಾರ್ಥನೆಯ ದಿನಾಚರಣೆಯ ಸಂಬಂಧವಾದ ಸಾರ್ವಜನಿಕ ಮಹಾಸಭೆಯಲ್ಲಿ ರಾಜ ಧರ್ಮ ಪ್ರವೀಣ ದಿವಾನ್‌ಬಹಾದ್ದೂರ ಪಿ. ಮಹದೇವಯ್ಯ ಬಿ. ಎ. ಬಿ. ಎಲ್, ಇವರು ಮಾಡಿದ ಸ್ವಾಗತ ಭಾಷಣದಲ್ಲಿ ವೀರಶೈವ ಮತ ಪುರಾತನತ್ವದ ಸಂಬಂಧವಾಗಿ ಮತ್ತು ಅದರ ವೈಶಿಷ್ಟ್ಯದ ಸಂಬಂಧ ವಾಗಿ ಮನನೀಯವಾಗಿ ವಿವೇಚನೆಯು ಇರುವದರಿಂದ ಅದಕ್ಕೆ ಸಂಬಂಧಿಸಿದ ಅವರ ಭಾಷಣದ ಭಾಗವನ್ನು ನಾವು ವಾಚಕರ ಅವಗಾ ಹನೆಗೋಸ್ಕರ ಇಲ್ಲಿ ಕೊಟ್ಟಿದ್ದೇವೆ. ಅವರು ತಮ್ಮ ಭಾಷಣದ ಆರಂಭ ದಲ್ಲಿ ಸಮಾರಂಭದ ಅಧ್ಯಕ್ಷರಿಗೆ ವಂದನೆಗಳನ್ನು ಅರ್ಪಿಸುತ್ತ ಬ್ರಿಟಿಶರಿಗೆ ಜಯವನ್ನು ಕೋರುತ್ತ ಮುಂದೆ ನುಡಿದುದು ಏನೆಂದರೆ—

"ಭಗವಾನ್ ಶ್ರೀ ರೇಣುಕಾಚಾರ್ಯರ ಶುಭನಾಮವು ವೀರಶೈವ ರಿಗೆ ವಿಜಯದ ಪರ್ಯಾಯ ಶಬ್ದವಾಗಿದೆ. ಪವಿತ್ರರಾದ ಶ್ರೀ. ಆಚಾ ರ್ಯರು ವೀರಶೈವ ಮತಸ್ಥಾಪಕರಾದ ಸುಪ್ರಸಿದ್ಧ ಪಂಚಾಚಾರ್ಯರಲ್ಲಿ ಒಬ್ಬರಾಗಿದ್ದರು. ಮದರಾಸ ಸರ್ಕಾರದ ಸಿವಿಲ್ ಸರ್ವಿಸಿನಲ್ಲಿ ಕೆಲಸ ಮಾಡುತ್ತಿದ್ದ ಸುಪ್ರಸಿದ್ಧ ತೆಲಗು ಪಂಡಿತರಾದ ದಿವಂಗತ ಶ್ರೀ. ಸಿ. ಪಿ. ಬ್ರೌನ್ ಅವರು ಪ್ರೊ. ಎಚ್. ಎಚ್. ವಿಲ್ಸನ್‌ರವರ ಕೋರಿಕೆಯಂತೆ ಈ ವೀರಶೈವ ಸಿದ್ಧಾಂತದ ವಿಷಯವಾಗಿ ಹೆಚ್ಚು ಪರಿಶ್ರಮವನ್ನು ಪಡೆದು ಮದರಾಸ್ ಜರ್ನಲ್ ಆಫ್ ಲಿಟರೇಚರ್ ಅಂಡ್ ಸೈನ್ಸ್ (*Madras Journal of Literature and Science Vol. XI*) ಎಂಬ ಗ್ರಂಥದ ಹನ್ನೊಂದನೆಯ ಸಂಪುಟದಲ್ಲಿ ಒಂದು ಲೇಖನವನ್ನು ಪ್ರಕಟ

ಮಾಡಿದರು. ಈ ಪ್ರಬಂಧದಲ್ಲಿ ಆ ಪ್ರಖ್ಯಾತ ವಿದ್ವನ್ಮಣಿಗಳು ಶ್ರೀ ರೇಣುಕಾಚಾರ್ಯರ ಮತ್ತು ಇತರ ಆಚಾರ್ಯರ ಜೀವನ ಚರಿತ್ರೆಯ ವಿಷಯವನ್ನು ಹೇಳಿರುವುದಲ್ಲದೆ ವೀರಶೈವ ತತ್ವಸಿದ್ಧಾಂತದ ಕೆಲವು ಸ್ವರೂಪಗಳನ್ನು ಪ್ರಾಚೀನ ಗ್ರೀಕರ ತತ್ವಸಿದ್ಧಾಂತದೊಡನೆ ಹೋಲಿಸಿರುತ್ತಾರೆ. ಬ್ರಹ್ಮಸೂತ್ರಗಳ ಮೇಲೆ ವೀರಶೈವ ಸಿದ್ಧಾಂತದ ದೃಷ್ಟಿಯಿಂದ ವ್ಯಾಖ್ಯಾನರೂಪವಾಗಿ ಶ್ರೀಪತಿ ಪಂಡಿತರಿಂದ ರಚಿಸಲ್ಪಟ್ಟಿರುವ "ಶ್ರೀಕರಭಾಷ್ಯ" ವೆಂಬ ಮಹಾ ಗ್ರಂಥಕ್ಕೆ ನನ್ನ ಮಿತ್ರರಾದ ರಾಜಚರಿತವಿಶಾರದ ರಾವ್ ಬಹದ್ದೂರ್ ಶ್ರೀಮಾನ್ ಸಿ. ಹಯವದನರಾವ ಬಿ. ಎ., ಬಿ. ಎಲ್ ರವರು ಸುಪ್ರಖ್ಯಾತ ಟೀಕಾರೂಪವಾದ ವಿದ್ವತ್ಪರಿಪೂರ್ಣವಾದ ದೀರ್ಘ ಪ್ರಸ್ತಾವನೆಯನ್ನು (introduction) ಬರೆದಿದ್ದಾರೆ. ವಿಮರ್ಶಾತ್ಮಕ ಈ ವ್ಯಾಖ್ಯಾನವು ಪಾಶ್ಚಾತ್ಯ ಮತ್ತು ಪೌರಸ್ತ್ಯ ದೇಶಗಳ ಸುಪ್ರಸಿದ್ಧ ಪಂಡಿತರಾದ ಪ್ರೊ॥ ಬ್ಯಾರಡೇಲ ಕೀತ್ (Prof, Barreidale Keith.) ಮೊದಲಾದ ಮಹನೀಯರ ಮೆಚ್ಚುಗೆಯನ್ನು ಪಡೆದಿದೆ. ಈ ಮಹಾ ಗ್ರಂಥದಲ್ಲಿ ರೇಣುಕಾಚಾರ್ಯರ ಜ್ಞಾನಭಂಡಾರದ ಆಳನೀಳಗಳನ್ನು ಸಹ ನೋಡಬಹುದು. ಕಡೂರ ಜಿಲ್ಲೆಯಲ್ಲಿರುವ ಶ್ರೀ ರೇಣುಕಾಚಾರ್ಯರ ಪೀಠವಾದ ಶ್ರೀ ಬಾಳೆಹೊನ್ನೂರು ಸಂಸ್ಥಾನದ ಮತ್ತು ವೀರಶೈವಮತ ಸಿದ್ಧಾಂತದ ವಿಷಯಗಳು, ಮೈಸೂರು ಸರ್ಕಾರದವರು ಪ್ರಕಟಿಸಿರುವ ೧೯೪೧ನೆಯ ಇಸವಿಯ ಜನಗಣತಿಯ ವರದಿಯಲ್ಲಿ (The Mysore Census Report. ೧೯೪೧) ಮುದ್ರಿತವಾಗಿವೆ.

ಅತ್ಯಂತ ಪ್ರಾಚೀನವಾದ "ಸಿದ್ಧಾಂತ ಶಿಖಾಮಣಿ' ಎಂಬ ಮತಗ್ರಂಥದಲ್ಲಿ ಶ್ರೀ ರೇಣುಕಾಚಾರ್ಯರು ಪ್ರಸಿದ್ಧ ಮಹರ್ಷಿಗಳಾದ ಪೂಜ್ಯ ಅಗಸ್ತ್ಯರಿಗೆ ವೀರಶೈವಮತ ಸಿದ್ಧಾಂತ ತತ್ವಗಳನ್ನು ಉಪದೇಶ ಮಾಡಿದರೆಂದು ತಿಳಿದುಬರುತ್ತದೆ. ಅಷ್ಟೇ ಅಲ್ಲದೆ ಶ್ರೀ ರೇಣುಕಾಚಾರ್ಯರು "ಚಂದ್ರಮೌಳೀಶ್ವರ" ಲಿಂಗವನ್ನು ಸುಪ್ರಖ್ಯಾತರಾದ ಶ್ರೀ ಶಂಕರಾಚಾರ್ಯರಿಗೆ ಅನುಗ್ರಹಿಸಿದ್ದರೆಂಬ ವಿಷಯಕ್ಕೆ ಅನೇಕ ಪ್ರಮಾಣಗಳು ದೊರೆತಿವೆ. ಅವುಗಳಲ್ಲಿ ಮುಖ್ಯವಾದವುಗಳನ್ನು ಈ ಕೆಳಗೆ ಹೇಳಲಾಗಿದೆ.—

೧. ಶ್ರೀ ಶೃಂಗೇರಿಮಠದ ಪುಸ್ತಕ ಭಂಡಾರದಲ್ಲಿ "ಗುರುವಂಶ ಕಾವ್ಯ" ಎಂಬ ಗುರುಪರಂಪರೆಯ ಚರಿತ್ರೆಗಳನ್ನು ಒಳಗೊಂಡ ಗ್ರಂಥ.

ನೇಪಾಳ, ಕಾಶ್ಮೀರ, ಕಾಶಿ, ಉಜ್ಜಯನಿ, ಚೋಳ ಇತ್ಯಾದಿ ದೇಶಗಳ ರಾಜರುಗಳು ವೀರಶೈವಮತದ ಅನನ್ಯ ಭಕ್ತರಾಗಿದ್ದರೆಂದು ಪ್ರಾಚೀನ ಶಾಸನಗಳಿಂದ ತಿಳಿದುಬರುತ್ತದೆ. ಬೊಂಬಾಯಿ ಪ್ರಾಂತದ ರಾಯಲ ಏಷಿಯಾಟಿಕ ಸೊಸೈಟಿಯ ಹನ್ನೊಂದನೆಯ ರಿಪೋರ್ಟಿನಲ್ಲಿ ಕ್ರಿ. ಶ. ಹತ್ತನೇ ಶತಮಾನದಲ್ಲಿಯೂ ಸಹ ಆ ಪ್ರಾಂತದ ಅನೇಕ ರಾಜರು ವೀರ ಶೈವಮತಕ್ಕೆ ಬಹಳ ಗೌರವವನ್ನು ಕೊಡುತ್ತಿದ್ದರೆಂಬುದನ್ನು ಸೂಚಿ ಸುವ ಶಾಸನಗಳಿವೆ. ಮತ್ತು ದಕ್ಷಿಣ ದೇಶದಲ್ಲಿ ಕ್ರಿ ಶ. ಆರನೆಯ ಶತ ಮಾನದಲ್ಲಿ "ಅತ್ಯಂತರಾಮ", "ರಾಜಸಿಂಹ", "ಗುಣಭಾರ" ಮೊದ ಲಾದ ಪಲ್ಲವರಾಜರು ವೀರಶೈವರಾಗಿದ್ದರೆಂಬುದನ್ನು ತಿಳಿಸುವ ಶಾಸನ ಗಳಿವೆ. ತಮ್ಮೆಲ್ಲರಿಗೂ ತಿಳಿದಿರುವಂತೆ ನಮ್ಮ ಮೈಸೂರು ರಾಜಮನೆ ತನದವರೂ ಕ್ರಿ. ಶ. ೧೩೯೯ ರಿಂದ ೧೬೧೦ರ ವರೆಗೆ ವೀರಶೈವ ಮತಾ ನುಯಾಯಿಗಳಾಗಿದ್ದರು. ಕೊಡಗಿನ ಮತ್ತು ನಗರರಾಜ್ಯದ ರಾಜರೂ ಸಹ ವೀರಶೈವರಾಗಿದ್ದರು.

( ಮುಂದುವರಿಯುವುದು. )

---

## ಸ್ಫುಟ ವಿಚಾರಗಳು.

---

(೧) ಶಿವಾನುಭವ ಪತ್ರಿಕೆಯು ಈ ವರೆಗೆ ವೀರಶೈವ ಸಂಸ್ಕೃತಿ ಸಂಶೋಧನೆಯ ಮತ್ತು ವೀರಶೈವ ಗ್ರಂಥಪ್ರಕಟನೆಯ ಕಾರ್ಯಗಳನ್ನು ಮಾಡುತ್ತ ಬಂದಿರುತ್ತದೆ. ಆದ್ದರಿಂದ ವೀರಶೈವ ಮತ ತತ್ವವಿಚಾರಗಳ ನಿರೂಪಣೆಗೆ ಅದರಲ್ಲಿ ಮಹತ್ವಸ್ಥಾನವು ಕೊಡಲ್ಪಟ್ಟಿತ್ತು. ಈ ಕಾರ್ಯ ವನ್ನು ಅದು ಇನ್ನು ಮುಂದಾದರೂ ಮುಂದುವರಿಸುತ್ತಲೇ ಇರುವದು. ಆದರೆ ಈಚೆಗೆ ಪೇಪರ ಕಂಟ್ರೋಲರರು ಈ ಪತ್ರಿಕೆಗೆ ಗೊತ್ತುಪಡಿಸಿದ ಕಾಗದದ ಪ್ರಮಾಣವು ಅತ್ಯಲ್ಪವಾಗಿರುವದರಿಂದ ಅದರ ಪುಟಗಳ ಸಂಖ್ಯೆ ಯನ್ನು ಬಹಳ ಕಡಿಮೆ ಮಾಡಬೇಕಾಗಿದೆ. ಆದರೆ ಕೆಲವು ದಿವಸ ಗಳಲ್ಲಿ ಈ ಸ್ಥಿತಿಯು ಉಳಿಯದೆ ಹೆಚ್ಚಿಗೆ ಕಾಗದಗಳು ದೊರೆಯಬಹು ದೆಂದು ನಾವು ಆಶಿಸಿದ್ದೇವೆ. ಆ ಸಮಯವು ಬಂದಕೂಡಲೆ ನಾವು

ಮೊದಲಿಂತೆ ಪುಟ ಸಂಖ್ಯೆಗಳನ್ನು ಹೆಚ್ಚಿಸಿ ಅನೇಕ ಬಗೆಯ ವಿಷಯ ಗಳನ್ನು ಇದರಲ್ಲಿ ಮೊದಲಿನಂತೆ ನಿರೂಪಿಸುತ್ತ ಹೋಗುವೆವು. ಆದರೂ ಪತ್ರಿಕೆಯ ಈಗಿನ ಪುಟಗಳಲ್ಲಿಯೇ ವೀರಶೈವ ಸಮಾಜಕ್ಕೆ ಸಂಬಂಧಿ ಸಿದ ಅನೇಕ ಪ್ರಚಲಿತ ಮಹತ್ವದ ವಿಷಯಗಳ ಬಗ್ಗೆ ವಿವೇಚನೆಯನ್ನು ಮಾಡಲೆಣಿಸಿದ್ದೇವೆ.

ವೀರಶೈವ ತತ್ವ ಸಂಶೋಧನೆಯ ಕಾರ್ಯವು ಎಷ್ಟು ಮಹತ್ವ ವಾದದ್ದೋ ಅಷ್ಟೇ ಅವುಗಳ ಪ್ರಸಾರವಾದರೂ ಮಹತ್ವದ್ದಿರುತ್ತದೆ. ಈ ಕಾರ್ಯವನ್ನು ವೀರಶೈವ ಸಮಾಜದವರು ಕೆಳಗೆ ಕಾಣಿಸಿದ ಮಾರ್ಗ ಗಳಿಂದ ಮಾಡುವದು ಶಕ್ಯವಿರುತ್ತದೆ. (೧) ಶಿವಾನುಭವ ಸಂಘಗಳು (೨) ವೀರಶೈವ ಮಠಗಳು (೩) ವೀರಶೈವ ಪಾಠಶಾಲೆಗಳು (೪) ವಿದ್ಯಾರ್ಥಿ ನಿಲಯಗಳು (೫) ವೀರಶೈವರು ನಡಿಸುತ್ತಿರುವ ಶಿಕ್ಷಣಾಲಯಗಳು. ಇವು ಗಳ ಮೂಲಕ ಈ ಕಾರ್ಯವನ್ನು ಮುಂದುವರಿಸಬಹುದಾಗಿದೆ. ಈ ಸಂಸ್ಥೆ ಗಳ ದ್ವಾರಾ ವೀರಶೈವ ಸಂಸ್ಕೃತಿಯನ್ನು ಕರ್ನಾಟಕದಲ್ಲಿ ಪ್ರಸಾರಪಡಿಸು ವದು ಶಕ್ಯವಿರುತ್ತದೆ. ಈ ದೃಷ್ಟಿಯನ್ನಿಟ್ಟುಕೊಂಡು ಬರೆದ ಲೇಖಗಳಿಗೆ ನಾವು ಇನ್ನು ಮುಂದೆ ಪತ್ರಿಕೆಯಲ್ಲಿ ಮಹತ್ವದ ಸ್ಥಾನವನ್ನು ಕೊಡಬೇ ಕೆಂದು ಯೋಚಿಸಿದ್ದೇವೆ. ಈ ಧೋರಣದ ಮೂಲಕ ಶಿವಾನುಭವ ಪತ್ರಿ ಕೆಯ ಸ್ವರೂಪದಲ್ಲಿ ಕೆಲಮಟ್ಟಿಗೆ ಬದಲಾವಣೆಯಾದಂತೆ ಅನೇಕರಿಗೆ ಭಾಸವಾಗಬಹುದು. ಆದರೆ ತತ್ವಸಂಶೋಧನೆಯು ಎಷ್ಟು ಮಹತ್ವ ವಾದದ್ದೋ ಅಷ್ಟೇ ಅಥವಾ ಅದಕ್ಕೂ ಹೆಚ್ಚು ಅದರ ಪ್ರಸಾರಕಾರ್ಯವೂ ಮಹತ್ವದ್ದಿರುವದರಿಂದ ಹಾಗೆ ಅವರು ಭಾವಿಸಲಿಕ್ಕಿಲ್ಲೆಂದು ನಾವು ಎಣಿ ಸಿದ್ದೇವೆ. ಇಂಥ ವಿಷಯಗಳೊಡನೆ ತತ್ವಸಂಶೋಧನೆ, ತತ್ವ ವಿವೇ ಚನೆ, ವೀರಶೈವ ಸಮಾಜ ಚರಿತ್ರೆ ಈ ವಿಷಯಗಳಿಗೂ ಕೂಡ ಎಂದಿ ನಂತೆ ಉಚ್ಚ ಸ್ಥಾನವನ್ನು ಕೊಡಲಾಗುವದು.

ಈಗಿನ ಸಂಚಿಕೆಯಲ್ಲಿ ಒಬ್ಬ ಮಹನೀಯರು ವೀರಶೈವ ಪಾಠ ಶಾಲೆಗಳ ವಿಷಯವಾಗಿ ಒಂದು ಲೇಖವನ್ನು ಬರೆದದ್ದು ಅದರಲ್ಲಿ ಮಾಡಿದ ಸೂಚನೆಗಳನ್ನು ಪಾಠಶಾಲೆಯ ಚಾಲಕರೂ ಅವುಗಳಲ್ಲಿಯ ಶಿಕ್ಷಕರೂ ಗಮನಿಸುವರೆಂದು ನಾವು ಆಶಿಸಿದ್ದೇವೆ. ಹಾಗೆಯೇ 'ಮಾಧ್ಯ ಮಿಕ ಶಾಲೆ'ಗಳ ವಿಷಯವನ್ನೂ ಮುಂದುವರಿಸಿದ್ದೇವೆ.

(೨) ನಾವು ಈಚೆಗೆ ವೀರಶೈವ ಸಮಾಜದಲ್ಲಿ ಆಗಿಹೋಗಿರುವ ಶಿವಶರಣರ ಚರಿತ್ರೆಗಳನ್ನು ಸಂಶೋಧಿಸಿ ಬರೆಯುತ್ತ ಇರುವದು ನಮ್ಮ ವಾಚಕರಿಗೆ ಗೊತ್ತೇ ಇದೆ. ಈ ಚರಿತ್ರೆಗಳು ಅನೇಕ ಗ್ರಂಥಗಳಲ್ಲಿ ಖಂಡಶಃ ಉಪಲಬ್ಧವಿದ್ದು ಅವುಗಳನ್ನೆಲ್ಲ ಸಂಗ್ರಹಿಸಿ ಈ ಚರಿತ್ರೆಗಳಲ್ಲಿರುವ ವೈಶಿಷ್ಟ್ಯಕ್ಕೆ ಕುಂದುಬಾರದಂತೆ ಅವುಗಳಲ್ಲಿ ಸುಸಂಬದ್ಧತೆಯನ್ನುಂಟು ಮಾಡಿ ಅವುಗಳು ವಾಚಕರಿಗೆ ಗ್ರಾಹ್ಯವಾಗುವ ರೀತಿಯಿಂದ ನಿರೂಪಿಸುವದು ಬಹು ಶ್ರಮದ ಕೆಲಸವಾಗಿದೆ. ಇದು ಬಹು ಹಗುರಾದ ಕಾರ್ಯವೆಂದು ನಮಗೆ ಆರಂಭದಲ್ಲಿ ತೋರಿತ್ತು. ಆದರೆ ಪ್ರತ್ಯಕ್ಷ ಕಾರ್ಯವನ್ನು ಕೈಕೊಂಡ ಬಳಿಕ ಯೋಗ್ಯವಾದವುಗಳನ್ನು ಆರಿಸುವದು ಮತ್ತು ನಿರೂಪಿಸುವದು, ಅಲ್ಲದೆ ವೀರಶೈವ ಇತಿಹಾಸದ ಮೇಲೆ ಪ್ರಕಾಶವನ್ನು ಕೆಡಹುವಂತಹ, ಮಹತ್ವದ ಸಮಾಜ ಕಾರ್ಯಮಾಡಿದಂತಹ, ಮತ್ತು ಕಾಲ್ಪನಿಕವಲ್ಲದಂತಹ ಶಿವಶರಣರ ಚರಿತ್ರೆಗಳನ್ನು ಆಯುವದು, ಇವೆಲ್ಲವೂ ಬಹು ದುಸ್ತರವಾದುವೆಂದು ತೋರಬರಹತ್ತಿದೆ. ಆದರೂ ನಾವು ಈ ಕಾರ್ಯವನ್ನು ಶಕ್ಯವಿದ್ದಷ್ಟರ ಮಟ್ಟಿಗೆ ಮುಂದುವರಿಸುತ್ತಲಿದ್ದೇವೆ. ಆದರೆ ಇದರಲ್ಲಿ ನಮ್ಮ ಕೆಲವು ವಾಚಕರು ಅನಿರೀಕ್ಷಿತವಾದ ಆಕ್ಷೇಪಣೆಗಳನ್ನು ಎತ್ತಿ ನಮಗೆ ಪತ್ರಗಳನ್ನು ಬರೆಯುತ್ತಿದ್ದು ಅವುಗಳನ್ನುನಮ್ಮ ವಾಚಕರ ಇದಿರಿಗೆ ಇಡುವದು ಅವಶ್ಯವೆಂದು ತೋರುತ್ತಿದೆ. ನಾವು ಶಿವಶರಣರ ಚರಿತ್ರೆಗಳನ್ನು ಬರೆದದ್ದಾದರೆ ಸಮಾಜದಲ್ಲಿ ಅಂಧ ಶ್ರದ್ಧೆಯನ್ನು ಹೆಚ್ಚಿಸುತ್ತೇವೆಂತಲೂ ಅಶಕ್ಯವಾದ ಪವಾಡಗಳಿಗೆ ನಾವು ನಿಷ್ಕಾರಣವಾಗಿ ಹೆಚ್ಚಿನ ಸ್ಥಾನ ಕೊಡುತ್ತೇವೆಂತಲೂ ಅವುಗಳಲ್ಲಿ ನಿರೂಪಿತವಾದ ಸಂಗತಿಗಳು ವೀರಶೈವತ್ವಕ್ಕೆ ವಿರೋಧವಾದವುಗಳೆಂತಲೂ ಇವರ ಆಕ್ಷೇಪಣೆಗಳಾಗಿವೆ. ಆದರೆ ಇವರು ಹೀಗೆ ಆಕ್ಷೇಪಿಸುವಲ್ಲಿ ಈ ಚರಿತ್ರೆಗಳಲ್ಲಿಯ ಮುಖ್ಯ ಮರ್ಮಗಳನ್ನು ತಿಳಿದುಕೊಳ್ಳಲು ಪ್ರಯತ್ನಿಸಿಲ್ಲವೆಂದು ನಮ್ಮ ತಿಳುವಳಿಕೆ ಇದೆ. ಯಾಕಂದರೆ ಅವುಗಳಲ್ಲಿಯ ಸಂಗತಿಗಳನ್ನವಲೋಕಿಸಿದಲ್ಲಿ ಪ್ರತಿಯೊಂದು ಚರಿತ್ರೆಯಲ್ಲಿ ಕೆಲವೊಂದು ಶಿವಾನುಭವದ ತತ್ವವಾಗಲಿ ಇಲ್ಲವೆ ಉಚ್ಚ ಧಾರ್ಮಿಕ ಅಥವಾ ಸಾಮಾಜಿಕ ಅಥವಾ ನೈತಿಕ ವಿಷಯವಾಗಲಿ ಅಡಕವಾಗಿರುವದು ಯಾರ ಲಕ್ಷದಲ್ಲಾದರೂ ಬರುವಂತೆ ಇದೆ. ಅಲ್ಲದೆ ನಾವು ಆರಿಸಿ ಬರೆಯುತ್ತಲಿರುವ ಈ ಶಿವಶರಣರು ಐತಿಹಾಸಿಕ ಪುರುಷರೆಂಬುದನ್ನು ನಾವು ಶಕ್ಯವಿದ್ದ

ಷ್ಟರ ಮಟ್ಟಿಗೆ ಸ್ಥಾನಿಕ ಶೋಧಮಾಡಿ ಅವರ ಚರಿತ್ರೆಗಳನ್ನು ನಿರೂಪಿಸುತ್ತ ಇದ್ದೇವೆ. ಈ ಸಂಗತಿಗಳನ್ನು ತಿಳಿದ ನಮ್ಮ ವಾಚಕರಲ್ಲನೇಕರು ಈ ನಮ್ಮ ಪ್ರಯತ್ನವನ್ನು ಪ್ರೋತ್ಸಾಹಿಸುತ್ತಾ ಇದ್ದಾರೆ. ಆದರೆ ನಮ್ಮ ಇದಿರಿಗೆ ಬಂದ ಮುಖ್ಯ ಆಕ್ಷೇಪಣೆಗಳಲ್ಲಿ ಶಿವಶರಣರು ಇಷ್ಟಲಿಂಗಧಾರಕರಿದ್ದರೂ ಅವರು ಸ್ಥಾವರಲಿಂಗಗಳ ಪೂಜೆಯನ್ನು ಮಾಡುತ್ತಿದ್ದರ ಬಗ್ಗೆ ಉಲ್ಲೇಖ ಗಳಿದ್ದು ಅವು ವಿಶ್ವಾಸಾರ್ಹವಲ್ಲವೆಂದು ಕೆಲವರ ಅಭಿಪ್ರಾಯವಿರುತ್ತದೆ. ನಿಜವಾಗಿ ಇದು ವಿಚಾರಾರ್ಹವಾಗಿರುತ್ತದೆ.

(೩) ಈ ಆಕ್ಷೇಪಣೆಯನ್ನು ಕುರಿತು ಕೆಲವು ಮಹನೀಯರು ನಮ್ಮ ಸೂಚನೆಯನ್ನು ಮನ್ನಿಸಿ ಕೆಳಗೆ ಕಾಣಿಸಿದಂತೆ ತಮ್ಮ ಅಭಿಪ್ರಾಯ ಗಳನ್ನು ನಮ್ಮ ಕಡೆಗೆ ಕಳಿಸಿಕೊಟ್ಟಿದ್ದಾರೆ.

ಪ್ರೊ॥ ಎಮ್. ಆರ್. ಸಾಖರೆಯವರು, ಪ್ರೊಫೆಸರ ಲಿಂಗರಾಜ ಕಾಲೇಜ ಬೆಳಗಾವಃ-- ''ಇಷ್ಟಲಿಂಗಪೂಜೆಯು ಬಸವೇಶ್ವರನಿಂದಲೇ ಆರಂಭವಾಯಿತೆಂದು ನನ್ನ ಸ್ಪಷ್ಟ ಅಭಿಪ್ರಾಯವಿದೆ. ಅವನು ಮೊದಲು ಸ್ಥಾವರಲಿಂಗಪೂಜಕನಾಗಿದ್ದು ಆದರಿಂದ ಅವನಿಗೆ ತೃಪ್ತಿಯುಂಟಾಗ ಲಿಲ್ಲ. ಅವನು ಉಪನಯನ ಸಂಸ್ಕಾರವನ್ನು ಅಲ್ಲಗಳೆದು ತನ್ನ ಮನೆ ಯನ್ನು ತೊರೆದು ಕೂಡಲಸಂಗಮಕ್ಕೆ ಹೋಗಿ ಅಲ್ಲಿ ಯೋಗ ಸಾಧ ನೆಯಲ್ಲಿ ತೊಡಗಿದನು. ಆದರೆ ಅಲ್ಲಿಯು ಸ್ಥಾವರಲಿಂಗಪೂಜೆಯಿಂದ ಅವನಿಗೆ ಸಮಾಧಾನವೆನಿಸಲಿಲ್ಲ. ಆದರೆ ಅವನು ಬಹು ಜನ ಸಮಾ ಜದ ಉದ್ಧಾರವನ್ನಪೇಕ್ಷಿಸುವವನಾದ್ದರಿಂದ ಇಷ್ಟಲಿಂಗದ ವಿಚಾರವು ಅವ ನಿಗೆ ಹೊಳೆಯಿತು. ಆದರ ಸಾಧನೆಯ ರೀತಿಗಳನ್ನು ಅವನು ಕಂಡು ಹಿಡಿದು ಅವುಗಳನ್ನು ಅವನು ಬೋಧಿಸಿದನು. ಅವು ಸುಲಭ ಮತ್ತು ಸಾದಾ ರೀತಿಯವು ಇವೆ. ಅವುಗಳನ್ನು ಅವನ ಸಮಕಾಲೀನರಾದ ಅನೇಕ ಶಿವಜ್ಞಾನಿಗಳು ಒಪ್ಪಿಕೊಂಡರು. ಆದರೆ ಹಲವರು ಚಿಕ್ಕಂದಿನಿಂದ ಸ್ಥಾವರಲಿಂಗಪೂಜೆಯಲ್ಲಿ ತೊಡಗಿದವರಾದ್ದರಿಂದ ಅವರು ಸ್ಥಾವರವನ್ನು ಕೂಡಲೇ ಬಿಟ್ಟುಬಿಡಲಿಲ್ಲ. ಆದರೂ ಮುಂದೆ ಇಷ್ಟಲಿಂಗದ ವಿಚಾರ ಗಳು ರೂಢವಾಗುತ್ತ ಹೋದ ಹಾಗೆ ಹಿಂದುಗಡೆಗೆ ಪ್ರಸಿದ್ಧಿಯನ್ನು ಹೊಂದಿದ ಶಿವಶರಣರೂ ಕೂಡ ಸ್ಥಾವರ ಪೂಜೆಯನ್ನು ಬಿಟ್ಟುಬಿಟ್ಟರು.'' ಹೀಗೆ ಇವರ ಅಭಿಪ್ರಾಯವಿರುತ್ತದೆ.

ಶ್ರೀ ಜಗದ್ಗುರು ಚನ್ನಬಸವದೇಶಿಕೇಂದ್ರ ಸ್ವಾಮಿಗಳು ನಿಡುಮಾಮಿಡಿ ಮಠ ಇವರು ಈ ವಿಷಯದಲ್ಲಿ ಅಭಿಪ್ರಾಯಪಟ್ಟಿರುವದೇನಂದರೆ— ಬಸವಾದಿ ಪ್ರಮಥರು ಸ್ಥಾವರಲಿಂಗವನ್ನು ಒಪ್ಪಿರುವದರಿಂದ ಅದನ್ನು ಅಲ್ಲಗಳೆಯಲು ಬರಲಾರದು. 'ಇಷ್ಟಲಿಂಗವು ಸ್ಥಾವರವೆಂದೇ' ಶಿವಶರಣರ ವಾದ. (ಇದು ಜಂಗಮದೃಷ್ಟಿಯಿಂದ) 'ಹುರುಳಿಲ್ಲ ಹುರುಳಿಲ್ಲ ಲಿಂಗಾರ್ಚನೆ' ಇತ್ಯಾದಿ ಕೆಲ ವಚನಗಳು ಇದನ್ನು ಪುಷ್ಟೀಕರೀಸುತ್ತಿವೆ. ವ್ಯಕ್ತಿಗತ ಚೈತನ್ಯವನ್ನು ಆಹ್ವಾನಿಸಿ ನೆಲೆಗೊಳಿಸಿರುವದರಿಂದ ಅದು ಸ್ಥಾವರವಲ್ಲೆಂದು ತಾತ್ವಿಕ ಮತ. ಕೆಲ ಶಿವಶರಣರು ಪೂಜಿಸಿದ ಬಳ್ಳಹಿಕ್ಕಿಗಳಲ್ಲಿ ಅವರೇ ಸ್ವತಃ ಅವ್ಯಕ್ತವಾದ ಸಮಷ್ಟಿಚೈತನ್ಯವನ್ನು ಆಹ್ವಾನಿಸಿ ಪ್ರತ್ಯಕ್ಷ ಕಂಡು ಅನುಭವಿಸಿರುವರು. ಈ ದೃಷ್ಟಿಯಿಂದ ಅವರು ಇಷ್ಟಲಿಂಗಪೂಜಕರು. ವೀರಶೈವತ್ವಕ್ಕೆ ಸಲ್ಲುವರು. 'ಇಷ್ಟಲಿಂಗ' ಇದರ ಅರ್ಥ 'ತನಗೆ ಇಷ್ಟವಾದ ದೇವ' ಎಂಬುದೆ ಸಹಜಾರ್ಥ. ಶಾಸ್ತ್ರಗಳ ರೀತಿಯಲ್ಲಿ 'ಇಷ್ಟವಾದುದನ್ನು ಕೊಡುವಲಿಂಗ' ಎಂದರೂ ಸರಿಯೇ. ಇವೆರಡೂ ಅರ್ಥಗಳು ಆ ಶಿವಶರಣರು ಆರಾಧಿಸಿದ ಲಿಂಗಗಳಲ್ಲಿ ಸಮನ್ವಯವಾಗುತ್ತವೆ. ಅಲ್ಲದೆ ಅವರು ಒಲಿಸುವ ಮುನ್ನ ಅವು ಸ್ಥಾವರ. ಒಲಿಸಿ ಒಳಗಣ್ಣಿನಿಂದ ಕಂಡು ತದಾತ್ಮತ್ವವನ್ನು ಪಡೆದ ಮೇಲೆ ಆ ಲಿಂಗಗಳು ಇಷ್ಟಲಿಂಗಗಳಾಗವೆ? ಆಗತ್ಯ ಆಗಬಲ್ಲವು, 'ಶಿಲೆ ಇಷ್ಟಲಿಂಗವಾದಂತೆ'. ಇದು ನಮ್ಮ ಅಭಿಪ್ರಾಯವನ್ನು ಸಂಕ್ಷಿಪ್ತವಾಗಿ ಲಿಖಿಸಲಾಗಿದೆ.

ಈ ಪ್ರಕಾರ ಭಿನ್ನಾಭಿಪ್ರಾಯಗಳನ್ನು ಉಭಯ ಮಹನೀಯರು ವ್ಯಕ್ತಪಡಿಸಿದ್ದಾರೆ. ವಾಚಕರು ಶಿವಶರಣರ ಚರಿತ್ರೆಗಳನ್ನು ಓದಿದವರಿದ್ದು ಅವರಲ್ಲಿ ಬಹು ಜನರು ಶಿವಾನುಭವದ ತತ್ವಗಳನ್ನು ಮನನ ಮಾಡಿಕೊಂಡವರೂ ಇದ್ದಾರೆ. ಈ ಮಹತ್ವದ ವಿಷಯವನ್ನು ಕುರಿತು ಅವರೂ ಕೂಡ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಮಾಡಬಹುದು. ಸ್ಥಳಸಂಕೋಚದ ಮೂಲಕ ನಾವು ನಮ್ಮ ಅಭಿಪ್ರಾಯನ್ನು ಇಲ್ಲಿ ಪ್ರಕಟಿಸಿರುವದಿಲ್ಲ.

---

ಕನ್ನಡನಾಡಿನಲ್ಲಿ ಧಾರವಾಡ ಜಿಲ್ಲೆ ಹಾವೇರಿ ತಾಲೂಕಿನಲ್ಲಿ ವರದಾನದಿಯ ದಂಡೆಯ ಮೇಲೆ ಒಂದು ಕರಜಿಗೆ ಮತ್ತು ಅಕ್ಕಲ ಕೋಟಿ ಸಂಸ್ಥಾನದಲ್ಲಿ ಬೇರೊಂದು ಕರಜಿಗೆ ಹೀಗೆ ಎರಡು ಕರಜಿಗೆ ಗ್ರಾಮಗಳಿವೆ. ಇವುಗಳಲ್ಲಿ ಅಕ್ಕಲಕೋಟಿ ಸಂಸ್ಥಾನದಲ್ಲಿಯ ಕರಜಿ ಗೆಯೇ ಮಸಣಯ್ಯನ ಗ್ರಾಮವೆಂದು ನಮಗೆ ತೋರುತ್ತದೆ. ಅವನ ಕಥೆಯನ್ನು ನೋಡಲಾಗಿ ಅವನು ಲಿಂಗಪೂಜೆಗೋಸ್ಕರ ಕುಳಿತ ನದಿಯು ಅವನ ಗ್ರಾಮವಿದ್ದ ನದಿಯ ದಂಡೆಯ ಮೇಲಿರದೆ ಆದರಿಂದ ದೂರ ವಾಗಿತ್ತೆಂದು ಕಂಡುಬರುತ್ತಿದೆ. ಹಾವೇರಿ ತಾಲೂಕಿನಲ್ಲಿಯ ಕರಜಿ ಗೆಯು ವರದಾನದಿಯ ದಂಡೆಯ ಮೇಲೆಯೇ ಇದೆ. ಆದ್ದರಿಂದ ಅದು ಮಸಣಯ್ಯನ ಗ್ರಾಮವೆಂದು ತೋರುವದಿಲ್ಲ. ಈಚೆಗೆ ಪ್ರಸಿದ್ಧವಾದ ಶಿಲಾಹಾರರ ಒಂದು ಶಿಲಾಶಾಸನದಿಂದ ಮಸಣಯ್ಯನ ಇಷ್ಟದೇವತೆ ಯಾದ 'ಗಜೇಶ್ವರ' ದೇವಾಲಯವು ಈ ಕರಜಿಗೆಯಲ್ಲಿಯೇ ಇದ್ದುದು ಗೊತ್ತಾಗುತ್ತದೆ. [೧] ಅಕ್ಕಲಕೋಟೆಯ ಹಿಂದಿನ ಅಧಿಪತಿಗಳು ತಮ್ಮಲ್ಲಿ ಸಂಗ್ರಹಿಸಿದ ಒಂದು ಶಿಲಾಶಾಸನದಿಂದ ತಿಳಿದುಬರುವದೇನೆಂದರೆ— "ತಗರ ಪುರವರಾಧೀಶ್ವರ, ಜೀಮೂತವಾಹನಾನ್ವಯ ಶರಚ್ಚಂದ್ರ ಸೆಳಬಕುಳಕಮಳ ಮಾರ್ತಂಡ, ಚಾಮುಂಡಿಕಾದೇವೀ ಲಬ್ಧವರ ಪ್ರಸಾದ, ಮುಂತಾದ ಬಿರುದುಗಳಿಂದ ಅಂಕಿತನಾದ ಈ ಇಂದರಸನು ಮೇಲೆ ನಿರ್ದಿಷ್ಟವಾದ ದಿನ ರಾಜ್ಯಾಂಗದ ಇನ್ನಿಬ್ಬರು ಅಧಿಕಾರಿಗಳೊಡನೆ ಸೇರಿ ಕರಜಿಗೆಯ ಶ್ರೀಸಿದ್ಧಗಜ್ಜೇಶ್ವರ ದೇವರ ಅಂಗಭೋಗ ನಿವೇದ್ಯಾದಿಗಳ ನಿಮಿತ್ತವಾಗಿ ಆ ದೇವರ ಮಠದ ಆಚಾರ್ಯರಾದ ಶ್ರೀಜ್ಞಾನಸಿದ್ಧ ದೇವರ ಪಾದಗಳನ್ನು ತೊಳೆದು ಅಣನ್ದೂರು—ಮುನ್ನೂರು ಈ ಭಾಗಕ್ಕೆ ಸೇರಿದ ಅಂಕುಲಿಗೆ—ಐವತ್ತು ಈ ಪ್ರದೇಶದೊಳಗಣ ಕರಂಜಿಗೆ ಎಂಬ ಗ್ರಾಮದಲ್ಲಿ ಭೂಮಿಯೇ ಮೊದಲಾದ ವಸ್ತುಗಳನ್ನು ಸರ್ವನಮಸ್ಯ ವಾಗಿ ದತ್ತಿಬಿಡುವನು" ಎಂಬ ಭಾವವುಳ್ಳ ಬರೆಹವು ಈ ಶಿಲಾಶಾಸ ನದಲ್ಲಿದೆ. ಇದರಲ್ಲಿ ನಿರ್ದೇಶಿಸಲ್ಪಟ್ಟ ಅಣಂದೂರು ಈಗಿನ ಅಕ್ಕಲ

---

(೧) ಡಾ. ಪಾಂಡುರಂಗ ಭೀ. ದೇಸಾಯಿ ಎಮ್. ಎ. ಇವರು ಪ್ರಬುದ್ಧ ಕರ್ನಾಟಕ ಪತ್ರಿಕೆಯ ೨೭ನೇ ಸಂಪುಟ ಸಂಚಿಕೆ ೨ ಪುಟ ೬೫ (೧೯೪೫ ಡಿಸೆಂಬರ) ಇದರಲ್ಲಿ ಪ್ರಕಟವಾದ 'ಶಿಲಾಹಾರರ ಒಂದು ಪ್ರಾಚೀನ ಶಾಖೆ' ಎಂಬ ಶಿರೋ ಲೇಖವುಳ್ಳ ಬರಹ ನೋಡಿರಿ.

ಕೋಟಿ ಗ್ರಾಮದ ಉತ್ತರಕ್ಕೆ ೧೯ ಮೈಲು ದೂರವಿರುತ್ತದೆ. ಅಂಕುಲಿಗೆಯು ಈಗಿನ ಅಕ್ಕಲಕೋಟಿಯೇ ಇರುತ್ತದೆ. ಅಕ್ಕಲಕೋಟಿಯನ್ನು ಈಗಲೂ ಹಳ್ಳಿಯ ಜನರು ಅಂಕಲಕೋಟೆ ಎಂದು ಕರೆಯುತ್ತಾರೆ. ಕರಂಜಿಗೆಯು ಈ ಗ್ರಾಮಕ್ಕೆ ಸಮೀಪವಾಗಿರುವ ಕರಜಗೆಯು. ಇದೇ ಗಜೇಶ ಮಸಣಯ್ಯನ ಗ್ರಾಮವು. ಶಾಸನದಲ್ಲಿ ಉಲ್ಲೇಖವಾದ 'ಶ್ರೀಸಿದ್ಧಗಜ್ಜೇಶ್ವರ ದೇವರು' ಮಸಣಯ್ಯನ ಇಷ್ಟದೇವತೆಯಾದ 'ಗಜೇಶ್ವರ' ಎಂಬುದಿರುತ್ತದೆಂದು ನಮಗೆ ತೋರುತ್ತದೆ. ಗಜ್ಜೇಶ್ವರ ದೇವರು ಎಂಬುದರ ಬದಲು ಗಜೇಶ್ವರ ಎಂಬ ಹೆಸರು ಇವನ ವಚನಗಳಲ್ಲಿ ಬಂದಿರಬಹುದು. ಇದಲ್ಲದೆ ಈ ಕರಜಗೆಯ ಗ್ರಾಮದಲ್ಲಿ 'ಗಜ್ಜೇಶ್ವರ' ಎಂಬ ಹೆಸರಿನ ದೇವಾಲಯವು ಈಗಲೂ ಇರುತ್ತದೆ. ಈ ಗ್ರಾಮದಿಂದ ಪೂರ್ವಕ್ಕೆ ೪೦ ಮೈಲುಗಳ ಮೇಲೆ 'ಮನಹಳ್ಳಿ' ಎಂಬ ಗ್ರಾಮವಿದ್ದು ಅಲ್ಲಿ ಮಸಣಯ್ಯನ ದೇವಾಲಯವೂ ಉಂಟು. ಈಗ ಈ ಮನಹಳ್ಳಿ ಗ್ರಾಮವು ಕಲಬುರ್ಗಿ ಜಿಲ್ಲೆಯಲ್ಲಿ ತಾಲೂಕು ಸ್ಥಳವಾದ ಆಲ್ದಿಯ ಪೂರ್ವಕ್ಕೆ ಆರು ಮೈಲುಗಳ ಮೇಲಿರುತ್ತದೆ. ಈ ದೇವಾಲಯದ ಜಾತ್ರೆಯು ಪ್ರತಿವರುಷವಾಗುತ್ತದೆ. ಇಲ್ಲಿ ಮಸಣಯ್ಯನು ಕೆಲಕಾಲ ವಾಸಿಸಿರಬಹುದೆಂದು ತೋರುತ್ತದೆ. ಈ ಗ್ರಾಮದಿಂದ ಆರು ಮೈಲುಗಳ ಮೇಲೆ 'ತೊರೆ' ಅಥವಾ 'ಬೆಣ್ಣೆತೊರೆ' ಎಂಬ ಹೆಸರಿನ ಒಂದು ದೊಡ್ಡ ಹಳ್ಳವು ಹರಿಯುತ್ತಿದೆ. ಮಸಣಯ್ಯನು ಲಿಂಗಪೂಜೆಗೋಸ್ಕರ ಕುಳಿತ ನದಿಯು ಇದೇ ಆಗಿರಬಹುದೆಂದು ತೋರುತ್ತದೆ. ಇವೆಲ್ಲ ಸಂಗತಿಗಳನ್ನು ನಿರೀಕ್ಷಿಸಿದಲ್ಲಿ ಮಸಣಯ್ಯನ ಗ್ರಾಮವು ಅಕ್ಕಲಕೋಟೆಗೆ ಸಮೀಪವಿರುವ ಕರಜಗೆಯೇ ಇರುತ್ತದೆಂದು ತೋರುತ್ತದೆ. ಈ ಕರಜಗೆಯು ತರ್ದವಾಡಿ ಎಂದರೆ ಮಂಗಳವಾಡ ನಾಡಿನಲ್ಲಿ, ಮಂಗಳವಾಡದಿಂದ ಪೂರ್ವಕ್ಕೆ ೪೦ ಮೈಲುಗಳ ಮೇಲೆ ಇರುತ್ತದೆ. ಈ ಭಾಗದಲ್ಲಿಯೇ ಬಸವೇಶ್ವರನ ಕಾಲದಲ್ಲಿ ಬಹುಜನ ಶಿವಶರಣರು ಆಗಿಹೋಗಿದ್ದಾರೆ.

ಮಸಣಯ್ಯನ ಕೆಲವು ವಚನಗಳನ್ನು ಮಾತ್ರ ನಾವು ಇಲ್ಲಿ ಉದಹರಿಸುತ್ತೇವೆ.

## ವಚನಗಳು.

(೧) ಆಲಿಕಲ್ಲು, ಮರದ ಗಿಳಿಯಲಿಹ ಮಗಮಗಿಸುವ ಗಾಳಿ, ಉಂಡು ಉರವಣಿಸುವ ಪಕ್ಷಿಗಳು, ಸರಗೈವ ಕೋಗಿಲೆ, ಗಗನದ

• ಚಂದ್ರಮ, ನೀವತ್ತ ಸಾರಿರೇ. ಅಗಲಲಾರೆನು ಸಖಿಯೇ. ಬೆಳುದಿಂಗಳು ಬಿಸಿಲಾಯಿತ್ತು. ಅಗಲಲಾರೆನು ಎನ್ನಿನಿಯನ. ದಶಾವಸ್ಥೆಗೊಂಡೆನು ಮಹಾಲಿಂಗ ಗಜೇಶ್ವರನನುಳದಡೆ.

(೨) ಗಿಡುಮರದ ಕುರುಬಿತಿಯ ಜವ್ವನದಂತೆ ನುಡಿಯಲರಿಯದೆ ಮುಗ್ಧೆಯಾಗಿರ್ದೆನವ್ವಾ. ಹಗಲನರಿಯದ ಚಕ್ರವಕ್ಕಿಯಂತೆ ಮನ ಬಯಸುತಿರ್ದೆನವ್ವಾ. ಹಲವು ಕಾಲ ಎಲವದ ಮರನ ಸಾರಿರ್ದ ರಗಿಳಿಯಂತಾದೆನವ್ವಾ. ಇಂದೆಮ್ಮ ಮಹಾಲಿಂಗ ಗಜೇಶ್ವರನ ಬರವ ಕಾಣದೆ ಇವರೆಲ್ಲರ ವಿಧಿಯ ಹೊತ್ತೆನವ್ವಾ.

(೩) ಋತುಕಾಲ ಕೋಗಿಲೆಯಂತೆ ನುಡಿಯದಂತಿರ್ದಳಲ್ಲಾ. ಪರಿಮಳ ತಪ್ಪಿದ ಭ್ರಮರನಂತೆ ಸುಳಿ ಸುಳಿಗೊಳುತಿರ್ದಳಲ್ಲಾ. ಫಲವು ತಪ್ಪಿದ ಬಂಜೆವನದೊಳಗಣ ಅರಗಿಳಿಯಂತಿರ್ದಳಲ್ಲಾ. ದರದುರದ ಜವ್ವನದಲ್ಲಿ ' ತೋರಣದೆಲೆಯಂತೆಯಾದಳಲ್ಲಾ. ಮಹಾಲಿಂಗ ಗಜೇಶ್ವರನ ನೆರೆವ ಭರದಿಂದ ಮರುಳುಗೊಂಡಳಲ್ಲಾ.

(೪) ಒಳಗೆ ಶೋಧಿಸಿ, ಹೊರಗೆ ಧವಳಿಸಿ, ಭಾವದಿಂದ ಗುಡಿ ತೋರಣವ ಕಟ್ಟಿದೆನಯ್ಯ. ಲಿಂಗ ಬಾರಯ್ಯ. ಎನ್ನ ದೇವ ಬಾರಯ್ಯ. ಎನ್ನಂತರಂಗದ ಪರಂಜ್ಯೋತಿಯೇ, ನಿಮ್ಮ ನಾನಿದಿರುಗೊಂಬೆ. ನೀ ಬಾರಯ್ಯ. ಎನ್ನ ಮಹಾಲಿಂಗ ಗಜೇಶ್ವರಾ ನೀ ಬಾರಯ್ಯ.

(೫) ನೀನೊಲಿದು ಕೂರ್ತವರು, ನಿಮಗೊಲಿದು ಕೂರ್ತವರು, ನಿಮ್ಮ ಸರಿಯೇ ಅವರು, ನಿಮ್ಮ ರೂಹೇ ಅವರು. ಆಳಾರು, ಅರಸಾರೆಂದು ಅರಿಯಬಾರದು. ನಿಮ್ಮ ರೂಹೇ. ಮಹಾಲಿಂಗ ಗಜೇಶ್ವರನ ನೊಲಿದು ಪೂಜಿಸಿದವರು ಸಾಲೋಕ್ಯ, ಸಾಮಿಪ್ಯ, ಸಾರೂಪ್ಯ, ಸಾಯುಜ್ಯ ಪದವಿಗಳ ಪಡೆದರು. ಎನಗೆ ನಿಮ್ಮ ತೊತ್ತು ಸೇವೆಯೇ ಸಾಕು.

(೬) ಮಾತಂಗಿಯ ಹೊಳೆಯಲಿ ಉತ್ತಮನ ನೆಳಲು ಸುಳಿದಡೆ ರೂಹು ಹೊಲೆಯನಾಗಬಲ್ಲುದೇ ಅಯ್ಯ ? ಮರ್ತ್ಯಲೋಕದ ಮಾನವರೊಗೆ ಶರಣ ಸುಳಿದಡೆ ಶರಣ ಸೂತಕಿಯಾಗಬಲ್ಲನೇ ಅಯ್ಯ? ಮರ್ತ್ಯರ ಭವಿತನವ ಅಗಿದೊಗೆಯದೆ ಮಾಬನೇ ಮಹಾಲಿಂಗ ಗಜೇಶ್ವರಯ್ಯ ?

(೭) ಮಾಗಿಯ ಹುಲ್ಲಿನ ಸೋಂಕಿನಂತೆ ತನು ಪುಳುಕಿತಳಾದಳವ್ವೆ. ನುಡಿ ತೊದಲು. ಆತನ ಒಲುಮೆ ಆಧಾರವಾಗಿದ್ದಳವ್ವೆ. ಬಿಳಿಯ ತುಂಬಿ ಕುಂಕುಮದ ರಜದಲ್ಲಿ ಬಂಡುಂಡಂತೆ ಮಹಾಲಿಂಗ ಗಜೇಶ್ವರನಲ್ಲಿ ತನ್ನ ತಾನೆ ರತಿಯಾಗಿರ್ದಳವ್ವೆ.

(೮) ದೇವರ ನೆನೆದು ಮುಕ್ತರಾದೆವೆಂಬ ಯುಕ್ತಿಶೂನ್ಯರ ಮಾತು ಕೇಳಲಾಗದು. ಅದೇನು ಕಾರಣವೆಂದಡೆ, ದೇವರ ನೆನೆದವರಿಗೆ ದೇವರುಂಟೇ? ದೂರದೂರದಲ್ಲಿದ್ದವರ ನೆನೆವರಲ್ಲದೆ ಸಮೀಪದಲ್ಲಿದ್ದವರನಾರು ನೆನೆದವರಿಲ್ಲ. ಇದನರಿದು ನಿನ್ನೊಳಡಗಿ ನಾ ನಿನ್ನ ನೆನೆಯಲಿಲ್ಲ. ನನ್ನೊಳಡಗಿ ನೀನೆನಗೆ ಮುಕ್ತಿಯನೀಯಲಿಲ್ಲ. ಇದು ಕಾರಣ ನಾ ನಿನ್ನ ನೆನೆಯಲಿಲ್ಲ ಮಹಾಲಿಂಗ ಗಜೇಶ್ವರಾ.

(೯) ಬಾಲಕಿ ಹಾಲ ಸವಿದಂತೆ, ಮರುಳನ ಮನದ ನೆನಹಿನಂತೆ, ಮೂಗ ಕಂಡ ಕನಸಿನಂತೆ, ಮೆಯ್ಯರಿಯದ ನೆಳಲಿನಂತೆ, ಬಂಜೆಯ ಮನದ ಸ್ನೇಹದಂತೆ, ಮಹಾಲಿಂಗ ಗಜೇಶ್ವರನಲ್ಲಿ ಐಕ್ಯ. ವಾರಿಕಲ್ಲ ಪುತ್ಥಳಿ ಕರಗಿ ಅಪ್ಪುವ ಕೂಡಿದಂತಾಯಿತ್ತು.

(೧೦) ಹೊಸ ಮದುವೆಯ ಹಸೆಯುಡುಗದ ಮುನ್ನ, ಹೊಸದ ಅರಿಸಿನ ಬಿಸಿಲಿಂಗೆ ಹರಿಯದ ಮುನ್ನ, ತನು ಸಂಚಲವಡಗಿ ಮನವು ಗುರುಕಾರುಣ್ಯವ ಪಡೆದು ಹುಸಿಯಲ್ಲದಿರ್ದಡೆ ಭಕ್ತನೆಂಬೆ. ಹಿಡಿಯಲಿಲ್ಲದಿರ್ದಡೆ ಮಹೇಶ್ವರನೆಂಬೆ. ತನುವಿಲ್ಲದಿರ್ದಡೆ ಪ್ರಸಾದಿಯೆಂಬೆ. ಜೀವವಿಲ್ಲದಿರ್ದಡೆ ಪ್ರಾಣಲಿಂಗಿಯೆಂಬೆ. ಆಸೆ ಇಲ್ಲದಿರ್ದಡೆ ಶರಣನೆಂಬೆ. ಐದರ ಸಂಪರ್ಕ ವಿಯೋಗವಾದಡೆ ಐಕ್ಯನೆಂಬೆ. ಐಕ್ಯದ ಸಂತೋಷ ಹಿಂಗಿದಡೆ ಜ್ಯೋತಿರ್ಮಯನೆಂಬೆ. ಇಂತಾಗಬೇಕೆಂಬ ಈ ಮನದ ದೇಹವನಿರಿದಡರಿಯದು, ತರಿದಡರಿಯದು, ಬೈದಡರಿಯದು, ಕೊಯ್ದಡರಿಯದು, ನಿಂದಿಸಿದಡರಿಯದು, ಸ್ತುತಿಸಿದಡರಿಯದು, ಸುಖವನರಿಯದು, ದುಃಖವನರಿಯದು. ಈ ಚತುರ್ವಿಧದ ತಾಗುನಿರೋಧವನರಿಯದಿರ್ದಡೆ ಆತನೇ ಮಹಾಲಿಂಗ ಗಜೇಶ್ವರನೆಂಬೆ.

ಇವೆಲ್ಲವೂ ಅಮೋಘವಾದ ವಚನಗಳು. ಭಕ್ತಿಯ ಪ್ರವಾಹವು ಇವುಗಳಲ್ಲಿ ಹೇಗೆ ಪ್ರವಹಿಸುತ್ತದೆಂಬುದನ್ನು ವಾಚಕರು ಲಕ್ಷಿಸತಕ್ಕದ್ದು.

ಈ ವಚನಗಳನ್ನು ನೋಡಿದಲ್ಲಿ ಶಿವಶರಣರು ಕನ್ನಡವನ್ನು ಚನ್ನಾಗಿ ಬಲ್ಲವರು, ಅತ್ಯಂತ ವಿದ್ವಾಂಸರು, ಜ್ಞಾನಿಗಳು, ಶಿವಾನುಭವದಂತೆ ನಡೆದವರು, ಅನುಭವವನ್ನು ಹೊಂದಿ ನುಡಿದವರು, ಎಂಬುದು ಸ್ಪಷ್ಟವಾಗುತ್ತದೆ. ನಾವು ಮೇಲೆ ಕಾಣಿಸಿದ ೧೦ ನೆಯ ಒಂದೇ ಒಂದು ವಚನದಲ್ಲಿ ಷಟ್‌ಸ್ಥಲಗಳ ಮರ್ಮವನ್ನೆಲ್ಲ ಗಜೇಶಮಸಣಯ್ಯನು ಹೇಗೆ ಸ್ಪಷ್ಟಪಡಿಸಿದ್ದಾನೆಂಬುದನ್ನು ವಾಚಕರು ಲಕ್ಷಿಸತಕ್ಕದ್ದು.

---

## ನುಲಿಯ ಚಂದಯ್ಯ.

ಕಲ್ಯಾಣ ಪಟ್ಟಣದಲ್ಲಿ ನುಲಿಯ ಚಂದಯ್ಯನೆಂಬ ಶಿವಶರಣನು ವಾಸಮಾಡುತ್ತಿದ್ದನು. ಅವನು ದಿನಾಲು ಹಳ್ಳಕ್ಕೆ ಹೋಗಿ ಅಲ್ಲಿದ್ದ ಮೆದೆಯ ಹುಲ್ಲನ್ನು ಕೊಯ್ದು ಅದರಿಂದ ಹಗ್ಗ ಮತ್ತು ಕಣ್ಣಿಗಳನ್ನು ಮಾಡಿ ಅವುಗಳನ್ನು ಮಾರಿ, ಬಂದ ಹಣದಿಂದ ಜಂಗಮ ದಾಸೋಹವನ್ನು ನಡಿಸುತ್ತಿದ್ದನು. ಇದೇ ಅವನ ಕಾಯಕವಾಗಿತ್ತು. ಇದರಿಂದ ಅವನಿಗೆ 'ನುಲಿಯ ಚಂದಯ್ಯ'ನೆಂಬ ಹೆಸರು ಪ್ರಾಪ್ತವಾಗಿತ್ತು.

ಅವನು ಜಂಗಮ ದಾಸೋಹವು ಲಿಂಗಪೂಜೆಗಿಂತ ಅಧಿಕವು, ಲಿಂಗಕ್ಕೆ ಮಾಡುವ ಅಷ್ಟವಿಧ ಪೂಜೆ, ಷೋಡಶೋಪಚಾರಗಳು ಲಿಂಗ ಪೂಜೆಯಲ್ಲ, ಲಿಂಗ ಪೂಜೆಯು ಜಂಗಮ ಪೂಜೆಯಲ್ಲಿಯೇ ಅಡಕವಾಗಿರುತ್ತದೆ, ಎಂದು ಭಾವಿಸಿ, ಜಂಗಮ ಪೂಜೆಯಲ್ಲಿ ಮಗ್ನನಾಗಿರುತ್ತಿದ್ದನು. ಮತ್ತು ಲಿಂಗ ಪೂಜೆಗೆ ಯಾವ ಸ್ಥಾನವಿದೆಯೋ ಅದನ್ನು ಅವನು ಉಪೇಕ್ಷಿಸುತ್ತಿದ್ದನು.

ಶಿವಾನುಭವದ ಪ್ರಕಾರ ಜಂಗಮತ್ವವು ಲಿಂಗಕ್ಕೆ ಚೈತನ್ಯಾತ್ಮಕವಾಗಿರುತ್ತದೆ. ಆದ್ದರಿಂದ ಅವನು ಜಂಗಮ ತತ್ವವೇ ಶ್ರೇಷ್ಠವಾದುದು, ಗುರೂಪದೇಶವು ಇಷ್ಟಲಿಂಗದಲ್ಲಿ ರೂಪುಗೊಂಡಿರುವದರಿಂದ ಅದು ಕೇವಲ ಕ್ರಿಯೆಯ ಅಥವಾ ಆಚಾರದ ದ್ಯೋತಕವಾಗಿದೆ ಎಂತಲೂ ಜಂಗಮವು ಜ್ಞಾನಕ್ಕೆ ಸಂಬಂಧಿಸಿರುವದರಿಂದ ಅದು ಕ್ರಿಯೆಗಿಂತ ಅಧಿಕವಾದುದೆಂತಲೂ ತಿಳಿದು ಅದರಂತೆ ಆಚಾರಿಸುವವನಾಗಿದ್ದನು.

ಹೀಗಿರುವಲ್ಲಿ ಅವನು ಒಂದು ದಿವಸ ಹಳ್ಳಕ್ಕೆ ಹೋಗಿ ಮೆದೆಯ ಹುಲ್ಲನ್ನು ಕೊಯ್ಯುತ್ತಿರುವಾಗ ಅವನು ಧಾರಣಮಾಡಿಕೊಂಡಿದ್ದ ಇಷ್ಟ ಲಿಂಗವು ಅವನನ್ನು ಪರೀಕ್ಷಿಸುವ ಉದ್ದಿಶ್ಯವಾಗಿ ಅವನ ಸೆಜ್ಜೆಯೊಳಗಿಂದ ಹೊರಗೆ ಜಗುಳಿ ನೀರಿನಲ್ಲಿ ಬಿದ್ದಿತು. ಆದರೆ ಚಂದಯ್ಯನು ಅದನ್ನು ಎತ್ತಿ ತೆಗೆದುಕೊಂಡು ಧರಿಸಿಕೊಳ್ಳಲಿಲ್ಲ. ಅವನು ಹಾಗೆಯೇ ಮೆದೆಯ ಹುಲ್ಲನ್ನು ಕೊಯ್ದು ಹೊರೆಗಟ್ಟಿ ಹೊತ್ತುಕೊಂಡು ಮನೆಯ ಹಾದೀ ಹಿಡಿದನು.

ಲಿಂಗಕ್ಕೆ ಜಂಗಮವು ಪ್ರಾಣವಾದುದು. ಆದುದರಿಂದ ಜಂಗಮ ಪ್ರಾಣಿಯಾದ ಚಂದಯ್ಯನು ಲಿಂಗವನ್ನು ಬಿಟ್ಟು ಮನೆಗೆ ಹೊರಡಲು ಆ ಲಿಂಗವೂ ಕೂಡ ಅವನ ಬೆನ್ನುಹತ್ತಿ ಹೋಗಲು ಸಿದ್ಧವಾಯಿತು. ಆಗ ಅದು ಅವನಿಗೆ - ಎಲೋ ಚಂದಯ್ಯನೇ, ನಾನೂ ನಿನ್ನ ಕೂಡ ಮನೆಗೆ ಬರುತ್ತೇನೆ. ನಿನ್ನನ್ನು ಬಿಟ್ಟು ನಾನಿರಲಾರೆನು, ಎಂದು ನೀರಿನ ಹೊರಗೆ ಬಂದು ಧ್ವನಿಮಾಡಿತು. ಅದನ್ನು ಚಂದಯ್ಯನು ಕೇಳಿ, ಲಿಂಗಕ್ಕೆ—ನೀನು ನಿನ್ನ ಭಾವವು ಹೇಗೆ ಇದೆಯೋ ಹಾಗೆಯೇ ಮಾಡು. ಆದರೆ ನನಗೆ ಮಾತ್ರ ನನ್ನ ಜಂಗಮ ಸೇವೆಯೇ ಇರಲಿ, ಎಂದು ನುಡಿದು ಮುಂದೆ ಹೋಗುತ್ತಿರಲು, ಆ ಲಿಂಗವು ತನ್ನ ವೃತ್ತ, ಗೋಳಕ, ಗೋಮುಖಾಕಾರಗಳನ್ನು ಬಿಟ್ಟು ಪುರುಷಾಕಾರವನ್ನು ತಳೆದು—ಚಂದಯ್ಯನೇ, ನಾನು ಬಂದೆನು. ನನ್ನನ್ನು ಬಿಟ್ಟು ಹೋಗಬೇಡ ಎಂದೆನ್ನಲು, ಅದಕ್ಕೆ ಚಂದಯ್ಯನು—ಮೊದಲು ನನ್ನನ್ನು ಬಿಟ್ಟು ನೀನೇ ಹೋಗಿರುವಿ. ಈಗ ನನ್ನ ಕೂಡ ಬರುವೆನೆಂದರೆ ಅದಕ್ಕೆ ನಾನು ಒಪ್ಪುವದಿಲ್ಲ, ಎಂದು ನುಡಿದನು. ಅದಕ್ಕೆ ಆ ಲಿಂಗಪುರುಷನು—ನೀನೊಲ್ಲೆನೆಂದರೆ ನಾನು ನಿನ್ನನ್ನು ಬಿಡುವದಿಲ್ಲ, ಎಂದು ಅಂದು ಅವನ ಬೆನ್ನು ಹತ್ತಿ ಬರಹತ್ತಿದನು.

ಹೀಗೆ ಉಭಯತರು ಬರುತ್ತಾ ಇರುವಲ್ಲಿ, ದಾರಿಯಲ್ಲಿ ಶರಣ ಶ್ರೇಷ್ಠನಾದ ಮಡಿವಾಳ ಮಾಚಿದೇವನು ನದಿಯ ದಂಡೆಯ ಮೇಲೆ ಸೀರೆಗಳನ್ನು ಒಗೆಯುತ್ತ ನಿಂತದ್ದನ್ನು ಆ ಲಿಂಗದೇವನು ಕಂಡನು. ಆಗ ಅವನು ಚಂದಯ್ಯನಿಗೆ ಅಂದದ್ದು—ಇಲ್ಲಿ ಮಾಚಿದೇವನಿದ್ದಾನೆ. ಅವನ ಬಳಿಗೆ ನಾವು ಹೋಗುವಾ ಎಂದು ಹೇಳಲು, ಉಭಯತರು ಅವನಲ್ಲಿಗೆ ಬರಲು, ಮಾಚಿದೇವನು ಅವರಿಬ್ಬರಿಗೆ ನಮಸ್ಕರಿಸಿ—

ನೀವಿಬ್ಬರು ಇಲ್ಲೇಕೆ ಬಂದಿರೆಂದು ಕೇಳಲು, ಆ ಲಿಂಗದೇವನು—ನಾನು ಚಂದಯ್ಯನ ಸೆಜ್ಜೆಯಿಂದ ಹೊರಗೆ ಬಿದ್ದೆನು. ಇದೇ ನನ್ನ ತಪ್ಪಾಯಿತು. ಇಷ್ಟಕ್ಕೆ ಚಂದಯ್ಯನು ನನ್ನನ್ನು ಬಿಟ್ಟುಕೊಟ್ಟು ಹೋಗಬೇಕೇ? ಇವನಿಗೆ ತಾವು ತಿಳಿ ಹೇಳಬೇಕೆಂದು ಅವನಿಗೆ ಬಿನ್ನವಿಸಿಕೊಂಡನು.

ಆಗ ಮಾಚಯ್ಯನು ಚಂದಯ್ಯನಿಗೆ— ನಿನ್ನ ಇಷ್ಟಲಿಂಗವು ನಿನ್ನ ಬೆನ್ನಹತ್ತಿ ಬಂದರೆ, ಹೀಗೆ ನೀನು ಬಿಟ್ಟು ಹೋಗಬೇಕೇ? ಇದು ಶಿವಶರಣರ ನಡೆಯಲ್ಲ ಎಂದೆನ್ನಲು, ಚಂದಯ್ಯನು— ಸೆಜ್ಜೆಯಿಂದ ಲಿಂಗವು ಬಿದ್ದಿತು ಮತ್ತು ಪುನಃ ಬಂದಿತು ಎಂಬುದಿಲ್ಲ. ಘನಲಿಂಗವು ಎಲ್ಲೆಡೆಯಲ್ಲಿಯೂ ಪರಿಪೂರ್ಣವಾಗಿರುತ್ತದೆ. ಆದ್ದರಿಂದ ಲಿಂಗವು ಹೋಯಿತು, ಬಂದಿತು ಎಂಬ ಸಂದೇಹವು ಇರಲಾಗದು. ಇಂಥ ಸಂದೇಹವು ಇದ್ದುದಾದರೆ, ಆ ಲಿಂಗವು ಹೇಗೆ ಉಳಿದೀತು? ಆತ್ಮನು ಹೋದರೆ ಈ ಘಟವು ಹೇಗೆ ಉಳಿದೀತು? ನನ್ನ ಜಂಗಮತ್ವದಲ್ಲಿಯೇ ಲಿಂಗವಿದೆ ಎಂದು ನುಡಿದನು.

ಆದಕ್ಕೆ ಮಾಚಯ್ಯನು— ದೇಹಧರ್ಮವಿರುವ ತನಕ ಲಿಂಗಪೂಜೆಯನ್ನು ಬಿಡಕೂಡದು. ಗುರುಲಿಂಗಜಂಗಮಗಳಿಗೆ ಸಹ ಲಿಂಗವಿದೆ. ಅವ್ರೂ ಕೂಡ ತಮ್ಮ ತಮ್ಮ ಲಿಂಗಗಳನ್ನು ಪೂಜಿಸಬೇಕು. ತನ್ನನ್ನು ತಾನು ಅರಿಯಬೇಕಾದರೆ ಅಂಗದಲ್ಲಿ ಲಿಂಗವಿರಬೇಕು ಎಂದು ಹೇಳಿದನು.

ಅದಕ್ಕೆ ಚಂದಯ್ಯನು— ಭಾವಶುದ್ಧವಾಗಿರುವದೇ ಗುರುಪೂಜೆ. ಜ್ಞಾನಶುದ್ಧವಾಗಿರುವದೇ ಲಿಂಗಪೂಜೆ. ತ್ರಿಕರಣಶುದ್ಧವಾಗಿರುವದೇ ಜಂಗಮಪೂಜೆ. ಇದೇ ಪರಮಾತ್ಮನಿಗೆ ಅರ್ಪಿತವು ಎಂದು ಅಂದನು.

ಅದಕ್ಕೆ ಮಾಚಯ್ಯನು— ಚಂದಯ್ಯನೇ, ಇದೊಂದು ದೊಡ್ಡ ತೊಡಕು. ಇದು ನನಗೆ ತಿಳಿಯದು. ಶಿವಾನುಭವಮಂಟಪದಲ್ಲಿ ಬಸವಾದಿ ಪ್ರಮಥರಿದ್ದಾರೆ. ಅಲ್ಲಿಗೆ ನಾವು ಮೂವರೂ ಹೋಗುವಾ ಎಂದು ನುಡಿದನು.

ಅದಕ್ಕೆ ಚಂದಯ್ಯನು— ನನಗೆ ಜಂಗಮಾರ್ಚನೆಯ ವೇಳೆಯಾಗಿದೆ. ಅದನ್ನು ನಾನು ಬಿಡಲಾರೆನು. ಅದು ಮುಗಿದ ಬಳಿಕ ಶಿವಾನು

ಭವ ಮಂಟಪಕ್ಕೆ ಬರುವೆನು. ಅಷ್ಟರಲ್ಲಿ ನೀನೂ ಅಲ್ಲಿಗೆ ಬರಬೇಕೆಂದು ಬಿನ್ನವಿಸಿಕೊಂಡನು.

ಆಮೇಲೆ ಲಿಂಗದೇವನು ಚಂದಯ್ಯನಿಗೆ— ನಿನ್ನ ಜಂಗಮಾರ್ಚನೆಯಲ್ಲಿ ನಾನು ನಿನಗೆ ನೆರವಾಗುವೆನು. ನಿನ್ನ ಕೂಡ ಬರಲು ನನಗೆ ಅಪ್ಪಣೆಕೊಡಬೇಕು ಎಂದು ಕೇಳಿಕೊಳ್ಳಲು, ಚಂದಯ್ಯನು—ನೀನು ಬರುವದಾದರೆ, ನೀನು ನನ್ನ ಕಾಯಕ ಮಾಡಬೇಕು. ಇಗೋ, ಈ ನನ್ನ ಮೆದೆಯ ಹುಲ್ಲನ್ನು ಹೊತ್ತುಕೊಂಡು ನಡೆ. ಅದರಿಂದ ನೀನು ನುಲಿಯನ್ನು ಹೊಸೆದು ಕಣ್ಣಿಯನ್ನು ಮಾಡಿ ಅದನ್ನು ಮಾರಿ ಅದರಿಂದ ಬಂದ ಹಣದಿಂದ ನೀನು ನನ್ನ ಜಂಗಮದಾಸೋಹದಲ್ಲಿ ನೆರವಾಗಬೇಕು. ಇದಕ್ಕೆ ಒಪ್ಪಿದೆಯಾದರೆ ನನ್ನ ಕೂಡ ಬಾ ಎಂದು ಹೇಳಲು ಆ ಲಿಂಗದೇವನು ಅದಕ್ಕೆ ಒಪ್ಪಲು, ಉಭಯತರು ಮಡಿವಾಳಯ್ಯನನ್ನು ನಮಸ್ಕರಿಸಿ ಮನೆಯ ಕಡೆಗೆ ಹೊರಟರು.

ಅವರು ಮನೆಗೆ ಬಂದ ಬಳಿಕ ಲಿಂಗದೇವನು ತಾನು ಒಪ್ಪಿಕೊಂಡ ಪ್ರಕಾರ ನುಲಿಯನ್ನು ಹೊಸೆದು ಹಗ್ಗವನ್ನು ಮಾಡಹತ್ತಿದನು. ಅದರಿಂದ ಒಂದು ಕಣ್ಣಿಯನ್ನು ಮಾಡಿ ಅದನ್ನು ಅಂಗಡಿಗೆ ಮಾರಲಿಕ್ಕೆ ಹೋಗಲು ಅಂಗಡಿಯವನು ಈ ನುಲಿಯು ಬಹಳ ಗಂಟುಳ್ಳದ್ದಿದೆ ಎಂದು ಧಿಕ್ಕರಿಸಿಬಿಟ್ಟನು. ಆಗ ಅವನು ಪೇಟೆಯಲ್ಲಿಯ ಬೇರೆ ಅಂಗಡಿಗಳಿಗೆ ಹೋಗಿ ತೋರಿಸಲು, ಅಂಗಡಿಯವರಾರೂ ತೆಗೆದುಕೊಳ್ಳಲಿಲ್ಲ. ಆಗ ಲಿಂಗದೇವನು ಜಂಗಮಕಾಯಕವು ನನ್ನಿಂದ ಚಂದಯ್ಯನಿಗೆ ತಪ್ಪುವದೆಂದು ಭೀತಿಯುಳ್ಳವನಾಗಿ, ಕಡೆಗೆ ಉಪಾಯಗಾಣದೆ ಬಸವೇಶ್ವರನಲ್ಲಿಗೆ ಹೋಗಿ ಕಣ್ಣಿಯನ್ನು ಮಾರತೆಗೆದುಕೊಳ್ಳಲು ಅವನಿಗೆ ಕೇಳಿದನು. ಅವನು ನಡೆದ ಎಲ್ಲ ಸಂಗತಿಗಳನ್ನು ತನ್ನ ಲಿಂಗದಲ್ಲಿ ತಿಳಿದು, ಆ ಕಣ್ಣಿಗೆ ಒಂದು ಸಾವಿರ ಹೊನ್ನುಗಳನ್ನು ಕೊಟ್ಟು ಅದನ್ನು ತೆಗೆದುಕೊಂಡನು. ಆಗ ಲಿಂಗದೇವನು ಬಹಳ ಹರುಷಿತನಾಗಿ ' ಆ ಹಣವನ್ನು ತೆಗೆದುಕೊಂಡು ಚಂದಯ್ಯನಲ್ಲಿಗೆ ಬಂದು ಆ ಹಣವನ್ನೆಲ್ಲ ಅವನ ಮುಂದೆ ಸುರಿಯಲು ಅದನ್ನು ಚಂದಯ್ಯನು ಕಂಡು ಇಷ್ಟು ಹಣ ನಿನಗೆ ಎಲ್ಲಿಂದ ಬಂದಿತು? ಇದನ್ನು ನೀನು ಕಳವು ಮಾಡಿ ತಂದೆಯಾ? ಎಂದು ಕೇಳಲು, ಲಿಂಗದೇವನು ನಡೆದ ಎಲ್ಲ ಸಂಗತಿಗಳನ್ನು ತಿಳಿ

ಸಲು ಚಂದಯ್ಯನು— ಇದು ಕಾಯಕದ ರೀತಿಯಲ್ಲ. ಈ ಕಣ್ಣಿಯ ಬೆಲೆಯು ಒಂದು ಹಾಗ ಮಾತ್ರ. ಆದ್ದರಿಂದ ಈ ಹೊನ್ನುಗಳನ್ನು ಬಸವೇಶ್ವರನಿಗೆ ತಿರುಗಿ ಕೊಟ್ಟು ಒಂದು ಹಾಗದಷ್ಟು ರೊಕ್ಕ ಮಾತ್ರ ತಂದುಕೊಡು ಎಂದು ಹೇಳಿದನು.

ಆಗ ಲಿಂಗದೇವನು ಖಿನ್ನಮನಸ್ಕನಾಗಿ ಬಸವೇಶ್ವರನಲ್ಲಿ ತಿರುಗಿ ಬಂದು ಹೊನ್ನುಗಳನ್ನೆಲ್ಲ ಅವನಿಗೆ ಕೊಟ್ಟು ಅವನಿಂದ ಕಣ್ಣಿಯ ಬೆಲೆ ಒಂದು ಹಾಗ ಮಾತ್ರ ತಂದು ಚಂದಯ್ಯನಿಗೆ ತಂದೊಪ್ಪಿಯಾಗಿ ಸಿದನು. ಚಂದಯ್ಯನು ಅದರಿಂದ ಜಂಗಮಾರ್ಚನೆಯ ಪದಾರ್ಥಗಳನ್ನು ತಂದು ಜಂಗಮನಿಗೆ ನೀಡಿ ಅಂದಿನ ದಿನ ತನ್ನ ಶಿವಭಕ್ತಿಯನ್ನು ಆಚರಿಸಿದನು.

ಆಮೇಲೆ ಚಂದಯ್ಯನು ತಾನು ಮಡಿವಾಳಮಾಚಿದೇವನಿಗೆ ಮಾತು ಕೊಟ್ಟಂತೆ ಲಿಂಗದೇವನೊಡನೆ ಶಿವಾನುಭವಮಂಟಪಕ್ಕೆ ಬಂದು ಅಲ್ಲಿ ನೆರೆದಿದ್ದ ಪ್ರಭುದೇವ, ಬಸವ, ಮಡಿವಾಳಮಾಚಿದೇವ, ಚನ್ನಬಸವ ಮೊದಲಾದ ಶಿವಜ್ಞಾನಿಗಳಿಗೆ ಸಾಷ್ಟಾಂಗವೆರಗಿದನು ಮತ್ತು ಅವರಿಗೆ ನಡೆದ ಸಂಗತಿಗಳನ್ನೆಲ್ಲ ಅವರಿಗೆ ನಿವೇದಿಸಿದನು.

ಚಂದಯ್ಯನು ತನ್ನ ಆಚರಣೆಯನ್ನು ಕುರಿತು ಶಿವಶರಣರೊಡನೆ ಅಂದದ್ದೇನೆಂದರೆ— ಗುರುಸೇವೆಯಿಂದ ಇಹದಲ್ಲಿ ಮತ್ತು ಲಿಂಗಸೇವೆಯಿಂದ ಪರದಲ್ಲಿ ಸುಖವಿದೆ. ಆದರೆ ಜಂಗಮಸೇವೆ ಮಾಡಿದಲ್ಲಿ ಇಹ ಪರವೆರಡೂ ಸಾಧಿಸುತ್ತವೆ. ಗುರುಪೂಜಕರು ಲಿಂಗವನ್ನರಿಯರು ಮತ್ತು ಲಿಂಗಪೂಜಕರು ಜಂಗಮವನ್ನರಿಯರು. ಆದರೆ ಭಕ್ತರು ಜಂಗಮ ದಾಸೋಹದಿಂದ ಗುರು ಮತ್ತು ಲಿಂಗ ಇವರಡನ್ನೂ ಅರಿತುಕೊಂಡು ಅವುಗಳನ್ನು ತಮ್ಮ ಒಳಗು ಮಾಡಿಕೊಳ್ಳಲು ಸಾಮರ್ಥ್ಯವನ್ನು ಹೊಂದುವರು. ಗುರು ಲಿಂಗ ಜಂಗಮ ಈ ಮೂವರೂ ಜಂಗಮದಲ್ಲಿರುತ್ತಾರೆ. ಆದ್ದರಿಂದ ಜಂಗಮ ದಾಸೋಹವೇ ಘನತರವಾದದ್ದೆಂದು ವಾದಿಸಿದನು.

ಆದರೆ ಪ್ರಭುದೇವ, ಮಡಿವಾಳ ಮಾಚಿದೇವ ಮೊದಲಾದ ಶಿವ ಶರಣರು ಚಂದಯ್ಯನ ಅಭಿಪ್ರಾಯವನ್ನು ಒಪ್ಪದೆ, ಅದನ್ನು ಖಂಡಿ

ಸುತ್ತ ನುಡಿದದ್ದೇನೆಂದರೆ— ಅಂಗವಿರುವ ವರೆಗೆ ಲಿಂಗ ಪೂಜೆಯನ್ನು ಮಾಡಲೇಬೇಕು. ರತ್ನ ವಿಶೇಷವಿದ್ದರೂ ಅದು ಕುಂದಣದಲ್ಲಿ ಸಂದಿರುವಂತೆ, ಭಕ್ತನು ಲಿಂಗದಲ್ಲಿ ಸಂದಿರಬೇಕು. ಭಕ್ತನು ಜಂಗಮ ದಾಸೋಹದಲ್ಲಿದ್ದರೂ ಅವನು ಲಿಂಗದಿಂದ ದೂರನಾಗಿರಬಾರದು. ಗುರು ಲಿಂಗ ಜಂಗಮಗಳು ಈ ಮೂವರೂ ಪರಸ್ಪರಾವಲಂಬಿಗಳು. ಅವು ಒಂದನ್ನೊಂದು ಬಿಟ್ಟು ಇರಲಾರವು ಎಂದು ವಾದಿಸಿದರು.

ಹೀಗೆ ಎಲ್ಲರೂ ಅನೇಕ ರೀತಿಯಿಂದ ವಾದಮಾಡಿ ಕೊನೆಗೆ ಆವರೆಲ್ಲರೂ ಗುರುಲಿಂಗ ಜಂಗಮದ ರೀತಿಯನ್ನು ಶಿವಜ್ಞಾನಿಯಾದ ಚನ್ನಬಸವಣ್ಣನು ಬಲ್ಲನು, ಅವನು ಅದನ್ನು ತಿಳುಹಬೇಕೆಂತಲೂ ಅವನು ಹೇಳಿದ್ದನ್ನು ಎಲ್ಲರೂ ಒಪ್ಪಬೇಕೆಂತಲೂ ಎಲ್ಲರೂ ಒಡಂಬಡಲು, ಚನ್ನಬಸವಣ್ಣನು ಇವುಗಳ ಮರ್ಮವನ್ನು ಹೇಳುವಲ್ಲಿ ವಿವರಿಸಿದ್ದೇನೆಂದರೆಃ—ಗುರುಲಿಂಗ ಜಂಗಮಗಳು ಒಂದನ್ನು ಬಿಟ್ಟು ಒಂದು ಇರಲಾರವು. ಈ ತ್ರಿವಿಧವು ಕೂಡಿದರೆ ಮಾತ್ರ ಅದು ಜಂಗಮದಾಸೋಹವಾಗುವದು. ಗುರುಕರುಣವೇ ಲಿಂಗವು. ಆ ಲಿಂಗದ ನಿಜತ್ವವೇ ಜಂಗಮವು. ಹೀಗೆ ಭಾವಿಸಿ ಆಚರಿಸುವದೇ ಬಹಿರಂಗದ ವರ್ತನೆಯು. ಇವುಗಳಿಗೆ ಅಂತರಂಗದ ವರ್ತನೆಯೂ ಕೂಡ ಇದೆ. ಆಗ ಸುಜ್ಞಾನವೇ ಜಂಗಮವು. ಆ ಜಂಗಮದ ನಡೆಯೇ ಲಿಂಗವು. ಈ ಎರಡರ ಏಕತ್ವಸಿದ್ಧಿಯೇ ಗುರುವು. ಆದ್ದರಿಂದ ಜಂಗಮ ದಾಸೋಹವಿಲ್ಲದಿದ್ದರೆ ಲಿಂಗತೃಪ್ತಿಯಾಗಲಾರದು. ಹಾಗೆಯೇ ಅಂಗದ ಮೇಲೆ ಲಿಂಗವಿಲ್ಲದಿದ್ದರೆ ಜಂಗಮ ಸೇವೆಯೂ ಘಟಿಸಲಾರದು. ಯಾಕಂದರೆ ಜಂಗಮದ ಅಂಗವು ಲಿಂಗವಾಗಿರುತ್ತದೆ. ಆ ಲಿಂಗ ಚೈತನ್ಯದ ಅರಿವೇ ಜಂಗಮವಾಗಿರುತ್ತದೆ. ಹೀಗೆ ಅವುಗಳ ಪರಸ್ಪರ ಸಂಬಂಧವಿದೆಂದು ಹೇಳಿ ಇದಕ್ಕೆ ಅವನು ಉದಾಹರಣೆಯನ್ನು ಕೊಟ್ಟದ್ದೇನಂದರೆ ಅಂಗವೇ ಮಣ್ಣು, ಲಿಂಗವೇ ಮರವು, ಫಲವೇ ಜಂಗಮವು, ಫಲದ ರುಚಿಯೇ ಪ್ರಸಾದವು ಎಂದು ಹೇಳಬಹುದು. ಗುರು ಲಿಂಗ ಜಂಗಮದ ಪರಸ್ಪರ ಸಂಬಂಧವು ಹೀಗೆ ಇದೆ, ಎಂದು ವಿವರಿಸಿ ನುಡಿದನು. ಇದನ್ನು ಅಲ್ಲಿ ನೆರೆದ ಎಲ್ಲ ಶಿವಶರಣರು ಒಪ್ಪಿದರು. ಅಲ್ಲದೆ ಚಂದಯ್ಯನೂ ಕೂಡ ಒಪ್ಪಿಕೊಂಡು ಇಷ್ಟಲಿಂಗವನ್ನು ಆದರಿಸುವವನಾದನು. ಅಂದಿನಿಂದ ನುಲಿಯ ಚಂದಯ್ಯನು ಕ್ರಿಯಾಜ್ಞಾನ

ಗಳ ಭೇದವನ್ನು ಅರಿತುಕೊಂಡು ಗುರು ಲಿಂಗ ಜಂಗಮಗಳನ್ನು ಸೇವಿಸುವವನಾಗಿ ದಾಸೋಹಿಯಾಗಿ ಅಂತ್ಯದಲ್ಲಿ ಲಿಂಗಾಂಗ ಸಾಮರಸ್ಯವನ್ನು ಹೊಂದಿದನು.

ಶಿವಶರಣರು ಸ್ವತಂತ್ರ ವಿಚಾರಿಗಳು. ಅವರು ತಮ್ಮ ಅನುಭವದಂತೆ ನಡಿಯುವವರು, ಮತ್ತು ನುಡಿಯುವವರು. ಆದ್ದರಿಂದ ಅವರು ಸಮಾಜದಲ್ಲಿ ಉಚ್ಚಸ್ಥಿತಿಯನ್ನು ಹೊಂದಿದವರಾದರು. ಅವರು ಅನುಭವಿಗಳಾದರೂ ಹಠವಾದಿಗಳಾಗಿರಲಿಲ್ಲ. ಅವರು ನಿರಾತಂಕವಾಗಿ ತಮ್ಮ ಅನುಭವಗಳನ್ನು ಇತರ ಶರಣರೊಡನೆ ಹೇಳಿ ಪರಸ್ಪರ ವಿಚಾರವಿನಿಮಯ ಮಾಡುವರು. ಹೀಗೆ ಎಲ್ಲರೂ ಕೂಡಿ ವಿಚಾರಮಾಡಿದ್ದನ್ನು ಅವರು ತಮ್ಮ ತಮ್ಮ ವಚನಗಳ ಮೂಲಕ ಎಲ್ಲ ಕಡೆಗೂ ಪ್ರಸಾರಮಾಡುವರು. ಇದರಿಂದ ವೀರಶೈವ ವಾಙ್ಮಯದಲ್ಲಿ ಅತ್ಯಂತ ಶ್ರೇಷ್ಠವಾದ ವಚನ ವಾಙ್ಮಯವು ಉಂಟಾಗಿರುತ್ತದೆ.

ಬಸವೇಶ್ವರನ ಕಾಲದಲ್ಲಿ ಗುರು ಲಿಂಗ ಜಂಗಮ ಇವುಗಳ ವಿಷಯವಾಗಿ ಬಹು ದೀರ್ಘವಾದ ವಿಚಾರಗಳು ನಡೆದಿದ್ದು ಕಂಡುಬರುತ್ತದೆ. ಭಕ್ತನು ತನ್ನಲ್ಲಿಯೇ ಗುರುತತ್ವ ಲಿಂಗತತ್ವ ಜಂಗಮ ತತ್ವಗಳನ್ನು ಉಂಟುಮಾಡಿಕೊಂಡು ಲಿಂಗಾಂಗ ಸಾಮರಸ್ಯವನ್ನು ಹೊಂದತಕ್ಕದ್ದು. ಇದೇ ಅವನ ಆಚರಣೆಯಾಗಿರತಕ್ಕದ್ದು. ಈ ವಿವರಗಳು ನುಲಿಯ ಚಂದಯ್ಯನ ಚರಿತ್ರೆಯಲ್ಲಿ ಬಂದಿರುತ್ತವೆ. ಇದಲ್ಲದೆ ಶಿವಶರಣರು ಶಿವಾನುಭವ ಮಂಟಪದಲ್ಲಿ ನೆರೆದು ತಮಗುಂಟಾದ ಅನುಭವಗಳನ್ನು ಹೇಗೆ ಪರಸ್ಪರ ಚರ್ಚಿಸಿ ತಮ್ಮ ನಡೆಗಳನ್ನು ಸರಿಪಡಿಸಿಕೊಳ್ಳುತ್ತಿದ್ದರೆಂಬುದೂ ಈ ಚರಿತ್ರೆಯಿಂದ ತಿಳಿದು ಬರುತ್ತದೆ.

ನುಲಿಯ ಚಂದಯ್ಯನು ವಚನಕಾರನಿದ್ದಾನೆ. ಅವನ ನಾಲ್ಕು ವಚನಗಳು ಮಾತ್ರ ನಮಗೆ ದೊರೆತಿವೆ. ಆದರೆ ಅವನ ಅನೇಕ ವಚನಗಳು ಶೂನ್ಯ ಸಂಪಾದನೆ ಗ್ರಂಥದಲ್ಲಿ ಉದಹರಿಸಲ್ಪಟ್ಟಿವೆ. ಅವುಗಳಲ್ಲಿ ಕೆಲವುಗಳನ್ನು ಮಾತ್ರ ನಾವು ಇಲ್ಲಿ ಉದಹರಿಸಿದ್ದೇವೆ. ಇವನ ಮುದ್ರಿಕೆಯು 'ಚಂದೇಶ್ವರ' ಎಂದಿದೆ.

ನುಲಿಯ ಚಂದಯ್ಯನ ಗ್ರಾಮವಾವುದೆಂಬುದು ನಿಶ್ಚಿತವಾಗಿ ತಿಳಿದಿಲ್ಲ. ಅವನ ಗ್ರಾಮವು ವಿಜಾಪುರ ಪಟ್ಟಣದಿಂದ ಪೂರ್ವಕ್ಕೆ ೧೮ ಮೈಲುಗಳ ಮೇಲಿರುವ 'ಶಿವಣಗಿ' ಎಂಬುದೇ ಇರುತ್ತದೆಂದು ಅಲ್ಲಿ ಐತಿಹ್ಯವದೆ.

## ವಚನಗಳು.

(೧) ಕಂದಿಸಿ, ಬಂಧಿಸಿ, ಕಂಡವರ ಬೇಡಿತಂದು ಜಂಗಮಕ್ಕೆ ಮಾಡಿಹೆನೆಂಬ ದಂದುಗದ ಮಾಟಕ್ಕೆ ಲಿಂಗ ನೈವೇದ್ಯ ಸಲ್ಲದು. ತನು ಕರಗಿ ಮನ ಬಳಲಿ ಬಂದ ತೆರದನುವನರಿದು ಸಂಶಯವಿಲ್ಲದೆ ಜಂಗಮ ಲಿಂಗಕ್ಕೆ ದಾಸೋಹ ಮಾಡುವುದೇ ಮಾಟ. ಕಾರೆಯ ಕಾಯಿ ಕಾಡ ಸೊಪ್ಪಾದರೂ ಕಾಯಕದಿಂದ ಬಂದುದ ಲಿಂಗಾರ್ಪಿತವಲ್ಲದೆ ದುರಾಸೆಯಿಂದ ಬಂದುದು ಅನರ್ಪಿತ. ಇದು ಕಾರಣ ಸತ್ಯ ಶುದ್ಧ ಕಾಯಕದ ನಿತ್ಯ ದ್ರವ್ಯವಾದರೆ ಚಂದೇಶ್ವರ ಲಿಂಗಕ್ಕೆ ನೈವೇದ್ಯ.

(೨) ಭಾವಶುದ್ಧವಾಗಿಪ್ಪುದೇ ಗುರುಪೂಜೆ. ಜ್ಞಾನಶುದ್ಧವಾಗಿಪ್ಪುದೇ ಲಿಂಗಪೂಜೆ. ತ್ರಿಕರಣಶುದ್ಧವಾಗಿಪ್ಪುದೇ ಜಂಗಮಪೂಜೆ. ಈ ತ್ರಿವಿಧಭೇದದಲ್ಲಿ ತ್ರಿವಿಧಾರ್ಪಣವ ಸಮರ್ಪಿಸಿ ನಿಂದುದೇ ಚಂದೇಶ್ವರ ಲಿಂಗಕ್ಕೆ ಅರ್ಪಿತ.

(೩) ಸತ್ಯಶುದ್ಧ ಕಾಯಕದಲ್ಲಿ ಬಂದ ದ್ರವ್ಯದಲ್ಲಿ ಚಿತ್ತ ವಿಸ್ಕಂದವಾಗದಿರಬೇಕು. ನೇಮದ ಕೂಲಿಯಿಂದಿನ ನಿತ್ಯನೇಮದಲ್ಲಿ ಸಂದಿರಬೇಕು. ನೇಮದ ಕೂಲಿಯ ಬಿಟ್ಟು ಹೇಮದಾಸೆಗೆ ಕಾಮಿಸಿ ದ್ರವ್ಯವ ಹಿಡಿದರೆ ತಾ ಮಾಡುವ ಸೇವೆ ನಷ್ಟವಯ್ಯಾ. ನನಗೆ ಜಂಗಮದ ಪ್ರಸಾದದಾಗು ಚಂದೇಶ್ವರಲಿಂಗಕ್ಕೆ ಪ್ರಾಣವಯ್ಯಾ.

---

# ಮೋಳಿಗೆಯ ಮಾರಯ್ಯ.

ಕಾಶ್ಮೀರ ದೇಶದಲ್ಲಿ ಮಾಂಡವ್ಯಪುರವೆಂಬ ರಾಜಧಾನಿಯಲ್ಲಿ 'ಮಹಾದೇವರಾಜ'ನೆಂಬ ಅರಸನು ಆಳುತ್ತಿದ್ದನು. ಅವನು ಆಳುತ್ತಿದ್ದ ದೇಶವು ೧ ಲಕ್ಷದ ಮೇಲೆ ೨೫ ಸಾವಿರದ ರಾಜ್ಯವಾಗಿತ್ತು. ಅವನ ಹೆಂಡತಿಯ ಹೆಸರು ಗಂಗಾಂಬಿಕೆಯು. ಆ ದೇಶದಲ್ಲಿ ಎಲ್ಲೆಲ್ಲಿಯೂ ಶೈವಮತಸ್ಥರು. ಅವರು ಆಗಮಜ್ಞರು, ಲಿಂಗನಿಷ್ಠರು, ಸದಾಚಾರಿಗಳು. ಮಹಾದೇವರಸನಾದರೂ ಅತ್ಯಂತ ಧರ್ಮನಿಷ್ಠನಾಗಿ ಪ್ರಜೆಗಳ ಅನುರಾಗವನ್ನು ಸಂಪಾದಿಸಿ ರಾಜ್ಯವಾಳುತ್ತಿದ್ದನು.

೧೧ನೇ ೧೨ನೇ ಶತಮಾನಗಳಲ್ಲಿ ಕಾಶ್ಮೀರ ದೇಶದ ಬಹುಜನ ಪಂಡಿತರು ಕರ್ನಾಟಕಕ್ಕೆ ಬಂದು ಅಲ್ಲಿಯ ರಾಜರಿಂದ ಮನ್ನಣೆಯನ್ನು ಹೊಂದುತ್ತಿದ್ದರು. ಕರ್ನಾಟಕದ ಜಂಗಮರೂ ಶಿವಾನುಭವಿಗಳೂ ಕೂಡ ಕಾಶ್ಮೀರ ದೇಶಕ್ಕೆ ಹೋಗಿ ಅಲ್ಲಿ ತಮ್ಮ ಶಿವಜ್ಞಾನವನ್ನು ಬೋಧಿಸುವವರಾಗಿದ್ದರು. ಮತ್ತು ಅವರಲ್ಲಿ ಬಹುಜನರು ಅಲ್ಲಿಯೇ ವಾಸ ಮಾಡುತ್ತಿದ್ದರು.

ಬಸವೇಶ್ವರನು ಕಾಶ್ಮೀರ ದೇಶದಲ್ಲಿ ಶಿವಜ್ಞಾನಿಗಳಾದ ಬಹುಜನ ಜಂಗಮರು ವಾಸ ಮಾಡಿಕೊಂಡದ್ದನ್ನು ತಿಳಿದು ಅವರನ್ನು ಕಲ್ಯಾಣಕ್ಕೆ ಬರಮಾಡಿಕೊಳ್ಳಬೇಕೆಂದು ಅಪೇಕ್ಷಿಸಿ ಒಬ್ಬ ಸೆಟ್ಟಿಯ ವೇಷವನ್ನು ಧಾರಣಮಾಡಿ ಮಾಂಡವ್ಯಪುರಕ್ಕೆ ಬಂದು ಮಹಾದೇವರಸನ ರಾಜ್ಯದಲ್ಲಿದ್ದ ಆರು ಸಾವಿರ ಜಂಗಮರನ್ನು ಗುಪ್ತರೀತಿಯಿಂದ ಕರೆದುಕೊಂಡು ಬಂದನೆಂಬ ಐತಿಹ್ಯವಿದೆ. ಹಿಂದಿನ ಕಾಲದಲ್ಲಿ ಕರ್ನಾಟಕಕ್ಕೂ ಮಧ್ಯ ಮತ್ತು ಉತ್ತರ ಹಿಂದುಸ್ತಾನಗಳಲ್ಲಿರುವ ಗುಜರಾಥ, ಒಡಿಸಾಪ್ರಾಂತ, ಉತ್ತರ ಆಂಧ್ರ, ಕಾಶ್ಮೀರ, ಸಂಯುಕ್ತಪ್ರಾಂತಗಳಿಗೂ ನಿಕಟ ಸಂಬಂಧವಿದ್ದುದು ಆಯಾ ದೇಶಗಳಲ್ಲಿ ಆಳಿದ ಕರ್ನಾಟಕ ರಾಜಮನೆತನಗಳ ಇತಿಹಾಸ, ಶಿವಶರಣರ ಚರಿತ್ರೆಗಳು ಮತ್ತು ಅಲ್ಲಿ ಈಗಲೂ ಇರುವ ಕುರುಹುಗಳ ಮತ್ತು ಮಠಗಳ ಅಸ್ತಿತ್ವ ಇವುಗಳಿಂದ ಸಿದ್ಧವಾಗುತ್ತದೆ.

ಮಹಾದೇವರಾಜನ ತಂಗಿಯ ಹೆಸರು ನಿಜದೇವಿಯು. ಅವಳು ಶಿವಾನುಭವಕ್ಕೆ ಮೆಚ್ಚಿದವಳಾಗಿ ತನ್ನ ರಾಜವೈಭವವನ್ನು ತೊರೆದು

ಕಲ್ಯಾಣ ಪಟ್ಟಣಕ್ಕೆ ಬಂದು 'ಬೊಂತಾದೇವಿ' ಎಂಬ ಹೆಸರಿನಿಂದ ಪ್ರಸಿದ್ಧಳಾಗಿದ್ದಾಳೆ. ಅವಳು ವಚನಕಾರಳೂ ಇದ್ದಾಳೆ.

ಹೀಗಿರಲು ಒಂದಾನೊಂದು ದಿವಸ ಮಹಾದೇವರಸನ ಗುರುವಿನ ಒಡಹುಟ್ಟಿದವರು ಕಲ್ಯಾಣ ಪಟ್ಟಣದಿಂದ ಕಾಶ್ಮೀರಕ್ಕೆ ತಿರುಗಿ ಬಂದು ಅವನನ್ನು ಕಾಣಲು, ಅವನು ಅವರಿಗೆ ಹಣವನ್ನು ಕಾಣಿಕೆಯಾಗಿ ಕೊಡಹೋದನು. ಆದರೆ ಅವರು:—ಈ ಹಣವು ನಮಗೆ ಬೇಡ ಎಂದೆನ್ನಲು, ಅರಸನು–ಹಾಗಾದರೆ ನಿಮಗೇನು ಬೇಕು? ಎಂದು ಕೇಳಲು ಅವರು— ಈ ರಾಜ್ಯದಿಂದ ನಿನಗೆ ಬಂದುದು ನಮಗೆ ಬೇಡ. ಆದರೆ ನಿನ್ನ ಉದ್ಯೋಗದಿಂದ ಬಂದ ಹಣವಿದ್ದರೆ ಅದನ್ನು ಕೊಡು ಎಂದು ಹೇಳಿದರು. ಇಂಥ ಹಣವು ಅರಸನಲ್ಲಿ ಇಲ್ಲದ್ದರಿಂದ ಅವನು ತನ್ನ ವೇಷವನ್ನು ಬದಲಿಸಿಕೊಂಡು ಒಬ್ಬ ಕಮ್ಮಾರನ ಕುಲುಮೆಯಲ್ಲಿ ಹೋಗಿ ಅಲ್ಲಿ ಕೂಲಿಯನ್ನು ಮಾಡುತ್ತ ನಿಂತುಕೊಂಡು ಕಬ್ಬಿಣವನ್ನು ಬಡಿಯಲಿಕ್ಕೆ ಹತ್ತಿದನು. ಹೀಗೆ ಕಾಯಕವನ್ನು ಮಾಡಿ ಆ ಕಮ್ಮಾರನ ಕಡೆಯಿಂದ ಒಂದು ಕಬ್ಬಿಣದ ಗಟ್ಟಿಯನ್ನು ಕೂಲಿಯಾಗಿ ತೆಗೆದುಕೊಂಡು ಬಂದು ಅದನ್ನು ತನ್ನ ಗುರುವಿನ ಒಡಹುಟ್ಟಿದವರಿಗೆ ಕಾಣಿಕೆಯಾಗಿ ತಂದು ಕೊಟ್ಟನು. ಅವರು ಅದನ್ನು ಆನಂದದಿಂದ ಸ್ವೀಕರಿಸಿ ತೆಗೆದುಕೊಂಡು ಹೋಗಲು ಅದು ಅವರಲ್ಲಿ ಚಿನ್ನವಾಯಿತು!

ರಾಜನು ತಾನು ಕೂಲಿಯಾಗಿ ಕೊಟ್ಟ ಕಬ್ಬಿಣದ ತುಂಡು ಹೀಗೆ ಚಿನ್ನವಾದುದನ್ನು ಕೇಳಿ ಅವನಲ್ಲಿ ವಿರಕ್ತಿಯುಂಟಾಯಿತು. ಅವನಲ್ಲಿ ರಾಜ್ಯಮೋಹವು ತಪ್ಪಿತು. ಅವನು—ಈ ರಾಜ್ಯವು ಅನಿತ್ಯವಾದುದು, ಇದರಲ್ಲಿ ಹುರುಳಿಲ್ಲ ಎಂದು ಭಾವಿಸಿ ತನ್ನ ಪಟ್ಟಣವನ್ನು ತನ್ನ ಮಗನಾದ 'ಲಿಂಗಾರತಿ'ಗೆ ಕೊಟ್ಟು, ಶಿವಶರಣರಿಂದ ಶಿವಾನುಭವವನ್ನು ಅರಿಯಬೇಕೆಂದು ಕಲ್ಯಾಣ ಪಟ್ಟಣಕ್ಕೆ ಹೊರಟನು. ಅವನೊಡನೆ ಸಾಧ್ವಿಯಾದ ಅವನ ಹೆಂಡತಿ ಗಂಗಾಂಬಿಕೆಯೂ ಹೊರಟಳು.

ಕಲ್ಯಾಣ ಪಟ್ಟಣವು ಕಾಶ್ಮೀರ ದೇಶದಿಂದ ಬಹು ದೂರವಾಗಿರುತ್ತದೆ. ಆದರೆ ಉಭಯತರು ಮಾರ್ಗಕ್ರಮಣ ಮಾಡುವಲ್ಲಿ ಅವರಿಗೆ ಶಿವಭಕ್ತಿಯೇ ರಥವಾಯಿತು. ಜ್ಞಾನವೇ ಅವರಿಗೆ ಚತ್ತರಿಗೆಯಾಯಿತು. ಲಿಂಗಾಂಗ ಸಮರಸಾಚರಣೆಯೇ ಅವರಿಗೆ ಸಕಲೋಪಚಾರವಾಯಿತು.

ಪಂಚೇಂದ್ರಿಯಗಳೇ ಅವರಿಗೆ ಚತುರಂಗಬಲವಾಯಿತು. ಹೀಗೆ ಅವರು ಮಾರ್ಗಾಯಾಸವಿಲ್ಲದೆ ಆನಂದದಿಂದ ಮಾರ್ಗ ಕ್ರಮಣ ಮಾಡುತ್ತ ಭೂ ಕೈಲಾಸವೆನಿಸಿಕೊಂಡ ಕಲ್ಯಾಣ ಪಟ್ಟಣಕ್ಕೆ ಬಂದು ಮುಟ್ಟಿದರು.

ಅವರು ಕಲ್ಯಾಣಕ್ಕೆ ಬಂದಬಳಿಕ ಅವರು ತಾವಾರೆಂಬುದನ್ನು ಯಾರಿಗೂ ತಿಳಿಯಗೊಡಲಿಲ್ಲ. ಮಹಾದೇವರಾಜನು ತಾನು ಮೋಳಿಗೆಯ ಮಾರಯ್ಯನೆಂತಲೂ, ಗಂಗಾಂಬಿಕೆಯು ತಾನು ಮಹಾದೇವಿಯಮ್ಮ ನೆಂತಲೂ ಹೆಸರು ಇಟ್ಟುಕೊಂಡರು. ರಾಜನು ಕಟ್ಟಿಗೆಯ ಕಾಯಕವನ್ನು ಕೈಕೊಂಡು, ದಿನಾಲು ಕಾಂತಾರಕ್ಕೆ ಹೋಗಿ ಕೊಡಲಿಯಿಂದ ಕಟ್ಟಿಗೆ ಗಳನ್ನು ಕಡಿದು ತಂದು, ಅಂಗಡಿಗಳಲ್ಲಿ ಮಾರಿ, ಇದರಿಂದ ಬಂದ ಹಣ ದಿಂದ ಜಂಗಮ ದಾಸೋಹ ಕಾರ್ಯಗಳನ್ನು ನಡಿಸಹತ್ತಿದನು. ಅವನು ಹೀಗೆ ಕಾಯಕವನ್ನು ಮಾಡುತ್ತ ಶಿವಾನುಭವದ ಆಚರಣೆಯಲ್ಲಿ ನಿರತ ನಾಗಿ ಪಟ್ಟಣದಲ್ಲಿ ಒಬ್ಬ ಶ್ರೇಷ್ಠ ಶಿವಾನುಭವಿ ಎಂದು ಹೆಸರು ಹೊಂದಿ ದನು. ಅವನಿಗೆ ಈ ಮಾರ್ಗವು ರಾಜವೈಭವದ ಉಪಭೋಗಕ್ಕಿಂತಲೂ ಹೆಚ್ಚಿಗೆ ಸುಖವೆನಿಸಿತು.

ಕಲ್ಯಾಣ ಪಟ್ಟಣದಲ್ಲಿದ್ದ ಜಂಗಮರು ಮೋಳಿಗಿ ಮಾರಯ್ಯನ ಈ ಉನ್ನತವಾದ ಶಿವಾನುಭವದ ನಡೆಯನ್ನು ತಿಳಿದವರಾಗಿ ಅವರು ಅವ ನನ್ನು ಬಸವೇಶ್ವರನ ಮುಂದೆ ಬಹಳ ಹೊಗಳಹತ್ತಿದರು. ಗುಣ ಗ್ರಾಹಿಯಾದ ಬಸವೇಶ್ವರನು ಅದನ್ನು ಕೇಳಿ ಮಾರಯ್ಯನನ್ನು ನೋಡ ಬೇಕೆಂದು ಒಂದು ದಿವಸ ತನ್ನ ಮಂತ್ರಿಯ ಉಡುಪುಗಳನ್ನು ತೆಗೆ ದಿಟ್ಟು ಒಬ್ಬ ಸಾಮಾನ್ಯ ಭಕ್ತನ ವೇಷವನ್ನು ಧರಿಸಿಕೊಂಡು ಅವನ ಮನೆಗೆ ಬಂದನು. ಆಗ ಮಾರಯ್ಯನು ಮನೆಯಲ್ಲಿ ಇದ್ದಿದ್ದಿಲ್ಲ. ಅವನು ಕಟ್ಟಿಗೆ ಕಡಿಯಲಿಕ್ಕೆ ಅಡವಿಗೆ ಹೋಗಿದ್ದನು. ಆದರೆ ಮನೆಯಲ್ಲಿ ಅವನ ಹೆಂಡತಿ ಮಹಾದೇವಿಯಮ್ಮನು ಇದ್ದದ್ದನ್ನು ನೋಡಿ ಬಸವೇ ಶ್ವರನು ಅವಳಿಗೆ ನಮಸ್ಕರಿಸಲು, ಅವಳು ಇವನೊಬ್ಬ ದೇಶಾಂತರಿ ಎಂದು ಭಾವಿಸಿ, ಅವನಿಗೆ ಲಿಂಗಾರ್ಚನೆಯನ್ನು ಮಾಡಿಸಿ ಬಹಳ ಸತ್ಕರಿ ಸಿದಳು. ಬಸವೇಶ್ವರನು ಅವರ ಮನೆಯನ್ನು ನೋಡುತ್ತಾನೆಯೇ, ಒಳಗೆ ಸೌಕರ್ಯದ ಪದಾರ್ಥಗಳೇನೂ ಕಾಣಲಿಲ್ಲ. ಇದರಿಂದ ಮಾರ ಯ್ಯನು ಅತ್ಯಂತ ಬಡವನಾಗಿರುತ್ತಾನೆಂದು ಅವನಿಗೆ ಕಂಡು ಬಂದಿತು.

ಆದ್ದರಿಂದ ಅವನು ಪ್ರಸಾದವನ್ನು ಭುಂಜಿಸಿ ಹೊರಗೆ ಹೋಗುವ ಕಾಲ ದಲ್ಲಿ ಪ್ರತಿಯೊಂದರಲ್ಲಿ ಸಾವಿರ ಹೊನ್ನು ತುಂಬಿದ ಎರಡು ಜಾಳಿಗೆಗಳನ್ನು ಮಹಾದೇವಿಯಮ್ಮನಿಗೆ ತಿಳಿಯದಂತೆ ಮನೆಯಲ್ಲಿರಿಸಿ ಅವಳಿಗೆ ಕೈ ಮುಗಿದು 'ಶರಣಾರ್ಥಿ' ಎಂದು ಹೇಳಿ ಹೊರಟು ಹೋದನು.

ಮೋಳಿಗೆಯ ಮಾರಯ್ಯನು ಮಧ್ಯಾಹ್ನ ಸಮಯದಲ್ಲಿ ಕಾಡಿನಿಂದ ಕಟ್ಟಿಗೆಯ ಹೊರೆಯನ್ನು ಹೊತ್ತು ತಂದು ಮನೆಯ ಬಾಗಿಲಲ್ಲಿ ಚಲ್ಲಿ ಸ್ನಾನಕ್ಕೆಂದು ಮಜ್ಜನ ಶಾಲೆಗೆ ಹೋದನು. ಅಲ್ಲಿ ನೋಡುತ್ತಾನೆಯೋ, ಅಲ್ಲಿ ಒಂದು ಮೂಲೆಯಲ್ಲಿ ಹೊನ್ನು ತುಂಬಿದ ಎರಡು ಜಾಳಿಗೆಗಳನ್ನು ಕಂಡನು. ಅದರ ವಿಷಯವಾಗಿ ಸತಿಯನ್ನು ಕೇಳಲಾಗಿ ಅವಳು ಒಬ್ಬ ಭಕ್ತನು ಇಲ್ಲಿಗೆ ಬಂದಿದ್ದನು, ಅವನು ಶಿವಾರ್ಚನೆ ಮಾಡಿ ಹೋದನು, ಎಂದು ತಿಳಿಸಿದಳು. ಆಗ ಮಾರಯ್ಯನು ಹಾಗೆ ಬಂದು ಹೋದವನು ಮತ್ತು ಹಣವನ್ನಿಟ್ಟವನು ಬಸವೇಶ್ವರನೇ ಅಹುದು ಎಂದು ಆಗಲೇ ತಿಳಿದವನಾಗಿ—ನಾವು ದುಡಿದದ್ದು ನಮಗೆ ಸಾಲುತ್ತದೆ. ನಾವು ಶುಚಿಗಳು. ನಮಗೆ ಈ ದುಡ್ಡಿನ ಹೆಮ್ಮೆ ಬೇಡ. ಆದರೆ ಬಸವೇಶ್ವರನು ನಾವು ನಿರ್ಧನಿಕರೆಂದು ಈ ಹೊನ್ನನ್ನು ನಮಗೆ ಕೊಟ್ಟು ಹೋಗಿದ್ದಾನೆಯೋ? ನಾವು ಬಡವರೇ? ಎಂದು ಕೋಪಿಸಿಕೊಂಡಿರಲು, ಅಷ್ಟರಲ್ಲಿ ಇಬ್ಬರು ಜಂಗಮರು ಮನೆಗೆ ಬಂದರು. ಮಾರಯ್ಯನು ಅವರನ್ನು ಮನೆಯಲ್ಲಿ ಬರಮಾಡಿಕೊಂಡು ಅವರಿಗೆ ಆ ಹೊನ್ನಿನ ಎರಡೂ ಜಾಳಿಗೆಗಳನ್ನು ಕೊಟ್ಟು ಬಿಟ್ಟನು. ಮತ್ತು ಅವರ ಪಾದತೀರ್ಥವನ್ನು ತೆಗೆದುಕೊಂಡು ಕಾಯಕದಿಂದ ತಾನು ತಂದಿದ್ದ ಕಟ್ಟಿಗೆಗಳ ಮೇಲೆ ಆ ತೀರ್ಥವನ್ನು ಚೆಲ್ಲಲಾಗಿ ಅವು ಹೊನ್ನದಂಡಗಳಾದವು. ಮಾರಯ್ಯನು ಅವುಗಳನ್ನು ಕಡಿಕಡಿದು ತನ್ನ ಮನೆಗೆ ಬರುತ್ತಿದ್ದ ಜಂಗಮರಿಗೆ ಕೊಟ್ಟು ಬಿಡಹತ್ತಿದನು. ಹೀಗೆ ಅವನು ಬಹುಜನ ಜಂಗಮರಿಗೆ ಕಾಣಿಕೆಗಳನ್ನು ಕೊಟ್ಟನು.

ಈ ಸಂಗತಿಯು ಬಸವೇಶ್ವರನಿಗೆ ತಿಳಿಯಲಾಗಿ, ಅವನು—ನಾನು ತಪ್ಪು ಮಾಡಿದೆನೆಂದು ಅವನಿಗೆ ಎನಿಸಿತು. ಅವನಿಗೆ ಪಶ್ಚಾತ್ತಾಪವಾಯಿತು. ಅವನು ಕೂಡಲೆ ಮೋಳಿಗೆಯ ಮಾರಯ್ಯನ ಮನೆಗೆ ಹೋಗಿ ಅವನಿಗೆ—ನಾನು ನಿಮಗೆ ತಪ್ಪು ಮಾಡಿದೆನು, ನನ್ನನ್ನು ಕ್ಷಮಿಸಬೇಕು, ಎಂದು ಸತಿಪತಿಗಳೀರ್ವರ ಚರಣಕ್ಕೆರಗಿದನು.



ಸಂಪುಟ ೨೦ ]  ಫೆಬ್ರುವರಿ ೧೯೪೬.  [ ಸಂಚಿಕೆ ೫

## ವಿಷಯಾನುಕ್ರಮಣಿಕೆ.

# ಸೂಚನೆ.

ಪ್ರೆಸ್ಸಿನ ಆಗತ್ಯದ ವಿಶೇಷ ಕೆಲಸಗಳ ಮೂಲಕ ಮಾರ್ಚ ತಿಂಗಳಿನ ಶಿವಾನುಭವ ಸಂಚಿಕೆಯನ್ನು ಪ್ರಕಟಿಸಲು ನಮಗೆ ಆಗದ್ದಕ್ಕೋಸ್ಕರ ವಿಷಾದಿಸುತ್ತೇವೆ. ಮಾರ್ಚ--ಎಪ್ರೇಲ ತಿಂಗಳುಗಳ ಸಂಚಿಕೆಯು ಎಪ್ರೆಲ ತಿಂಗಳಿನಲ್ಲಿ ಸಕಾಲದಲ್ಲಿ ಪ್ರಕಟವಾಗುವದು.

ಮ್ಯಾನೇಜರ--ಶಿವಾನುಭವ.

**ಪ್ರತಿ ತಿಂಗಳ ೧೫ನೇ ತಾರೀಖಿಗೆ ಪ್ರಕಟವಾಗುವದು.**

**ವಾರ್ಷಿಕ ಚಂದಾ ಅಂಚೆವೆಚ್ಚಸಹಿತ ರೂ. ೪--೮--೦ ವ್ಹಿ. ಪಿ. ಖರ್ಚು ೦--೪--೦**

ಶಿವಾನುಭವ

ವರ್ಷ ೨೦ | ಫೆಬ್ರುವರಿ ೧೯೪೬. | ಸಂಚಿಕೆ ೫

# ನಿವೃತ್ತ ಮುಖ್ಯ ನ್ಯಾಯಾಧೀಶರಾದ ರಾಜಧರ್ಮ ಪ್ರವೀಣ ದಿವಾನಬಹಾದ್ದೂರ ಶ್ರೀಮಾನ್ ಪಿ. ಮಹಾದೇವಯ್ಯ ಬಿ. ಎ. ಬಿ. ಎಲ್.

## ಇವರ ಭಾಷಣ.

(ಹಿಂದಿನ ಸಂಚಿಕೆಯಿಂದ ಸಾಗಿ ಮುಗಿದದ್ದು.)

### ವೀರಶೈವ ಸಮಾಜದ ಐತಿಹಾಸಿಕ ಮಹತ್ವ.

ವೀರಶೈವ ಸಮಾಜದ ಮಹತ್ವವು ಇದರಲ್ಲಿರುವ ಪಂಚಪೀಠಗಳ ಇತಿಹಾಸದಿಂದಲೂ ತಿಳಿಯುವಂತಿದೆ.

(೧) ಕಾಶಿಯಲ್ಲಿರುವ ಪ್ರಸಿದ್ಧವಾದ ಜಂಗಮವಾಡಿ ಮಠವು ಪಂಚಾಚಾರ್ಯರ ಇನ್ನೊಂದು ಪ್ರಾಚೀನ ಪೀಠವಾಗಿದೆ. ಇದನ್ನು ಶ್ರೀ ವಿಶ್ವಾರಾಧ್ಯರು ಸ್ಥಾಪಿಸಿದರು. ಇದಕ್ಕೆ ಹಿಂದೂರಾಜರಲ್ಲದೆ ಸುಪ್ರಸಿದ್ಧರಾದ ಹುಮಾಯೂನ್, ಅಕ್ಬರ್, ಜಹಾಂಗೀರ್, ಷಹಜಹಾನ್, ಔರಂಗಜೇಬ್, ಮಹಮ್ಮದ್‌ಷಹ ಮೊದಲಾದ ಮೊಗಲ್ ಚಕ್ರವರ್ತಿಗಳೂ ಸಹ ಈ ಸಂಸ್ಥಾನಕ್ಕೆ ಭೂದಾನಮಾಡಿರುತ್ತಾರೆ. ಈಗ ಕಾಶಿಯ ವಿಶ್ವವಿದ್ಯಾನಿಲಯವು ಕಟ್ಟಲ್ಪಟ್ಟಿರುವ ನಿವೇಶನವು ಹಿಂದೆ ಶ್ರೀ ಜಂಗಮವಾಡಿ ಸಂಸ್ಥಾನಕ್ಕೆ ಸೇರಿತ್ತು. ಸಂಸ್ಥಾನಾಧಿಪತಿಗಳಾದ ಶ್ರೀ ಸ್ವಾಮಿಗಳವರು ಅದನ್ನು ವಿಶ್ವವಿದ್ಯಾನಿಲಯಕ್ಕೆ ಕೊಟ್ಟಿರುತ್ತಾರೆ.

ಮಿಯು ಒಂದಾನೊಂದು ಪ್ರಾತಃಕಾಲ ಬಹಳ ಹೊತ್ತಿನವರೆಗೆ ಅರ್ಧನಗ್ನ
ನಾಗಿ ಧ್ಯಾನಮಗ್ನನಾಗಿದ್ದುದನ್ನು ಅನೇಕರು ನೋಡಿರುವುದು ಸರ್ವ
ವಿದಿತವಾಗಿದೆ. ಇಂಡಿಯ ಮತ್ತು ಈಜಿಪ್ಟ ದೇಶಗಳಲ್ಲಿ ಬ್ರಿಟಿಷ್
ಸೈನ್ಯಾಧಿಕಾರಿಯಾಗಿದ್ದ ಫೀಲ್ಡ ಮಾರ್ಶಲ್ ಲಾರ್ಡ ಕಿಚನರ್ (*Field Marshal Lord Kitchener*) ಅವರು ತಮ್ಮ ದೀರ್ಘಕಾಲದ ಅಧಿ
ಕಾರಾವಧಿಯಲ್ಲಿ ಪ್ರಾಚೀನ ಧ್ಯಾನಮಾರ್ಗವನ್ನು ಗುಪ್ತವಾಗಿ ಅಭ್ಯಾಸ
ಮಾಡಿ, ''ಅಸುವಾನ್" (*Assuan*) ಪಟ್ಟಣದಹತ್ತರ ನೈಲ್ ನದಿ
ಯಲ್ಲಿ ಅವರ ಹೆಸರಿನಿಂದ ಕರೆಯಲ್ಪಟ್ಟಿರುವ ದ್ವೀಪವೊಂದರಲ್ಲಿ ಧ್ಯಾನಾ
ಭ್ಯಾಸಮಾಡುತ್ತಿದ್ದರೆಂಬ ವಿಷಯವು ಈಚೆಗೆ ಪ್ರಕಾಶಕ್ಕೆ ಬಂದಿದೆ.
ಸಾಮಾನ್ಯ ಮನುಷ್ಯರಲ್ಲಿ ಮನಸ್ಸಿನ ಬೆಳಕು ಅನಿರ್ದಿಷ್ಟವಾಗಿ ಚದುರಿ
ಹೋಗಿರುವುದು. ಆದರೆ ಒಂದು ವಿಶಿಷ್ಟವಾದ ಸಾಧನಾಶಕ್ತಿಯಿಂದ
ಮನಸ್ಸಿನ ಅಂತಹ ಬೆಳಕನ್ನು ಕೇಂದ್ರೀಕರಿಸಿದರೆ ಜಾಜ್ವಲ್ಯಮಾನವಾದ
ಜ್ಯೋತಿಯಾಗುವುದು. ಯಾವ ಪದಾರ್ಥದ ಮೇಲಾಗಲಿ ಈ ಜ್ಯೋತಿಯ
ಕಿರಣವನ್ನು ಬಿಟ್ಟುದಾದರೆ ಆ ಪದಾರ್ಥವನ್ನು ಸಮಗ್ರವಾಗಿ ನೋಡ
ಬಹುದಲ್ಲದೆ, ಅದರಿಂದ ಉಪಯುಕ್ತವಾದ ವಿಷಯಗಳನ್ನೂ ತಿಳಿದು
ಕೊಳ್ಳಬಹುದು. ನೆಲದಮೇಲೆ ಅನೇಕ ದಿವಸಗಳಿಂದ ಬಿದ್ದಿರುವ
ಕಾಗದದ ಚೂರು ಯಾರ ಮನಸ್ಸಿನಲ್ಲಿಯೂ ಯಾವ ಕೌತುಕವನ್ನೂ
ಹುಟ್ಟಿಸುವದಿಲ್ಲ. ಆದರೆ ಸೂರ್ಯ ಕಿರಣಗಳ ಶಾಖವನ್ನು ಕೇಂದ್ರೀ
ಕರಿಸಿ ಸುಡುವ ಶಕ್ತಿಯನ್ನು ನಿದರ್ಶಿಸುವ ಲೆನ್ಸ್ (*Lens*) ಎಂಬ ಉಪ
ಕರಣದ ಸಹಾಯದಿಂದ ಆ ಕಾಗದವನ್ನು ನಾವು ಸುಟ್ಟಾಗ ಮಾತ್ರ ಅದರ
ಪ್ರಭಾವವು ಗೋಚರವಾಗುತ್ತಿದೆ. ಹಾಗೆಯೇ ಮಾನವನ ಮನಸ್ಸಿನಲ್ಲಿಯೂ
ಆಕರ್ಷಕ ಮತ್ತು ವಿರೋಧಕ ಗುಣಗಳಿರುವವು. ಅದರ ಆಕರ್ಷಣ
ಕ್ರಿಯೆಯು ಅಗೋಚರವಾಗಿ ಮನುಷ್ಯನ ಅಂತರಾತ್ಮನಲ್ಲಿ ಒಂದೇ ಸಮ
ನಾಗಿ ಸಾಗುತ್ತಲೇ ಇರುವುದು. ನಮಗೆ ಅದು ಅಗೋಚರವಾದರೂ
ನಿಶ್ಶಬ್ದವಾಗಿಯೂ ಗುಪ್ತವಾಗಿಯೂ ಅದರ ಪ್ರಭಾವವು ಎಡೆಬಿಡದೆ
ನಡೆಯುತ್ತಲೇ ಇರುವುದು. ಪ್ರಕೃತಿಯು ಆತ್ಮಶಕ್ತಿಗೆ ಅಧೀನವಾಗಿ
ರುವ ವಿಷಯವನ್ನು ನಿದರ್ಶನ ಪೂರ್ವಕವಾಗಿ ಒಬ್ಬ ಯೋಗಿಯು
ತೋರಿಸಿದಾಗ ಅದನ್ನು ಅತ್ಯಾಶ್ಚರ್ಯಕರವಾದ ಪವಾಡವೆನ್ನುವರು.
ಅಥವಾ ಮಹಿಮಾ ಶಾಲಿಯಾದ ಸುಪ್ರಸಿದ್ಧ ಏಸುಕ್ರಿಸ್ತನಂತಹ ಮಹ

ನೀಯನೊಬ್ಬನು ಅನೇಕರ ಹೃದಯ ಪರಿವರ್ತನೆ ಮಾಡಿದರೆ ಆಗ ನಾವು ಚಿತ್ತಸಂಯಮದಲ್ಲಿ ಅಡಗಿರುವ ಶಕ್ತಿಯು ಎಷ್ಟು ಮಹತ್ವವಾದುದೆಂಬ ದನ್ನು ಮಸಕುಮಸಕಾಗಿ ಅರಿಯುವವು. ಒಂದು ದೈವಿಕೋದ್ದೇಶವು ಇಡೀ ವಿಶ್ವದಲ್ಲೆಲ್ಲಾ ಅಡಗಿರುವುದೆಂದು ವಿಜ್ಞಾನಿಗಳು ಹೇಳುತ್ತಾರೆ. ಯಾವನು ಶುದ್ಧ ಧ್ಯಾನವನ್ನು ಅಭ್ಯಾಸಿಸಿ ಕಲಿಯುವನೋ ಅಂತವನು ಆ ದೈವಿಕೋದ್ದೇಶದ ಜೊತೆಗೆ ಬೆರೆತು ಮಿಳಿತನಾಗುವನು. ಅನಂತರ ಆ ದೈವಿಕೋದ್ದೇಶವು ಆ ಧ್ಯಾನಿಯನ್ನು ಅಜ್ಞಾನಿಗಳಾದ ಮಾನವರ ಉದ್ಧಾರಕ್ಕಾಗಿ ಪವಿತ್ರವಾದ ಸಲಕರಣೆಯನ್ನಾಗಿ ಭಾವಿಸಿ ಉಪಯೋ ಗಿಸಿಕೊಳ್ಳುವುದು. ಇಡೀ ವಿಶ್ವವು ಭಗವಂತನ ಚಿತ್ತದ ಒಂದು ಲೀಲೆ ಯೆಂಬ ಸಿದ್ಧಾಂತಕ್ಕೆ ಚತುರರಾದ ವಿಜ್ಞಾನಿಗಳು ಬಂದಿರುತ್ತಾರೆ.

ಮನುಷ್ಯನು ಸಹಜವಾಗಿ ಆಧ್ಯಾತ್ಮಿಕವೃತ್ತಿಯೆಂಬುದನ್ನು ಶಾಸ್ತ್ರ ಜ್ಞರೆಲ್ಲರೂ ಒಪ್ಪುತ್ತಾರೆ. ದೈವಸೃಷ್ಟಿಯ ಮಹದದ್ಭುತ ಕೌತುಕಗಳಲ್ಲಿ ಮಾನವನ ಆಂತರಿಕ ಮನಸ್ಸು ಒಂದಾಗಿದೆ ಎನ್ನುವುದನ್ನು ಸಹ ಒಪ್ಪು ತ್ತಾರೆ. ಪರಮಾತ್ಮನೆಂಬ ರತ್ನಭಾಂಡಾರವು ನಮ್ಮ ಹೃದಯದಲ್ಲಿಯೇ ಹುದುಗಿರುವುದೆಂದು ಜ್ಞಾನಿಗಳ ಅಭಿಪ್ರಾಯ. ಮಾನವನಲ್ಲಿರುವ ದೇವ ತ್ವಕ್ಕೆ ನಿದರ್ಶನ ಬೇಕೆಂದರೆ ನಿನ್ನ ಹೃದಯದಲ್ಲಿ ನೆಲೆಸಿರುವ ಅಂತರಾ ತ್ಮನ ನುಡಿಗಳನ್ನು ಆಲಿಸಬೇಕು. ದೃಷ್ಟಿಗೆ ಅಗೋಚರವಾಗಿ, ಧ್ಯಾನ ಚಿಂತನೆಗಳಿಗೆ ಆಧಾರಭೂತನಾದ ಅಂತರಾತ್ಮನು ಮನುಷ್ಯನ ದಿನಚ ರ್ಯೆಯ ಕ್ರಿಯೆ ಪ್ರತಿಕ್ರಿಯೆಗಳನ್ನು ನಿರ್ದೇಶಿಸುವನು ಮತ್ತು ಮಾನವ ನಿಗೆ ಏಕಾಂತದಲ್ಲಿ ಗೋಚರವಾಗುವನು. ಮನುಷ್ಯನ ಚಿತ್ತದಲ್ಲಿ ಪದೇ ಪದೇ ಮೂಡುವ ಭಾವನೆಗಳೂ ಅವನ ಹೃದಯದಲ್ಲಿ ತುಂಬಿರುವ ಚಿಂತನೆಗಳೂ ಅಗೋಚರವಾದ ಅವನ ಅಧಿಕಾರಿಗಳು. ಮತ್ತು ಅವು ಗಳೇ ಆತನ ಆತ್ಮ ಸ್ವರೂಪಾಗಿ ಪರಿಣಮಿಸುತ್ತವೆ. ಮನಸ್ಸಿನ ಭಾವ ನೆಯು ಮನುಷ್ಯನ ಮೇಲೂ ಪ್ರಕೃತಿಯ ಮೇಲೂ ತನ್ನ ಪ್ರಭಾವವನ್ನು ಬೀರಬಲ್ಲುದೆಂದು ಹೇಳುತ್ತಾರೆ. ಇಡೀ ಪ್ರಕೃತಿಯು ಒಂದು ಒತ್ತಡಿ ಕಿದ ಶಕ್ತಿಯೆಂದೂ, ಎಲ್ಲ ಮನುಷ್ಯರು ಈ ಶಕ್ತಿಯ ಚೈತನ್ಯ ಚಲನ ಸ್ವರೂಪರೆಂದೂ ಅತ್ಯಂತ ಸೂಕ್ಷ್ಮಸಾಧನ ಸಲಕರಣೆಗಳ ಮೂಲಕ ಮಾನವನ ಭಾವನೆಗಳನ್ನು ಚಿತ್ರದಂತೆ ಕಾಗದದ ಮೇಲೆ ರೂಪಿಸಬಹು ದೆಂದೂ, ವಿಜ್ಞಾನಿಗಳು ಹೇಳುತ್ತಾರೆ. ಅಷ್ಟಲ್ಲದೆ ಮನುಷ್ಯನ ಮನ

ಸ್ಸಿನಲ್ಲಿ ಆಕರ್ಷಣ ವಿದ್ಯುತ್ಕಣಗಳಿರುವುವೆಂದೂ, ಭಾವನೆಗಳ ಭಾವ ಚಿತ್ರಗಳನ್ನು (*Photographs*) ಫೋಟೋ ತೆಗೆಯಬಹುದೆಂದೂ, ಮತ್ತು ವಿದ್ಯುದಾವೇಗ ಕಣಗಳಿಂದ ಕೂಡಿದ ಮನುಷ್ಯನ ಬುದ್ಧಿಶಕ್ತಿ ಯನ್ನು ಬೆಳಕಿನ ಕಿರಣಗಳನ್ನಾಗಿ ಮಾರ್ಪಡಿಸಬಹುದೆಂದೂ ವಿಜ್ಞಾನಿ ಗಳು ಪ್ರಯೋಗಗಳ ಮೂಲಕ ತೋರಿಸಿರುತ್ತಾರೆ. ಈ ಆತ್ಮನಿರ್ದೇಶಕ ವಿಜ್ಞಾನವು ಐದುಸಾವಿರ ವರ್ಷಗಳ ಹಿಂದೆಯೇ ನಮ್ಮ ಭರತಖಂಡದಲ್ಲಿ ಪ್ರಚಲಿತವಾಗಿತ್ತೆಂಬುದು ಸರ್ವವಿದಿತವಾಗಿದೆ. "ಅನಂತ" (*Infinite*) ದ ರಹಸ್ಯಮಯ ಅನಿರ್ವಚನೀಯ ಗರ್ಭದಿಂದ ಮನುಷ್ಯನು ಹೊರಹೊ ಮ್ಮುತ್ತಾನೆ. ಇವನಲ್ಲಿ ಅಪ್ರಕಟಿತ ಮಾನಸಿಕ ಶಕ್ತಿಯೂ, ಆಧ್ಯಾತ್ಮಿಕ ಬುದ್ಧಿಸಂಪತ್ತೂ ಇವೆ. ಆಧ್ಯಾತ್ಮಿಕ ಕಲೆಯಲ್ಲಿ ನುರಿತ ಭರತಖಂಡವು ಮಾನವನಲ್ಲಿ ಅಡಗಿರತಕ್ಕ ಈ ಶಕ್ತಿಗಳನ್ನು ಅಭಿವೃದ್ಧಿಗೊಳಿಸಿ, ಅವುಗಳ ಸಂಪೂರ್ಣ ಉಪಯೋಗವನ್ನು ಪಡೆಯುವ ಮಾರ್ಗವನ್ನು ತಿಳಿದು ಕೊಂಡಿರುತ್ತದೆ. ಕ್ರಮವಾದ ಧ್ಯಾನದಿಂದ ಸ್ವಲ್ಪಕಾಲವಾದರೂ ಬಾಹ್ಯ ಪ್ರಪಂಚವನ್ನು ಮರೆತು ಸಮಾಧಿಯೋಗದಿಂದ ಆಂತರಿಕ ಪ್ರಪಂಚಕ್ಕೆ ಮನಸ್ಸನ್ನು ತಿರುಗಿಸಿದರೆ ಮಾತ್ರ ಶಾಂತಿಯು ದೊರಕುತ್ತದೆ. ಈ ಶಾಂತಿಯೇ ಜ್ಞಾನದ ಹುನ್ನೆಲೆ. ಶುದ್ಧ ಧ್ಯಾನವು ಮನುಷ್ಯನಲ್ಲಿ ಅಡಗಿ ರುವ ಆತ್ಮವೃತ್ತಿಯನ್ನು ವಿಕಾಸಗೊಳಿಸುವುದಲ್ಲದೆ ಅವನ ಎಲ್ಲಾ ಕಾರ್ಯಗಳಿಗೂ ಅತ್ಯಂತ ಸ್ಫೂರ್ತಿಯನ್ನು ಕೊಡುತ್ತಿದೆ. ಇದೇ ಮಾನ ವನ ಅಂತರಂಗ ತತ್ತ್ವವಾಗಿದೆ. ಈ ತತ್ತ್ವವನ್ನೇ ನಂಬಿ ಆಲಿವರ್ ಕ್ರಾಮ್‌ವೆಲ್ (*Oliver Cromwell*), ಮಾರ್ಕಸ್ ಆರೇಲಿಯಸ್ (*Marcus Araelius*). ಅಶೋಕ (*Asoka*), ಅಕ್ಬರ್ (*Akbar*) ಶಿವಾಜಿ (*Sivaji*) ಮುಂತಾದ ಜಗತ್ ಪ್ರಖ್ಯಾತ ಮಹನೀಯರು ತಮ್ಮ ಧ್ಯೇಯವನ್ನು ಸಾಧಿಸಿರುತ್ತಾರೆ. ಆದುದರಿಂದ ಎಲ್ಲ ಕಾಲಗಳ ಲ್ಲಿಯೂ, ಎಲ್ಲ ದೇಶಗಳಲ್ಲಿಯೂ, ಧ್ಯಾನ ಮತ್ತು ತಪಸ್ಸುಗಳು ಶಾಂತಿಗೂ, ಜಯಕ್ಕೂ ಬಹು ಮುಖ್ಯ ಸಾಧನಗಳೆಂದು ಪರಿಗಣಿತವಾಗಿವೆ. ಪ್ರಾಮಾ ಣಿಕ ಹೃದಯದ ಅಂತರಾಳದಿಂದ ಹೊರಟ ಪ್ರಾರ್ಥನೆಗಳು ಮೇಲಕ್ಕೆ ಭಗವತ್ಸಾನ್ನಿಧ್ಯಕ್ಕಡರಿ ಕಾಮಿತಾರ್ಥವನ್ನು ಖಂಡಿತವಾಗಿಯೂ ತರುವು ವೆಂದು ನಾನು ಮನಃಪೂರ್ವಕವಾಗಿ ನಂಬಿರುತ್ತೇನೆ.

---

# ನಮ್ಮ ಪಾಠಶಾಲೆಗಳು.

**ಲೇಖಕ:— ಓರ್ವಶಿಕ್ಷಕ.**

(ಹಿಂದಿನಿಂದ ಮುಂದೆ ಸಾಗಿ ಮುಗಿದದ್ದು.)

---

[ಹಿಂದಿನ ಸಂಚಿಕೆಯಲ್ಲಿ ಲೇಖಕರು ಈಗಿನ ಪಾಠಶಾಲೆಗಳ ಶೋಚನೀಯ ಸ್ಥಿತಿಯನ್ನು ವಿವರಿಸುತ್ತ ಅವುಗಳ ಪುನರ್ಘಟನೆಯನ್ನು ಕುರಿತು ಕೆಳಗೆ ಕಾಣಿಸಿದ ಸೂಚನೆಗಳನ್ನು ಮಾಡಿದ್ದಾರೆ. ಈಗಿನ ಪಾಠಶಾಲೆಗಳು, ಸಂಸ್ಕೃತ ಕಾಲೇಜಗಳು, ಶಿವಯೋಗಮಂದಿರ ಇಂಥ ಸಂಸ್ಥೆಯವರು ಕೂಡಿಕೊಂಡು ಧಾರ್ಮಿಕ ಶಿಕ್ಷಣದ ಒಂದು ಯೋಜನೆಯನ್ನು ಏರ್ಪಡಿಸುವದು ಅತ್ಯಾವಶ್ಯಕವು. ಇಂಥ ಯೋಜನೆಯನ್ನು ಅವರು ಮಾಡಿ ಅದನ್ನು ಪ್ರಯೋಗದಲ್ಲಿ ತಂದರೆ ಸಮಾಜದಲ್ಲಿರುವ ಅಸಂಖ್ಯ ಮಠಗಳ ಮತ್ತು ಭಕ್ತರ ಸುಧಾರಣೆಗೆ ಅದು ಕಾರಣವಾಗದೆ ಇರದು.

—ಸಂಪಾದಕ.]

### ಅಭ್ಯಾಸಕ್ರಮ.

ಹಳ್ಳಿಯ ಪಾಠಶಾಲೆಗಳಲ್ಲಿ ಪ್ರಾಥಮಿಕ ವರ್ಗದ, ತಾಲೂಕಿನ ಶಿಕ್ಷಣಾಲಯಗಳಲ್ಲಿ ಮಾಧ್ಯಮಿಕ ವರ್ಗದ, ಜಿಲ್ಹೆಯ ವಿದ್ಯಾಮಂದಿರಗಳಲ್ಲಿ ಪ್ರೌಢವರ್ಗದ, ಅಭ್ಯಾಸಕ್ರಮಗಳನ್ನೇರ್ಪಡಿಸಬೇಕು. ಪ್ರಾಥಮಿಕ ಶಿಕ್ಷಣಕ್ಕೆ ೫ ವರ್ಷ, ಮಾಧ್ಯಮಿಕ ಶಿಕ್ಷಣಕ್ಕೆ ೪ ವರ್ಷ, ಪ್ರೌಢಶಿಕ್ಷಣಕ್ಕೆ ೪ ವರ್ಷ ಈ ಪ್ರಕಾರ ಅವಧಿಯನ್ನು ಕಲ್ಪಿಸಬೇಕು.

ಪ್ರಾಥಮಿಕ ಶಿಕ್ಷಣವು ಮುಗಿಯುವದರೊಳಗಾಗಿ ವಿದ್ಯಾರ್ಥಿಗೆ ಸುಮಾರು ೨೫೦ ಶರಣರ ವಚನಗಳು, ೨೫೦ ಸರ್ವಜ್ಞನ ವಚನಗಳು, ೨೫ ಕೈವಲ್ಯಗಳೊಳಗಿನ ತತ್ವಪದಗಳು, ೫೦ ಶರಣರ ಕಥೆಗಳು, ವೀರಶೈವ ಮತತತ್ವಗಳ ಸಾಮಾನ್ಯಜ್ಞಾನ, ವೀರಶೈವರ ಇತಿಹಾಸ, ಕರ್ನಾಟಕ ಮತ್ತು ಹಿಂದುಸ್ಥಾನದ ಭುಗೋಲ, ವ್ಯಾಕರಣ, ಪತ್ರವ್ಯವಹಾರ, ಜಮಾಖರ್ಚು, ಬಾಯಿಲೆಕ್ಕ, ಅಂಗಡಿಲೆಕ್ಕ, ಕ್ಷೇತ್ರಫಲದ ಲೆಕ್ಕ, ಭೂಮಿ ಅಳೆಯುವದು, ಬಡ್ಡಿಲೆಕ್ಕ, ಶರೀರಸಂಗೋಪನಶಾಸ್ತ್ರ, ಗಾಯನಕಲೆ, ಚಿತ್ರಕಲೆ ಇಷ್ಟು ವಿಷಯಗಳನ್ನೊಳಕೊಂಡ ಕ್ರಮಿಕ ಪುಸ್ತಕಗಳನು

ಆಯಾಯ ತರಗತಿಗಳಿಗೆ ತಕ್ಕಂತೆ ರಚಿಸಬೇಕು. ಇದಲ್ಲದೆ ಪ್ರಾಥಮಿಕ ವರ್ಗದಲ್ಲಿ ಆಯಾಯ ವಿದ್ಯಾರ್ಥಿಗಳ ಮನೆತನದ ಉದ್ಯೋಗದ ಬಗ್ಗೆ ಚೆನ್ನಾಗಿ ಮಾಹಿತಿಯನ್ನು ಮಾಡಿಕೊಡಬೇಕು.

ಮಾಧ್ಯಮಿಕ ಶಿಕ್ಷಣದಲ್ಲಿ ೫೦೦ ಶರಣರ ವಚನ ಸಂಗ್ರಹ, ಸರ್ವಜ್ಞನ ವಚನಸಂಗ್ರಹ, ವೀರಶೈವ ಕಾವ್ಯಸಂಗ್ರಹ (೧೦೦೦ ಪದ್ಯಗಳು) ಇಂಗ್ಲಿಷ ೩ನೇ ಇಯತ್ತೆಯ ವರೆಗೆ ಅಭ್ಯಾಸ, ಹಿಂದೀಪ್ರಾಥಮಿಕ ಪರೀಕ್ಷೆಯ ವರೆಗೆ ಅಭ್ಯಾಸ, ಸಂಸ್ಕೃತ ಭಾಂಡಾರಕರ ೧-೨ ಪುಸ್ತಕಗಳು ಮತ್ತು ಹಿತೋಪದೇಶ ಸಂಪೂರ್ಣ ಮತ್ತು ಅಷ್ಟಾವರಣ-ಪಂಚಾಚಾರ ಷಟ್‌ಸ್ಥಲಗಳ ಬಗ್ಗೆ ಗ್ರಂಥಗಳ ಹಾಗೂ ವಿವಿಧ ಲೇಖಗಳ ಅಭ್ಯಾಸ, ರಾಜಕೀಯ ಹಾಗೂ ಪ್ರಾಕೃತಿಕ ಭೂಮಂಡಲ ಭೂಗೋಲ, ವಿವಿಧ ದೇಶಗಳ ಸಾಧಾರಣೆಯ ಇತಿಹಾಸ, ವೀರಶೈವ ಇತಿಹಾಸದ ಸವಿಸ್ತಾರವಾದ ಅಭ್ಯಾಸ, ಗಾಯನ ಚಿತ್ರಕಲೆಗಳ ಅಭ್ಯಾಸವನ್ನು ಮುಂದುವರಿಸುವದು, ಬ್ರಹ್ಮಚರ್ಯ ಪಾಲನೆಯ ಮಹತ್ವ- ಧ್ಯಾನ ಪ್ರಾರ್ಥನೆಗಳ ಮಹತ್ವದ ಬಗ್ಗೆ ಗ್ರಂಥಗಳ ಅಭ್ಯಾಸ-ಇಷ್ಟೆಲ್ಲ ವಿಷಯಗಳಿಗೆ ತಕ್ಕಂತೆ ಕ್ರಮಿಕ ಪುಸ್ತಕಗಳ ರಚನೆಯಾಗಬೇಕು. ಮಾಧ್ಯಮಿಕ ವರ್ಗದ ಅಭ್ಯಾಸವು ಪೂರೈಸಿದ ಬಳಿಕ ವಿದ್ಯಾರ್ಥಿಯು ವೀರಶೈವರಿಂದ ಸ್ಥಾಪಿಸಲ್ಪಡುವ ಔದ್ಯೋಗಿಕ ಹಾಗೂ ಯಾಂತ್ರಿಕ ಶಾಲೆಗಳಿಗೆ ಹೋಗಿ ೫ ವರ್ಷ ಆ ಶಿಕ್ಷಣ ಪಡೆಯಬಹುದು. ಈ ವಿಷಯವಾಗಿ ಮುಂದೆ ವಿಸ್ತಾರವಾಗಿ ಹೇಳಿದೆ. ಈ ಅಭ್ಯಾಸವು ವೀರಶೈವರು ಕೈಕೊಳ್ಳತಕ್ಕ ಕಾಯಕದ ತತ್ವಕ್ಕೆ ಅನುಗುಣವಾಗಿರುತ್ತದೆ.

ಪ್ರೌಢ ಶಿಕ್ಷಣದಲ್ಲಿ ವೀರಶೈವ ಕಾವ್ಯಗಳ ಅಭ್ಯಾಸ, ಮತತತ್ವ ಗ್ರಂಥಗಳ ಅಭ್ಯಾಸ, ತುಲನಾತ್ಮಕರೀತಿಯಿಂದ ಭಿನ್ನ ಮತತತ್ವಗಳ ಅಭ್ಯಾಸ, ವಿಮರ್ಶಾಕಲೆ, ಲೇಖನಕಲೆ, ಗಮಕಕಲೆ, ಕಾವ್ಯರಚನಾಕಲೆ, ಪುರಾಣ ಕೀರ್ತನ ಕಲೆ, ನಾಟಕಸಂಗೀತಕಲೆ, ಸಂಸ್ಕೃತ ಪಂಚಮಹಾ ಕಾವ್ಯ-ನಾಟಕಗಳ ಅಭ್ಯಾಸ, ಆಗಮ ಉಪನಿಷತ್ತು ಭಗವದ್ಗೀತೆಗಳ ಅಭ್ಯಾಸ, ಇಂಗ್ಲಿಷ' ಮ್ಯಾಟ್ರಿಕ್ಕಿನ ವರೆಗೆ ಅಭ್ಯಾಸ, ಇವೆಲ್ಲ ವಿಷಯಗಳಿಗನುಗುಣವಾಗಿ ಪಠ್ಯಪುಸ್ತಕಗಳ ವ್ಯವಸ್ಥೆ ಮಾಡಬೇಕು. ಈ ಶಿಕ್ಷಣ ಕ್ರಮವನ್ನು ಪೂರೈಸಿದ ಬಳಿಕ ವಿದ್ಯಾರ್ಥಿಯು ವೀರಶೈವರ

ಪರವಾಗಿ ಸಾಮಾಜಿಕ ರಾಜಕೀಯ, ಧಾರ್ಮಿಕ, ಶೈಕ್ಷಣಿಕ, ಸಾಹಿತ್ಯ ಕ್ಷೇತ್ರಗಳಲ್ಲಿ ಪ್ರವೇಶಿಸಿ ಜನಸೇವೆ-ಕನ್ನಡನಾಡನುಡಿ ಸೇವೆ-ರಾಷ್ಟ್ರಸೇವೆ ಗಳನ್ನು ಫಲಕಾರಿಯಾಗಿ ಮಾಡುವ ಯೋಗ್ಯತೆ ಕರ್ತೃತ್ವಶಕ್ತಿಗಳನ್ನು ಪಡೆಯುತ್ತಾನೆ. ಈಗಿನ ಪ್ರಾಥಮಿಕ-- ಮಾಧ್ಯಮಿಕ--ಉಚ್ಚಶಿಕ್ಷಣಗಳು ನಿರುಪಯೋಗಿಯೆಂಬ ಅಪವಾದವನ್ನು ಈ ಮಾದರಿಯ ರಸವತ್ತಾದ ಶಿಕ್ಷಣಯೋಜನೆಯಿಂದ ನೀಗಿಕೊಳ್ಳುವದು ವಿಹಿತ.

## ಪರೀಕ್ಷೆ ಮತ್ತು ಪದವಿಗಳ ಕ್ರಮ.

ವಿದ್ಯಾಪೀಠದವರು ಆಯಾಯ ಅಭ್ಯಾಸ ಕ್ರಮಕ್ಕನುಗುಣವಾಗಿ ಪ್ರಾಥಮಿಕ ಪರೀಕ್ಷೆ, ಮಾಧ್ಯಮಿಕ ಪರೀಕ್ಷೆ, ಪ್ರೌಢ ಪರೀಕ್ಷೆ, ಹೀಗೆ ಪರೀ ಕ್ಷೆಯ ಕ್ರಮಗಳನ್ನು ಗೊತ್ತುಪಡಿಸಿ ಆಯಾಯ ಕೇಂದ್ರಗಳಲ್ಲಿ ವರು ವರುಷ ಆಯಾಯ ಪರೀಕ್ಷೆಗಳು ನಡೆಯುವಂತೆ ಏರ್ಪಾಡು ಮಾಡ ಬೇಕು. ಮತ್ತು ಆಯಾಯ ಪರೀಕ್ಷೆಗಳಿಗನುಗುಣವಾಗಿ ಅವುಗಳಲ್ಲಿ ತೇರ್ಗಡೆಯಾದವರಿಗೆ ಯೋಗ್ಯ ಪದವಿಗಳನ್ನು ಗೊತ್ತು ಪಡಿಸಿ ಪದವಿ ದಾನಮಾಡಬೇಕು. ಉದಾಹರಣಾರ್ಥವಾಗಿ ಪ್ರಾಥಮಿಕ ಮಾಧ್ಯಮಿಕ ಪ್ರೌಢ ಪರೀಕ್ಷೆಗಳಿಗನುರೂಪವಾಗಿ ಕ್ರಮದಿಂದ **'ವೀರಶೈವ ಪ್ರವೇಶಕ'** 'ವೀರಶೈವ ಪ್ರಬೋಧಕ', ಮತ್ತು 'ವೀರಶೈವ ಪ್ರಕಾಶಕ' ಎಂಬ ಪದವಿ ಗಳನ್ನು ಕೊಡಬಹುದು. ಇಲ್ಲವೆ ಯುಕ್ತ ಕಂಡಂತೆ ಆಯಾಯ ಪದವಿ ಗಳಿಗೆ ಭಿನ್ನ ಹೆಸರುಗಳನ್ನು ಕೊಡಬಹುದು. ಪ್ರಾಥಮಿಕ ಪರೀಕ್ಷೆಗಳು ತಾಲೂಕಗಳಲ್ಲಿಯೂ ಮಾಧ್ಯಮಿಕ ಪರೀಕ್ಷೆಗಳು ಜಿಲ್ಹೆಯ ಸ್ಥಳಗಳಲ್ಲಿಯೂ ಪ್ರೌಢ ಪರೀಕ್ಷೆಗಳು ವಿದ್ಯಾಪೀಠದವರು ಗೊತ್ತುಪಡಿಸುವ ಕೇಂದ್ರಗಳ ಲ್ಲಿಯೂ ನಡೆಯಬೇಕು. ಪರೀಕ್ಷಾ ಕ್ರಮವನ್ನು ಈಗಿನ ವಿಶ್ವವಿದ್ಯಾಲಯ ದವರು ಮಾಡುವ ರೀತಿಯಲ್ಲಿ ಮಾಡಬೇಕು. ಪ್ರಾಥಮಿಕ ಮಾಧ್ಯ ಮಿಕ ಪರೀಕ್ಷೆಗಳು ವಿದ್ಯಾಪೀಠದ ಜಿಲ್ಹಾ ಶಾಖೆಯ ಕೆಳಗೆ ಇರತಕ್ಕದ್ದು. ಪ್ರಶ್ನೆ ಕಾಗದ ಪರೀಕ್ಷಕರ ನೇಮಣೂಕಿ ಮುಂತಾದ್ದನ್ನು ಜಿಲ್ಹಾ ಶಾಖೆ ಯವರೇ ಮಾಡಬೇಕು. ಪ್ರೌಢ ಪರೀಕ್ಷೆಯ ಎಲ್ಲ ಹೊಣೆಗಾರಿಕೆಯು ಮುಂಬಯಿ ವಿದ್ಯಾಪೀಠದ ಸ್ವಾಧೀನದಲ್ಲಿದ್ದು ಅವರೇ ಅದರ ಎಲ್ಲ ವ್ಯವ ಸ್ಥೆಯನ್ನು ನೋಡಿಕೊಳ್ಳಬೇಕು. ಅದರಂತೆ ಪ್ರಮಾಣ ಪತ್ರ ಪದವಿದಾ ನಗಳ ವಿಷಯದಲ್ಲಿ ಜಿಲ್ಹಾ ಶಾಖೆಯವರು ಪ್ರಾಥಮಿಕ ಮಾಧ್ಯಮಿಕ

ಪರೀಕ್ಷೆಗಳಿಗೂ ವಿದ್ಯಾ ಪೀಠದವರು ಪ್ರೌಢ ಪರೀಕ್ಷೆಯ ಸಂಬಂಧವುಳ್ಳ ವರಾಗಿರಬೇಕು. ಪ್ರಮಾಣಪತ್ರ ಪದವಿದಾನಗಳೆಲ್ಲ ಕನ್ನಡದಲ್ಲಿಯೇ ಮುದ್ರಿಸಲ್ಪಡಬೇಕು.

## ಈ ಹೊಸ ಯೋಜನೆಯ ಧೋರಣ.

ಪ್ರಾಥಮಿಕ ಶಿಕ್ಷಣ ಕ್ರಮವನ್ನು ವೀರಶೈವ ಬಾಲಬಾಲಕಿಯರಿಗೆಲ್ಲ ಉಚಿತವಾಗಿ ಒತ್ತಾಯದಿಂದ ಕಲಿಸಬೇಕು. ಮಾಧ್ಯಮಿಕ ಪ್ರೌಢ ಶಿಕ್ಷಣವನ್ನು ಅವರವರಿಗೆ ಐಚ್ಛಿಕವಾಗಿ ಬಿಟ್ಟುಬಿಡಬೇಕು. ಪ್ರಾಥಮಿಕ ಪರೀಕ್ಷೆಯಲ್ಲಿ ತೇರ್ಗಡೆಯಾದ ಬಳಿಕ ವಿದ್ಯಾರ್ಥಿಗಳು ತಮ್ಮ ಮನೆತನದ ಹೋರಿಯನ್ನು ಕುಶಲತನದಿಂದ ನಡೆಯಿಸಿಕೊಂಡು ಹೋಗಲು ಸಮರ್ಥರಾಗುವರು. ಅವರು ವ್ಯವಹಾರದಲ್ಲಿ ಯಾರಿಗೂ ಮೋಸಹೋಗುವ ಕಾರಣವಿಲ್ಲ. ನಿರಕ್ಷರಿಗಳೆಂಬ ಅಪವಾದದಿಂದ ಅವರು ದೂರಾಗುವರು. ಅವರಿಗೆ ಊರೊಳಗಿನ ಗ್ರಾಮಸ್ಥರ, ಸಾಹುಕಾರರ ಹಾಗೂ ಸರಕಾರಿ ಅಧಿಕಾರಿಗಳ ಕಾಟವು ತಪ್ಪಿ ಹೋಗುವದು. ಹಳ್ಳಿಯ ಸುಶಿಕ್ಷಿತರು ಒಕ್ಕಟ್ಟಾಗಿ "ಕೋ-ಅಪರೇಟಿವ್ಹ" ಸಂಘವನ್ನು ಸ್ಥಾಪಿಸಿಕೊಂಡು ತಮ್ಮ ಅಡಚಣಿಗಳನ್ನು ದೂರಮಾಡಿಕೊಳ್ಳಬಹುದು. ಪಂಚಾಯತಿಗಳನ್ನು ಸ್ಥಾಪಿಸಿಕೊಂಡು ತಮ್ಮ ಊರಿನ ನ್ಯಾಯಗಳನ್ನು ತೀರಿಸಿಕೊಳ್ಳಬಹುದು. ಒಕ್ಕಟ್ಟಿನಿಂದ ಕಾಲಕಾಲಕ್ಕೆ ಊರಲ್ಲಿ ವಿವಿಧ ಮನೋರಂಜನೆಯ ಹಾಗೂ ಉಪಯುಕ್ತ ಪ್ರದರ್ಶನ ಪ್ರಯೋಗಗಳಿಂದ ಊರಿನ ಸರ್ವಾಂಗ ಸುಂದರವಾದ ಉನ್ನತಿಯನ್ನು ಮಾಡಿಕೊಳ್ಳಬಹುದು.

ಈಗಿನ ವಿದ್ಯಾರ್ಥಿಗಳು ಮುಲಕಿ ಪರೀಕ್ಷೆ ಪಾಸಾದಬಳಿಕ ಹೆಚ್ಚು ಗುಣಗಳು ದೊರೆತರೆ ಲೋಕಲ್ ಬೋರ್ಡ ಶಾಲೆಯ ಶಿಕ್ಷಕರಾಗುವರು. ಕಡಿಮೆ ಗುಣಗಳಿದ್ದರೆ ಇಂಗ್ಲೀಷ ಕಲಿಯಲಿಕ್ಕೆ ಹೋಗುವರು ಇಲ್ಲವೆ ಮನೆಯ ಹಾದೀ ಹಿಡಿಯುವರು. ಅವರು ಪ್ರಪಂಚದಲ್ಲಿ ಯಾತಕ್ಕೂ ಬಾರದವರಾಗಿರುತ್ತಾರೆ. ಅದರೆ ಮೇಲ್ಕಂಡ ಯೋಜನೆಯಿಂದ ಅಂಥ ಯಾವ ಪ್ರಮಾದಗಳೂ ಆಗಲಾರವು.

ಮಾಧ್ಯಮಿಕ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ವಿದ್ಯಾರ್ಥಿಗಳು ಬಿಟ್ಟರೆ ಅವರು ತಮ್ಮ ಮನೆಯ ಉದ್ಯೋಗವನ್ನು ಹೆಚ್ಚು ಸುಗಮ

ವಾಗಿ ಸಾಗಿಸಿಕೊಂಡು ಹೋಗಬಹುದು. "ಕಾಯಕವೇ ಕೈಲಾಸ" ವಾದ ಕಾರಣ ಅವರು ತಮ್ಮ ಹೋರಿಯನ್ನು ಸಾಗಿಸಿಕೊಂಡು ಹೋಗಲು ಒಣ ದುರಭಿಮಾನವನ್ನೆಣಿಸಲಾರರು. ಯಾಕಂದರೆ ಅವರಿಗೆ ಅಂಥ ಶಿಕ್ಷಣವೇ ದೊರೆತಿರುತ್ತದೆ. ಒಂದು ವೇಳೆ ಅವರು ಎಷ್ಟೋಹಳ್ಳಿಯ ಪಾಠಶಾಲೆಗಳಲ್ಲಿ ಶಿಕ್ಷಕರಾಗಿ ಕೆಲಸ ಮಾಡಬಹುದು. ಇಲ್ಲವೆ ಬೋಧಕರಾಗಿ ಹಳ್ಳಿಗಳಲ್ಲಿ ಸಂಚರಿಸಿ ಧರ್ಮಜಾಗ್ರತಿ ಜನಜಾಗ್ರತಿಯನ್ನು ಮಾಡಬಹುದು. ಅಥವಾ ವೀರಶೈವರಿಂದ ಸ್ಥಾಪಿತಲಾಗುವ ಯಾಂತ್ರಿಕ ಔದ್ಯೋಗಿಕ ಕಾರ್ಯಾಲಯಗಳಲ್ಲಿ ಸೇರಿ ಮುಂದಿನ ಶಿಕ್ಷಣ ಪಡೆಯಬಹುದು. ಇಲ್ಲವೆ ಪ್ರೌಢ ಶಿಕ್ಷಣಕ್ಕಾಗಿ ಜಿಲ್ಹಾ ಸ್ಥಳಗಳಿಗೆ ಹೋಗಬಹುದು. ಮ್ಯಾಟ್ರಿಕ್ ಪರೀಕ್ಷೆಯಾದ ಬಳಿಕ ಕಾರಕೂನಿಕೆಗಾಗಿ ಹೆಣಗಾಡುವಂತೆ ನಮ್ಮ ಶಿಕ್ಷಣ ಯೋಜನೆಯಿರಕೂಡದು.

ಪ್ರೌಢವರ್ಗದಲ್ಲಿ ಉತ್ತೀರ್ಣರಾದವರು ಸಂಘಶಕ್ತಿಯಿಂದ ವರ್ತಮಾನಪತ್ರ, ಮಾಸಪತ್ರಿಕೆ, ಗ್ರಂಥರಚನೆ, ಇತಿಹಾಸ ಸಂಶೋಧನೆ, ನಾಟಕ, ಕೀರ್ತನ, ಕಥಾ ಕಾದಂಬರಿಗಳ ಪ್ರಕಟನೆ ಮುಂತಾದ ಬೌದ್ಧಿಕ ಕಾರ್ಯಗಳಲ್ಲಿ ಕೆಲಸ ಮಾಡಬಹುದು. ಇಲ್ಲವೆ 'ಶಿವಾನುಭವ ಸಂಘ' 'ಸಾಹಿತ್ಯ ಮಂಡಲ' ಮುಂತಾದ ಕೂಟಗಳನ್ನು ಏರ್ಪಡಿಸಿ ಮತತತ್ವಗಳ ಚರ್ಚೆ, ಉದ್ಗ್ರಂಥಗಳ ಅಭ್ಯಾಸ ಮುಂತಾದ್ದನ್ನು ಮಾಡಬಹುದು. ಮುನಸಿಪಾಲಿಟಿ ಲೋಕಲ್ ಬೋರ್ಡುಗಳ ಸದಸ್ಯರಾಗಿ ಜನಸೇವೆಮಾಡಬಹುದು. ವೀರಶೈವರಿಂದ ಸ್ಥಾಪಿತವಾಗುವ **'ವೀರಶೈವ ರಾಜಕೀಯ ಮಂಡಲ'**ದಲ್ಲಿ ಸೇರಿ ಕರ್ನಾಟಕದ ವಿಶೇಷತಃ ವೀರಶೈವರ ಹಿತದ ಪ್ರಶ್ನೆಗಳನ್ನು ಬಿಡಿಸಿಕೊಳ್ಳಬಹುದು. ದೊಡ್ಡದೊಡ್ಡ ನಗರಗಳಿಗೆ ಹೋಗಿ ಪಂಡಿತರ ಸಭೆಯಲ್ಲಿ ವ್ಯಾಖ್ಯಾನ ಪ್ರವಚನಗಳನ್ನು ಹೇಳಿ ಜನರಲ್ಲಿ ನಮ್ಮ ಮತತತ್ವಗಳನ್ನು ಪ್ರಕಟಗೊಳಿಸಬಹುದು. ಈ ರೀತಿಯಿಂದ ಈ ಹೊಸಧೋರಣೆಯು ನಮಗೆ ಒಳ್ಳೆ ಲಾಭಕರವೆಂದು ಹೇಳಲು ಅಡ್ಡಿ ಇಲ್ಲ. ಈಗಿನ ಪದವೀಧರರಂತೆ ಸರಕಾರಿ ನೌಕರಿ ಮಾಡಬೇಕೆಂಬ ಹಂಬಲವು ತಪ್ಪುವದು.

## ವಾಚನಾಲಯಗಳ ಏರ್ಪಾಡು.

ಹಳ್ಳಿ-ತಾಲೂಕ-ಜಿಲ್ಹೆಗಳ ವಿದ್ಯಾಸಂಸ್ಥೆಗಳಿಗನುಗುಣವಾಗಿ ವಿವಿಧ ವಿಷಯಗಳ ಪುಸ್ತಕಸಂಗ್ರಹ, ವರ್ತಮಾನಪತ್ರ, ಮಾಸಿಕ, ಮುಂತಾ

ದವುಗಳ ಬಗ್ಗೆ ವಿದ್ಯಾರ್ಥಿಗಳಿಗೆ ಕ್ರಮಬದ್ಧವಾದ ಶಿಕ್ಷಣ ಲಾಭವನ್ನು ಮಾಡಿಕೊಡಬೇಕು. ಆ ಬಗ್ಗೆ ಒಬ್ಬ ಪ್ರತ್ಯೇಕ ಶಿಕ್ಷಕನನ್ನು ನೇಮಿಸು ವದಂತೂ ಪರಮಸುಖ. ಅಂದರೆ ವಿದ್ಯಾರ್ಥಿಗಳು ವ್ಯವಹಾರಜ್ಞಾನ ಶೂನ್ಯರಾಗದೆ ಜಗತ್ತಿನ ಎಲ್ಲ ಸಂಗತಿಗಳನ್ನು ತಿಳಿದುಕೊಂಡು ತಮ್ಮ ಬುದ್ಧಿಯನ್ನು ವಿಕಾಸವಮಾಡಿಕೊಳ್ಳುವರು. ಮತ್ತು ತಮ್ಮ ಸ್ಥಿತಿಗತಿಗ ಳನ್ನು ಕಾಲಕ್ಕನುಗುಣವಾಗಿ ಹೇಗೆ ಮಾರ್ಪಡಿಸಿಕೊಳ್ಳಬೇಕೆಂಬದನ್ನು ರಿತುಕೊಳ್ಳುವರು.

## ಶಾರೀರಿಕ ಶಿಕ್ಷಣ.

ಪ್ರಾಥಮಿಕ ವರ್ಗದಲ್ಲಿ ಹೊಸ ಮಾದರಿಯ ವಿವಿಧ ಮನೋ ರಂಜನೆಯ ಆಟಗಳನ್ನು ಕ್ರಮಗೊಳಿಸಿ ವಿದ್ಯಾರ್ಥಿಗಳನ್ನು ಆಟಕ್ಕೆ ಹಚ್ಚ ಬೇಕು. ಅದರಿಂದ ಅವರ ಶಾರೀರಿಕ ಶಕ್ತಿ-ಬುದ್ಧಿಶಕ್ತಿ-ನೈತಿಕ ಶಕ್ತಿ ಗಳು ಬೆಳೆದು ಉಲ್ಹಾಸವೃತ್ತಿಯು ಹೆಚ್ಚುವದು, ಉತ್ಸಾಹವು ತುಂಬಿ ತುಳುಕುವದು. ಮುಂದೆ 'ವಿದ್ಯಾರ್ಥಿಗಳು ಮಾಧ್ಯಮಿಕ ವರ್ಗಕ್ಕೆ ಬರಲು ಅವರಿಗೆ ವಿವಿಧ ಆಸನ, ಸೂರ್ಯನಮಸ್ಕಾರ, ಸರ್ವಾಂಗ ಸುಂದರ 'ಕವಾಯಿತು'ಗಳನ್ನು ಕಲಿಸಿಕೊಡಬೇಕು. ಅಂದರೆ ಅವರ ಕಾಯವು ದೃಢವಾಗಿ ಪುಷ್ಟಿಗೊಳ್ಳುವದು, ಜ್ಞಾಪಕಶಕ್ತಿಯು ಹೆಚ್ಚು ವದು. ಹಾಗೇ ಅವರು ಪ್ರೌಢಶಿಕ್ಷಣದಲ್ಲಿ ಪ್ರವೇಶಿಸಿದಾಗ ಪೋಲೀಸ ಪದ್ಧತಿಯ 'ಶಿಸ್ತಿನ ಕವಾಯಿತನ್ನು ಕಲಿಸಬೇಕು.' ಅದರಿಂದ ಅವರ ಜೀವನವು ಒಳ್ಳೆ ಶಿಸ್ತು-ಕ್ರಮಬದ್ಧತೆ-ಅಚ್ಚುಕಟ್ಟುತನದಿಂದ ಕೂಡಿ ನಾಗ ರಿಕತೆಗೆ ಕಳೆಯನ್ನುಂಟು ಮಾಡುವದು.

## ಔದ್ಯೋಗಿಕ ಹಾಗೂ ಯಾಂತ್ರಿಕ ಶಿಕ್ಷಣಾಲಯಗಳು.

ಮಾಧ್ಯಮಿಕ ಶಿಕ್ಷಣವು ಪೂರೈಸಿದನಂತರ ವಿದ್ಯಾರ್ಥಿಗೆ ಈಗಿನ ಕಾಲಕ್ಕೆ ತಕ್ಕಂತೆ ಒಂದಿಲ್ಲೊಂದು ಔದ್ಯೋಗಿಕ ಹಾಗೂ ಯಾಂತ್ರಿಕ ಕಲೆಯನ್ನು ಕಲಿಸಿ ಅವನ ಉಪಜೀವನ ಮಾರ್ಗಕ್ಕೆ ಅನುಕೂಲ ಮಾಡಿಕೊಡಬೇಕು. ಜಗತ್ತೆಲ್ಲ ಯಾಂತ್ರಿಕಮಯವಾಗುತ್ತ ನಡೆದದ್ದ ರಿಂದ ಬರೇ ಹಳೆಯ ಪದ್ಧತಿಯ ಮನೆಯ ಉದ್ಯೋಗಗಳನ್ನವಲಂಬಿ ಸಿದರೆ ಪ್ರಪಂಚ ಬೆಳೆದಿರುವ ಈಗಿನ ಕಾಲದಲ್ಲಿ ಉದರನಿರ್ವಾಹಕ್ಕೆ

ತೊಂದರೆಯಾಗುವದು. ಆದ್ದರಿಂದ ಅಂಥ ಯಾಂತ್ರಿಕ ಉದ್ಯೋಗದ ಶಿಕ್ಷಣವನ್ನು ವಿದ್ಯಾರ್ಥಿಗೆ ಅವಶ್ಯವಾಗಿ ಕೊಡಬೇಕು. ನಮ್ಮ ದೇಶವು ಅನೇಕ ವಿಧವಾದ ಕಚ್ಚಾಮಾಲುಗಳಿಂದ ಕೂಡಿದ ನಾಡು. ಇಲ್ಲಿ ವಿವಿಧ ಕಾರ್ಯಾಲಯ ಗಿರಣಿಗಳನ್ನು ಸ್ಥಾಪಿಸಿ ಬಹು ವಿಧದ ವಸ್ತುಗಳನ್ನು ಸಿದ್ಧಗೊಳಿಸಿ ಜಗತ್ತಿನ ಪೇಟೆಗಳಿಗೆ ಕಳಿಸಿಕೊಡುವ ಸುದಿನಗಳು ಬೇಗನೆ ಬರಬಹುದು. ಪ್ರತಿಯೊಂದು ಹಳ್ಳಿಯು ಕೂಡ ಒಂದು ಸಣ್ಣ ಯಾಂತ್ರಿಕ ಉದ್ಯೋಗದ ಕೇಂದ್ರವಾಗಬಹುದು. ಆದ್ದರಿಂದ ವೀರಶೈವ ಮುಖಂಡರು ವಿವಿಧವಾದ ಯಾಂತ್ರಿಕ ಶಾಲೆಗಳು ಕರ್ನಾಟಕದಲ್ಲಿ ಸ್ಥಾಪಿಸಲ್ಪಡುವಂತೆ ಸರಕಾರಕ್ಕೆ ಒತ್ತಾಯಪಡಿಸಬೇಕು. ಯುದ್ಧಕಾಲದ ಯಾಂತ್ರಿಕ ಶಿಕ್ಷಣ ಕೇಂದ್ರಗಳು ಶಾಂತಿಕಾಲದ ಶಿಕ್ಷಣಾಲಯಗಳಾಗುವವೆಂದು ಸರಕಾರದವರು ಹೇಳಿದ್ದಾರೆ. ಅದರ ಲಾಭವನ್ನು ಕರ್ನಾಟಕದಲ್ಲಿ ಜನತೆಗೆ ಒದಗಿಸಿಕೊಡುವಂತೆ ಸರಕಾರದ ಬೆನ್ನುಹತ್ತಬೇಕು. ಉದಾಹರಣಾರ್ಥವಾಗಿ ಸಬಕಾರ, ಬಿರಡಿ, ಚಾಣಿ, ಕಾಜಿನ ಸಾಮಾನುಗಳು, ಮಳಿಗಳು, ಕಾಗದ, ಸಿಮೆಂಟ ಮುಂತಾದ ವಿವಿಧ ಕಾರ್ಯಾಲಯಗಳು ನಮ್ಮ ಕರ್ನಾಟಕದಲ್ಲಿ ನಡೆಯಬಹುದು. ಅವುಗಳಿಗೆ ತಕ್ಕ ಶಿಕ್ಷಣವು ಅವಶ್ಯವಾದುದು. ಒಂದು ಜಿಲ್ಹೆಯ ಸ್ಥಳದಲ್ಲಿ ವಿವಿಧಪ್ರಕಾರದ ೫-೬ ಯಾಂತ್ರಿಕ ಶಿಕ್ಷಣದ ಕೇಂದ್ರಗಳನ್ನು ಸಹಜವಾಗಿ ತೆಗೆದು ಆ ಮೂಲಕ ವಿದ್ಯಾರ್ಥಿಗಳಿಗೆ ಶಿಕ್ಷಣಕೊಡಬಹುದು. ವಿಜಾಪುರ ಜಿಲ್ಹೆಯಲ್ಲಿ ವಿಜಾಪೂರ, ಬಾಗಲಕೋಟೆ, ತಾಳಿಕೋಟೆ, ಗುಳೇದಗುಡ್ಡ, ಇಳಕಲ್ಲ ಮುಂತಾದ ವ್ಯಾಪಾರಿ ಕೇಂದ್ರಗಳಲ್ಲಿ ಒಂದೊಂದು ಔದ್ಯೋಗಿಕ ಅಥವಾ ಯಾಂತ್ರಿಕ ಶಾಲೆಯನ್ನು ಸ್ಥಾಪಿಸಿದರೆ ಎಷ್ಟೋ ವಿದ್ಯಾರ್ಥಿಗಳ ಉಪಜೀವನಕ್ಕೆ ಮಾರ್ಗಮಾಡಿಕೊಟ್ಟಂತಾಗುವದು. ಇದಕ್ಕಾಗಿ ಸಮಾಜದ ಮುಂದಾಳುಗಳು ಟೊಂಕಕಟ್ಟಿ ಹೋರಾಡಲೇಬೇಕು.

## ವೀರಶೈವ ವಿಧಾನಕ್ರಮ.

ವೀರಶೈವರ ಮಠಸ್ಥರು ಸಮಾಜದಲ್ಲಿ ಅನೇಕ ವಿಧಾನಗಳನ್ನು ನೆರವೇರಿಸುತ್ತಿದ್ದಾರೆ. ಉದಾಹರಣಾರ್ಥವಾಗಿ ನಾಮಕರಣ, ಲಿಂಗಧಾರಣ, ದೀಕ್ಷೆ, ಶುದ್ಧೀಕರಣ, ಅಭಿಷೇಕ, ವಿವಾಹವಿಧಿ, ಅಂತ್ಯವಿಧಿ ಮುಂತಾದವುಗಳಲ್ಲಿ ಒಂದೇ ಪ್ರಕಾರವು ಕಂಡುಬರುವದಿಲ್ಲ. ಸುತಿ

ಹೇಗೆಂಬುದು ವಿಚಾರಮಾಡತಕ್ಕ ವಿಷಯವಾಗಿದೆ. ಈ ಭಾಗದಲ್ಲಿ ಅನೇಕ ಶಿವಶರಣರು ಆಗಿ ಹೋಗಿದ್ದಾರೆ.

ಅಲ್ಲಮಪ್ರಭುವು ಬನವಾಸಿ ನಾಡಿನಿಂದ ಹೊರಟು ಕಪ್ಪಡಿಸಂಗಮಕ್ಕೆ ಬಂದನೆಂಬ ಉಲ್ಲೇಖಗಳಿವೆ. ಅಲ್ಲಿಂದ ಅವನು ಸೊಲ್ಲಾಪುರಕ್ಕೆ ಹೋಗುವಾಗ್ಗೆ ಕಪ್ಪಡಿಸಂಗಮದಿಂದ ಉತ್ತರಕ್ಕೆ ೪೦ ಮೈಲುಗಳ ಮೇಲಿರುವ ಹಿಪ್ಪರಿಗೆ (ಇದು ಮಡಿವಾಳ ಮಾಚಿದೇವನ ಸ್ಥಾನವು) ಇಲ್ಲಿಗೆ ಬಂದು ಅಲ್ಲಿಂದ ಉತ್ತರಕ್ಕೆ ೩೫ ಮೈಲುಗಳ ಮೇಲಿರುವ ಮಸಳಿ ಗ್ರಾಮಕ್ಕೆ ಬಂದು ಅಲ್ಲಿಂದ ಮುಂದೆ ಮಂಗಳವಾಡಕ್ಕೆ ಸಮೀಪವಿರುವ ಬಾಲಗಾವಿ ಗ್ರಾಮ ( ಇಲ್ಲಿ ಅಲ್ಲಮಮಹಾಪ್ರಭುವಿನ ದೇವಸ್ಥಾನವಿದೆ.) ಅಲ್ಲಿಂದ ಸೊಲ್ಲಾಪುರಕ್ಕೆ ಹೋದಂತೆ ತೋರುತ್ತದೆ. ಈ ಗ್ರಾಮಗಳೆಲ್ಲವೂ ಹೆಚ್ಚುಕಡಿಮೆ ಒಂದೇ ರೇಷೆಯಲ್ಲಿರುತ್ತವೆ. ಅಲ್ಲಮಪ್ರಭುವು ಈ ಪ್ರಕಾರ ಸೊಲ್ಲಾಪುರಕ್ಕೆ ಹೋಗಿ ಅಲ್ಲಿಂದ ಅವನು ಪೂರ್ವದಿಕ್ಕಿಗೆ ಸರಳರೇಷೆಯಲ್ಲಿರುವ ಕಲ್ಯಾಣಕ್ಕೆ ಹೋಗಿರಬಹುದು.

ಈ ಮಸಳೀ ಗ್ರಾಮದಲ್ಲಿ 'ರೆಬ್ಬವ್ವೆ'ಯ ಪುರಾತನ ದೇವಾಲಯವಿರುತ್ತದೆ. ರೆಬ್ಬವ್ವೆ ಅಥವಾ ರೆಮ್ಮವ್ವೆಯ ಚರಿತ್ರೆಯನ್ನು ನಾವು ಶಿವಶರಣರ ಚರಿತ್ರೆಗಳು ಭಾಗ ೧ ಪುಟ ೧೧೦ ಇದರಲ್ಲಿ ಕೊಟ್ಟದ್ದೇವೆ. ಇವಳು ಕಲ್ಯಾಣದಲ್ಲಿ ರಾಟೆಯಿಂದ ನೂಲುವ ಕಾಯಕವನ್ನು ಮಾಡಿಕೊಂಡಿದ್ದಳು. ಆದರೆ ಇವಳು ಮೊದಲು ಮಸಳೀ ಗ್ರಾಮದವಳಿದ್ದದರಿಂದ ಅವಳ ಗುಡಿಯು ಇಲ್ಲಿರುತ್ತದೆಂದು ತೋರುತ್ತದೆ. ಇಲ್ಲಿಂದ ಮುಂದೆ ಅವಳು ಕಲ್ಯಾಣಕ್ಕೆ ಹೋಗಿರಬಹುದು. ಇವಳು ವಚನಕಾರಳಿದ್ದು ಅವಳ ಮುದ್ರಿಕೆಯು ಕದಿರರೆಮ್ಮಿಯೊಡೆಯ ಗುಮ್ಮೇಶ್ವರಾ ಎಂದಿದೆ. ಈ ರೆಮ್ಮವ್ವೆಯಲ್ಲದೆ 'ಏಲೇಶ್ವರ' ಎಂಬ ಮುದ್ರಿಕೆಯನ್ನಿಟ್ಟುಕೊಂಡು ವಚನಗಳನ್ನು ರಚಿಸಿದ ರೆಮ್ಮವ್ವೆ ಎಂಬ ಬೇರೊಬ್ಬ ವಚನಕಾರಳು ಆಗಿ ಹೋಗಿದ್ದಾಳೆ. ಅವಳು ಏಲೇಶಕೇತಯ್ಯನ ಗ್ರಾಮವಾದ ಏಲೇರಿ ಇಲ್ಲಿಯವಳು. ಈ ಎರಡನೇ ರೆಮ್ಮವ್ವೆಯ ಚರಿತ್ರೆಯನ್ನು ನಾವು ಶಿವಶರಣರ ಚರಿತ್ರೆಗಳು ಭಾಗ ೧ ಪುಟ ೫೩ ಇದರಲ್ಲಿ ಕೊಟ್ಟದ್ದೇವೆ.

ಮುಕ್ತಾಯಿಯ ಹೆಸರು ಗಣಸಹಸ್ರದಲ್ಲಿ ಬಂದಿದೆ. ಆದ್ದರಿಂದ ಇವಳು ಹಿಂದಿನವಳು. ಇವಳ ವಿಷಯವಾಗಿ ದೇವಿಯರ ತ್ರಿವಿದಿಯಲ್ಲಿ ವರ್ಣನೆ ಇರುವದು ಹೇಗೆಂದರೆ—

ಭಕ್ತಿಸಾಗರ ಮೋಣ್ವಿ। ರಕ್ತಿಯಾ ನೆಲೆವನೆಯು
ಮುಕ್ತಿಯಾ ಕೋಶ ಇವನಂಗದೊಳು ತಾಳ್ದ
ಮುಕ್ತಾಯುಕ್ಕನೆ ಶರಣಾಗು.

---

## ತಾಳೀಕೋಟೆಯ ಶಿವದೇವ.

ತಾಳೀಕೊಟ್ಟೆ ಎಂಬ ಗ್ರಾಮದಲ್ಲಿ ಶಿವದೇವನೆಂಬ ಶಿವಶರಣನು ವಾಸಮಾಡುತ್ತಿದ್ದನು. ತಾಳೀಕೊಟ್ಟೆ ಅಥವಾ ಕೊಟ್ಟೆ ಎಂಬ ಗ್ರಾಮವು ವಿಜಾಪುರ ಜಿಲ್ಲೆಯಲ್ಲಿ ವಿಜಾಪುರದಿಂದ ಆಗ್ನೇಯದಿಕ್ಕಿಗೆ ೪೫ ಮೈಲು ಗಳ ಮೇಲೆ ಇರುತ್ತಿದೆ. ಈಗ ಅದಕ್ಕೆ ತಾಳೀಕೋಟೆ ಎಂಬ ಹೆಸ ರಿವೆ. ಶಿವದೇವನು ಶ್ರೇಷ್ಠತರಗತಿಯ ಶಿವಾನುಭವಿಯು. ಅವನು ಮೊದಲು ಧನಿಕನು. ಆದರೆ ಅವನು ಭಕ್ತಮಾಹೇಶ್ವರರಿಗೆ ತಾನು ಗಳಿಸಿದ್ದನ್ನೆಲ್ಲ ದಾನಧರ್ಮ ಮಾಡುತ್ತ ಬಂದದ್ದರಿಂದ ಅವನು ಸ್ವಲ್ಪ ಕಾಲದಲ್ಲಿ ನಿರ್ಧನಿಕನಾದನು. ಆದರೆ ಅವನು ಅದಕ್ಕೋಸ್ಕರ ಎಷ್ಟು ಮಾತ್ರವೂ ಖೇದಪಡದೆ ತನ್ನ ಶಿವಾನುಭವದ ಆಚರಣೆಯನ್ನು ಬಿಡದೆ ಸ್ವಯಜಂಗಮಸ್ಥಲದಲ್ಲಿ ಆಚರಿಸುತ್ತ ಬಂದನು.

ಜಂಗಮಲಿಂಗದಲ್ಲಿ ಸ್ವಯ, ಚರ, ಪರವೆಂದು ಮೂರು ವಿಧ ಗಳಿವೆ. ಸ್ವಯ ಜಂಗಮನಾಗಿರುವವನು ಸ್ವಸ್ಥಾನದಲ್ಲಿದ್ದುಕೊಂಡು ಶಿವಧ್ಯಾನಪರಾಯಣನಾಗಿರುತ್ತಾನೆ. ಚರಜಂಗಮನು ಶಿವಾನುಭವಿ ಯಾಗಿ ಧರ್ಮೋದ್ಧಾರ ಕಾರ್ಯಗಳನ್ನು ಮಾಡುತ್ತ ಸಂಚರಿಸುತ್ತಾನೆ. ಮತ್ತು ಪರಜಂಗಮನು ತಾನು ಮತ್ತು ಜಗತ್ತು ಇವುಗಳಿಗೆ ಮೀರಿ ದವನಾಗಿ ಚಿದಾತ್ಮನಲ್ಲಿ ಯಾವಾಗಲೂ ಬೆರೆತುಕೊಂಡಿರುತ್ತಾನೆ. ಆದರೆ ಶಿವದೇವನು ಸ್ವಯ ಜಂಗಮಸ್ಥಲದಲ್ಲಿದ್ದುಕೊಂಡು ಲಿಂಗಮುಖವಾಗಿ ತನ್ನ ಆಚರಣೆಗಳನ್ನು ಆಚರಿಸುತ್ತ ತನ್ನ ಲಿಂಗಚೈತನ್ಯದಲ್ಲಿ ವ್ಯವಹ ರಿಸುವವನಾಗಿದ್ದನು.

ಹೀಗೆ ಶಿವದೇವನು ಸ್ವಯಜಂಗಮನಾಗಿ ಆಚರಿಸುವಲ್ಲಿ ತನ್ನ ಆಚರಣೆಗೆ ಅನುಕೂಲವಾಗಬೇಕೆಂದು ತನ್ನ ಗ್ರಾಮವನ್ನು ಬಿಟ್ಟು ಪಾವನದೇವನೆಂಬ ಶಿಷ್ಯನನ್ನು ಕರೆದುಕೊಂಡು 'ಮಾಲ್ಯ' ಎಂಬ ಹೆಸ

ರಿಸ ಒಂದು ಕಾಡಿನಲ್ಲಿ ಹೋಗಿ ಅಲ್ಲಿಯ ಒಂದು ಮರದ ಹೊದ ರನ್ನು ಆಶ್ರಯಿಸಿ ಅದರೊಳಗೆ ವಾಸಮಾಡಹತ್ತಿದನು. ಅಲ್ಲಿಯೇ ಅವನು ಇದ್ದುಕೊಂಡು ತನ್ನ ಶಿವಲಿಂಗವನ್ನು ಅರ್ಚಿಸುತ್ತ ಶಿವಧ್ಯಾನದಲ್ಲಿ ರುವನು. ಪಾವನದೇವನು ಅವನ ಸೇವೆಯನ್ನು ಮಾಡುತ್ತ ಅವನ ಹತ್ತಿರವೇ ಯಾವಾಗಲೂ ಇರುವನು. ಅವನು ಸುತ್ತಲಿನ ಗ್ರಾಮ ಗಳಲ್ಲಿ ಹೋಗಿ ಭಿಕ್ಷೆಯನ್ನು ಬೇಡಿ ಅದನ್ನು ತನ್ನ ಗುರುವಿಗೆ ಕೊಡಲು ಶಿವದೇವನು ಅದನ್ನು ಲಿಂಗಾರ್ಪಿತ ಮಾಡಿ ಭುಂಜಿಸುವನು. ಹೀಗೆ ಕೆಲವು ವರ್ಷಗಳ ವರೆಗೆ ಉಭಯತರು ಏಕಾಂತವಾಸಿಗಳಾಗಿ ಆ ಕಾಡಿನಲ್ಲಿದ್ದರು.

ಹೀಗಿರುವಲ್ಲಿ ಈ ಪ್ರಾಂತದಲ್ಲಿ ಒಂದು ವರುಷ ಮಳೆತಡೆದು ಬರಗಾಲವು ಉಂಟಾಯಿತು. ಕಾಳುಕಡಿಗಳು ಎಲ್ಲಿಯೂ ದೊರಕದೆ ಹೋದವು. ಜನರು ಹೊಟ್ಟೆಗಿಲ್ಲದೆ ಸಾಯುಹತ್ತಿದರು. ಇಂಥ ದುರ್ಭಿಕ್ಷ ಕಾಲದಲ್ಲಿ ಪಾವನದೇವನು ಸುತ್ತಿಲಿನ ಏಳೂರು ತಿರುಗಿ ಬಂದರೂ ಒಬ್ಬನ ಅಶನಕ್ಕೆ ಸಾಲುವಷ್ಟು ಸಹ ಅವನಿಗೆ ಆಹಾರ ದೊರಕುತ್ತಿದ್ದಿಲ್ಲ. ಆದ್ದ ರಿಂದ ಅವನು ತನಗೆ ದೊರಕಿದ್ದನ್ನೆಲ್ಲ ತನ್ನ ಗುರುವಿಗೆ ತಾನು ಕೊಟ್ಟು ಭಿಕ್ಷವನ್ನು ತಂದ ಪಾತ್ರೆಯನ್ನೂ ಜೋಳಿಗೆಯನ್ನೂ ತೊಳೆದು ಅದರ ನೀರನ್ನು ಕುಡಿದು ಅಂಥ ನೀರಿನ ಮೇಲೆ ಇರಹತ್ತಿದನು.

ಪಾವನದೇವನು ಇಂಥ ನೀರನ್ನು ಕುಡಿದು ಎಷ್ಟು ದಿವಸ ಬದುಕ ಬಹುದು? ಅವನು ಹೊಟ್ಟೆಗಿಲ್ಲದೆ ಬರಬರುತ್ತ ಕೃಶನಾಗಹತ್ತಿದನು. ಶಿವದೇವನು ಅದನ್ನು ಕಂಡು— ನೀನು ಹೀಗೇಕೆ ಬಡವಾಗುತ್ತ ಬಂದೆ ಎಂದು ಕೇಳಲು ಅವನು— ದೇಶದಲ್ಲೆಲ್ಲ ದುರ್ಭಿಕ್ಷವಾಗಿದೆ, ನನಗೆ ಸಿಕ್ಕಷ್ಟು ಭಿಕ್ಷೆಯನ್ನು ನಿಮಗೆ ಕೊಟ್ಟು ಪಾತ್ರೆಯನ್ನು ತೊಳೆದು ಅದರ ನೀರನ್ನು ನಾನು ಸಲಿಸುತ್ತ ಬಂದಿದ್ದೇನೆ ಎಂದು ಎನ್ನಲು, ಶಿವದೇ ವನು— ಹರಹರಾ! ಇದು ಎಂಥ ಗುರುಭಕ್ತಿಯು! ಇಂಥ ಗುರು ಭಕ್ತಿ ಇದ್ದ ಈ ನಾಡಿನಲ್ಲಿ ಶಿವನು ಮಳೆಯನ್ನು ಕರುಣಿಸಬೇಡವೇ? ಶಿವನು ಹೀಗೆ ನಿರ್ದಯನಾದರೆ, ಪ್ರಮಥರಿರಾ, ನೀವಾದರೂ ಕರುಣಿ ಸಬೇಡವೇ? ಎಂದು ಗಣಂಗಳಲ್ಲಿಯೂ ಶಿವನಲ್ಲಿಯೂ ಮುನಿಸು ತಾಳಿ ಇನ್ನುಮೇಲೆ ನಾನೂ ಕೂಡ ಪ್ರಸಾದವನ್ನು ಸ್ವೀಕರಿಸುವದಿಲ್ಲ ಎಂದು ನಿರ್ಧರಿಸಿ ಅರ್ಚನ ಅರ್ಪಣಾದಿ ಕ್ರಿಯೆಗಳನ್ನು ಬಿಟ್ಟುಕೊಟ್ಟು ತಾನೂ ಉಪವಾಸ ಮಾಡುತ್ತ ಕೇವಲ ಶಿವಧ್ಯಾನದಲ್ಲಿರಹತ್ತಿದನು.

ಹೀಗೆ ಕೆಲವು ದಿವಸಗಳು ಸಂದಿಹೋಗುವಷ್ಟರಲ್ಲಿ ಗುರುಶಿಷ್ಯರುಭಯತರು ಮರಣೋನ್ಮುಖರಾದರು. ಆಗ ಶಿವನು ಅವರ ನಿಷ್ಠೆಗೆ ಮೆಚ್ಚಿ ಪ್ರಸನ್ನನಾಗಿ— ನಿಮಗೇನುಬೇಕು ಬೇಡು ಎಂದೆನಲು ಶಿವದೇವನು - ಜಗಹಿತಾರ್ಥವಾಗಿ ದೇಶದಲ್ಲಿ ನೀನು ಮಳೆಯನ್ನು ಕರೆಯಬೇಕು. ಅಸಂಖ್ಯ ಜನರು ಮರಣಹೊಂದಹತ್ತಿದ್ದಾರೆ. ಪಾವನದೇವನಂಥವರು ಇದ್ದ ನಾಡಿನಲ್ಲಿ ಹೀಗಾಗಬಾರದು. ಜನರು ಬೆಳೆಗಳನ್ನು ಬೆಳೆದು ಅವರುಂಬುವನ್ನು ಕಳುಹು. ಇದನ್ನಷ್ಟೇ ನಾನು ಬೇಡಿಕೊಳ್ಳುತ್ತೇನೆ ಎಂದೆನ್ನಲು, ಶಿವನು ಹಾಗೆಯೇ ಆಗಲೆಂದು ನುಡಿದನು. ಇಷ್ಟಾದ ಬಳಿಕ ನಾಡಿನಲ್ಲಿ ಮಳೆಗರೆಯಿತು. ಹದಿನೆಂಟು ತೆರದ ಧಾನ್ಯಗಳು ಬೆಳೆದವು. ದೇಶದಲ್ಲಿ ಸುಭಿಕ್ಷವಾಯಿತು. ಇದು ಶಿವದೇವನ ಮತ್ತು ಪಾವನದೇವನ ಮಹಿಮೆ ಎಂದು ಜನರು ಅವರನ್ನು ಕೊಂಡಾಡಹತ್ತಿದರು. ಉಭಯತರು ಶ್ರೇಷ್ಠ ಶಿವಶರಣರೆಂದು ಅವರನ್ನು ಅತ್ಯಂತವಾಗಿ ಮನ್ನಿಸಹತ್ತಿದರು.

ಮುಂದೆ ಪಾವನದೇವನು ಎಂದಿನಂತೆ ಗ್ರಾಮಗಳಲ್ಲಿ ಭಿಕ್ಷವನ್ನು ಎತ್ತಿ ಗುರುವಿಗೆ ತಂದುಕೊಡಹತ್ತಿದನು. ಹೀಗೆ ಉಭಯತರು ಶಿವಾನುಭವಿಗಳಾಗಿ ಸ್ವಯಲಿಂಗದಲ್ಲಿ ಅಡಗಿದರು. ಉಭಯತರು ತಮ್ಮ ಉಚ್ಚ ಆಚರಣೆಯಿಂದ ಮಾದರೀ ಗುರುಶಿಷ್ಯರೆಂದು ಲೋಕದಲ್ಲಿ ಪ್ರಸಿದ್ಧರಾದರು.

ತಾಳೀಕೋಟಿ ಗ್ರಾಮಕ್ಕೆ ಸಮೀಪವಾಗಿ ಸೋಗಲಿ ಎಂಬ ನದಿಯು ಮತ್ತು ಡೋಣಿ ಎಂಬ ನದಿಗಳು ಇರುತ್ತವೆ. ಶಿವದೇವನು ವಾಸಮಾಡಿದ ಸ್ಥಳವು ಸೋಗಲಿ ನದಿಯ ಬದಿಯಲ್ಲಾಗಲಿ ಇಲ್ಲವೆ ಅವೆರಡೂ ನದಿಗಳು ಕೂಡಿದ ಸ್ಥಳದಿಂದ ಮುಂದೆ ೮-೧೦ ಮೈಲುಗಳ ಮೇಲಿರುವ ಗುಡ್ಡಗಾಡು ಪ್ರದೇಶದಲ್ಲಾಗಲಿ ಇರಬಹುದೆಂದು ತೋರುತ್ತದೆ.

ಶಿವದೇವನ ಹೆಸರು ಗಣಸಹಸ್ರದಲ್ಲಿ ಬಂದಿದೆ. ಅವನು ಅಮರಗಣಂಗಳಲ್ಲಿ ಒಬ್ಬನಾಗಿದ್ದಾನೆ. 'ಕೊಟ್ಟೆಯ ಶಿವದೇವಯ್ಯ' ಅಥವಾ 'ತಾಳೀಕೋಟೆಯ ಶಿವದೇವಯ್ಯ' ಎಂದು ಅವನ ಉಲ್ಲೇಖಗಳು ಅನೇಕ ಗ್ರಂಥಗಳಲ್ಲಿ ಬಂದಿರುತ್ತವೆ.

---

# ದೇಣಿಗೆಗಳು.

ಶ್ರೀಮಂತ ಅಣ್ಣಾರಾವ ಮಹಾಲಿಂಗಪ್ಪ ಥಂಗೆ ಮು. ಸೊಲಾಪುರ ಇವರ ಮಾತೋಶ್ರೀಯವರಾದ ಶ್ರೀ. ಚನ್ನಬಸವ್ವಾ ಥಂಗೆ ಇವರು ತಮ್ಮ ೧೦೦ನೇ ವರ್ಷದಲ್ಲಿ ೩೦-೩-೪೬ ನೇ ದಿವಸ ಲಿಂಗೈಕ್ಯರಾದರು. ಅವರು ತಮ್ಮ ಪ್ರೇಮಳ ಸ್ವಭಾವದ ಮೂಲಕ ಸೊಲ್ಲಾಪುರ ಪಟ್ಟಣದಲ್ಲಿ ಎಲ್ಲರಿಗೂ ಅತ್ಯಂತ ಪ್ರಿಯರಾಗಿದ್ದರು. ಅವರ ಸ್ಮಶಾನಯಾತ್ರೆಗೆ ಏಳೆಂಟು ನೂರು ಜನ ಸಮುದಾಯವು ಕೂಡಿದ್ದು ಸ್ಮಶಾನ ಭೂಮಿಯಲ್ಲಿ ಶ್ರೀಮಂತ ಬಾಬಾಸಾಹೇಬ ವಾರದ ಇವರು ಅವರ ಗುಣಗೌರವಪರ ಭಾಷಣ ಮಾಡಿದರು. ಶ್ರೀಮಂತ ಅಣ್ಣಾರಾವ ಇವರು ಈ ಸಮಯದಲ್ಲಿ ಶ್ರೀ ವೀರಶೈವ ಪಟ್ಟಸಾಲೀ ಸಮಾಜಕ್ಕೆ ೫೧ ರೂ॥, ಸುದರ್ಶನ ಪತ್ರಿಕೆಗೆ ೫೧ ರೂ॥, ಮಹಾಜನ ಸಭಾ ಬೋರ್ಡಿಂಗಕ್ಕೆ ೫೧ ರೂ॥, ವೀರಶೈವ ಮಹಿಲಾ ಜ್ಞಾನ ಮಂದಿರ ಮತ್ತು ಶಿವಾನುಭವ ಪತ್ರಿಕೆ ಇವುಗಳಿಗೆ ೨೫ ರೂಪಾಯಿ ದೇಣಿಗೆಯನ್ನು ಕೊಟ್ಟರು. ಶಿವಾನುಭವ ಪತ್ರಿಕೆಯು ಸಲುವಾಗಿ ಶ್ರೀಮಂತ ಅಣ್ಣಾರಾವ ಇವರು ಯಾವಾಗಲೂ ಪ್ರೇಮವಹಿಸಿದವರಾಗಿದ್ದು ಅವರ ದೇಣಿಗೆಯನ್ನು ನಾವು ಅತ್ಯಂತ ಕೃತಜ್ಞತಾಪೂರ್ವಕವಾಗಿ ಸ್ವೀಕರಿಸುತ್ತೇವೆ.

ಮ. ರಾ. ರಾ. ಈಶ್ವರಪ್ಪ ಉಮರಾಣಿ ಸಬರಜಿಸ್ಟ್ರರ ನವಲಗುಂದ ಇವರು ತಮ್ಮ ಮಾತೋಶ್ರೀಯವರಾದ ಶ್ರೀ. ರುದ್ರಮ್ಮ ಇವರು ೫-೧-೪೬ ನೇ ದಿವಸ ಲಿಂಗೈಕ್ಯರಾದಾಗ್ಗೆ ಅವರ ಸ್ಮರಣಾರ್ಥ ಶಿವಾನುಭವ ಪತ್ರಿಕೆಗೆ ಐದು ರೂಪಾಯಿ ದೇಣಿಗೆಯನ್ನು ಕಳಿಸಿದ್ದು ಇದನ್ನು ನಾವು ಆಭಾರಪೂರ್ವಕವಾಗಿ ಸ್ವೀಕರಿಸುತ್ತೇವೆ.

ಸಂಪಾದಕ— ಶಿವಾನುಭವ.




ಸಂಪುಟ ೨೦ ]  ಮೇ ೧೯೪೬.  [ ಸಂಚಿಕೆ ೮

## ವಿಷಯಾನುಕ್ರಮಣಿಕೆ.

# ಶಿವಾನುಭವ


| ವರ್ಷ ೨೦ | ಮೇ ೧೯೪೬. | ಸಂಚಿಕೆ ೮ |
| --- | --- | --- |


## ಸೊನ್ನಲಿಗೆಯ ಸಿದ್ಧರಾಮನು ಶೈವನೆ ?


(ಲೇಖಕ:— ಶ್ರೀಯುತ ಆರ್. ಸಿ. ಹಿರೇಮಠ ಪ್ರೊಫೇಸರ ಬಸವೇಶ್ವರ ಕಾಲೇಜ ಬಾಗಲಕೋಟ.)


ವೀರಶೈವ ಸಾಹಿತ್ಯದ ಅಭ್ಯಾಸವು ವಿಶೇಷವಾಗಿ ನಡೆದಂತೆ ವಿಮರ್ಶಕರಿಗೆ ವಿವಿಧ ಸಮಸ್ಯೆಗಳು ಮುಂದೆಬಂದು ನಿಲ್ಲಹತ್ತಿವೆ. ವಚನವಾಙ್ಮಯದ ಉದಯಕಾಲವು ೧೨ ನೆಯ ಶತಮಾನವಾಗಿರದೆ ಹದಿನೈದನೆಯ ಶತಮಾನವೆಂದು ಹಲವರು ತರ್ಕಿಸಿದರು.[೧] ಗಿರಿಜಾ ಕಲ್ಯಾಣದ ಹರಿಹರದೇವನು ಶೈವನಾಗಿದ್ದನೆಂದು ಕೆಲವು ಪಂಡಿತರು ಅಭಿಪ್ರಾಯ ವಿತ್ತರು.[೨] ವೀರಶೈವ ಧರ್ಮಕ್ಕೆ ಜೀವಕಳೆಯನ್ನಿತ್ತ ಪ್ರಭುದೇವ, ಬಸವಣ್ಣ, ಮಹಾದೇವಿಯಕ್ಕ, ಚನ್ನಬಸವಣ್ಣನವರೇ ಮೊದಲಾದ ಪ್ರಮುಖ ಶಿವಶರಣರೊಡನೆ ಸ್ಥಾನಮಾನಗಳನ್ನು ಪಡೆದು[೩] ವೀರಶೈವರಿಗೆ ಪಂಚಪ್ರಾಣದಂತಿದ್ದ ಸೊನ್ನಲಿಗೆಯ ಸಿದ್ಧರಾಮನು ವೀರಶೈವನಾಗಿರದೆ ಶೈವನಾಗಿರಬೇಕೆಂಬ ಸಂಶಯವು ಮತ್ತೆ ಕೆಲವು ಪಂಡಿತರಿಗೆ ಬರತೊಡಗಿದೆ. ಮೇಲೆ ನಿರ್ದೇಶಿಸಿದ ಹಲವಾರು ಸಮಸ್ಯೆಗಳಲ್ಲಿ ಒಂದಾದ ಈ ವಿಷಯವನ್ನೇ ಇಲ್ಲಿ ವಿವೇಚಿಸಬೇಕಾಗಿದೆ.

---

(೧) ಡಾಕ್ಟರ ಚಿಲಕೂರ ನಾರಾಯಣರಾಯರ ಲೇಖನ ಪ್ರ. ೫.

(೨) ಹರಿಹರದೇವ ಎಂಬ ಗ್ರಂಥ ಪು. (೬೮-೭೪) ನೋಡು.

(೩) 'Other leading associates of Basava were Madival Machaya, Prabhudeva and Siddharam–E. P. R.

ಮಹಾಕವಿ ರಾಘವಾಂಕನ 'ಸಿದ್ಧರಾಮ ಚರಿತ್ರೆ'ವನ್ನು ಸಂಪಾದಿಸಿ ಗ್ರಂಥಕ್ಕೆ ಮುನ್ನುಡಿಯನ್ನು ಬರೆವಲ್ಲಿ ಮಾನ್ಯರಾದ ಡಿ. ಎಲ್. ನರಸಿಂಹಾಚಾರ, ಎಮ್. ಏ. ಅವರು ಸಿದ್ಧರಾಮನ ವೀರಶೈವತ್ವದ ಬಗೆಗೆ ಸಂಶಯವನ್ನೆತ್ತಿ ಹೀಗೆ ಅಭಿಪ್ರಾಯವಿತ್ತಿರುವರು 'ಸಿದ್ಧರಾಮ ಚಾರಿತ್ರದ ಸಿದ್ಧರಾಮನು ವೀರಶೈವನೆಂಬುವದಕ್ಕಿಂತ ಶೈವನೆಂದು ಹೇಳುವದು ಹೆಚ್ಚು ಸಂಗತವಾಗಿದೆ. [೪] 'ಭವಿಯಾಗಿದ್ದ ಸಿದ್ಧರಾಮನನ್ನು ಇಷ್ಟಲಿಂಗಧಾರಣೆ ಷಟ್‌ಸ್ಥಲೋಪದೇಶಗಳಿಂದ ವೀರಶೈವನನ್ನಾಗಿ ಮಾಡುವುದರಲ್ಲಿ 'ಶೂನ್ಯ ಸಂಪಾದನೆ' ಕೃತಕೃತ್ಯವಾಗಿದೆ ಇದಕ್ಕಾಗಿ ಕೆಲವು ಹೊಸ ವಚನಗಳು ಸ್ಪಷ್ಟವಾಗಿ ಅಲ್ಲಮ ಸಿದ್ಧರಾಮರೇ ಮುಂತಾದ ಶೂನ್ಯ ಸಂಪಾದನೆಯ ಶರಣರಿಗೆ ಆರೋಪಿತವಾಗಿರಬಹುದು.' [೫] 'ಸಿದ್ಧರಾಮನು ಶೈವನೆಂಬ ನಂಬಿಕೆ ಚಾಮರಸನ ಕಾಲದ ವರೆಗೂ ಇದ್ದು ಆಮೇಲೆ ಅವನಿಗೆ ವೀರಶೈವತ್ವ ಸಂಪ್ರಾಪ್ತವಾಯಿತೆಂದು ಈಗಿನ ಮಟ್ಟಿಗೆ ಮಾಡಬೇಕಾದ ತೀರ್ಮಾನ [೬] ಸಿದ್ಧರಾಮನ ವೀರಶೈವತ್ವದ ಬಗೆಗಿದ್ದ ಈ ಸಂಶಯದ ನಿರಸನವಾಗಬೇಕಾದರೆ ಆತನ ಸಂದರ್ಭ ಬರುವ ವೀರಶೈವ ಸಾಹಿತ್ಯದೊಳಗಣ ಗ್ರಂಥಗಳನ್ನು ಕೂಲಂಕಷವಾಗಿ ವಿವೇಚಿಸಬೇಕಾಗುವದು. ರಾಘವಾಂಕನು ಚಿತ್ರಿಸಿರುವ ಸಿದ್ಧರಾಮನ ಬಗೆಗೆ ಈ ಸಮಸ್ಯೆ ಮೊದಲು ಒಡಮೂಡಿರುವುದರಿಂದ 'ಸಿದ್ಧರಾಮ ಚಾರಿತ್ರ'ವನ್ನೇ ಪ್ರಾರಂಭದಲ್ಲಿ ವಿಚಾರಿಸುವುದು ಅಪ್ರಸ್ತುತವಾಗಲಾರದು.

'ಸಿದ್ಧರಾಮನು' ಶೈವನೆಂಬುದಕ್ಕೆ ಮುನ್ನುಡಿಕಾರರು ಕೊಡುವ ಕಾರಣಗಳನ್ನು ವಿಮರ್ಶಿಸುವುದು ವಿಹಿತವಾಗಿದೆ. 'ಸಿದ್ಧರಾಮನಾಥಂ ಶೈವ ಸಾಮ್ರಾಜ್ಯ ಸುಖದೊಳಿರಲು, [೭] 'ಸಿದ್ಧಪತಿ ಶೈವ ಸಾಮ್ರಾಜ್ಯ ಸುಖದೊಳಿರಲು' [೮] ಎಂದು ಕವಿ ನುಡಿದಿರುವ ಮಾತುಗಳು ಸಿದ್ಧರಾಮನು ಶೈವನೆಂಬುದನ್ನು ಸೂಚಿಸುತ್ತವೆ ಎಂದು ಅವರ ಅಭಿಪ್ರಾಯ. ಶೈವಸಾಮ್ರಾಜ್ಯ ಎಂಬ ಪದವನ್ನು ವೀರಶೈವ ಕಾವ್ಯಗಳಲ್ಲಿ

---

(೪) ಸಿದ್ಧರಾಮ ಚಾರಿತ್ರ ಪುಟ iii ನೋಡು.
(೫) ,, ,, ,, v ,,
(೬) ,, ,, ,, vi[illegible] ,,
(೭) ಸಿ. ಪು. ಸಂ. ೭ ಪು. ೩೫
(೮) ,, ,, ೫೫

ಅನೇಕ ಸಲ ವಾಚ್ಯಾರ್ಥದಲ್ಲಿ ಉಪಯೋಗಿಸದೆ ಲಕ್ಷಣಾರ್ಥದಿಂದ ವೀರಶೈವ ಎಂಬ ಅರ್ಥವನ್ನು ಕೊಡುವಂತೆ ಬಳಿಸಲಾಗಿದೆ 'ಸಂಗನ ಬಸವಂ ಬಸವಿದೇವಂ ಸದ್ಗುರೂಪದೇಶ ಲಭ್ಯಮಾನ ಕರಕಮಳಸ್ಥಿತ ಶಿವಲಿಂಗೋತ್ಪನ್ನ ಹರುಷ ಪುಳಕ ಶರೀರ ಸುಖಜಳ ಬಂದು ಸಂದಷ್ಪನಯನ ಪುಷ್ಪ ಸಂಯುತ ಶೈವ ಸಾಮ್ರಾಜ್ಯನಾಗಿ' 'ಸಂಗನ ಬಸವಂ ಶೈವಾನುರಾಗ ಸಂಪತ್‌ಸುಖ ತರಂಗಿಣೀನಿಮಗ್ನ ಚಿತ್ತಂ'[೯] 'ತನತನಗೆ ಶಿವಕಾರುಣ್ಯ ಶೈವ ಸಾಮ್ರಾಜ್ಯ ಸಂಪದಂ ಕೈ ಸಾರ್ದು ದೆಂಬುತ್ಸವಮಂ ಕೇಳ್ದು ದೇಶದೇಶದ ಪತ್ತೆಂಟು ಗಾವುದದ ಮಾಹೇ ಶ್ವರರ್ ಕರುಣಿಸಿಬಂದು ನೆರೆದಿರೆ'[೧೦] ಬಸವರಾಜನು ಅವರ ಪಾದ ತೊಳೆದು ಉದಕವ ಸ್ವೀಕರಿಸುವನು. ಇಲ್ಲಿ ಶೈವ ಸಾಮ್ರಾಜ್ಯ ಎಂಬ ಪದದ ಅರ್ಥದಿಂದ ಕೇವಲ ಶೈವ ಸಾಮ್ರಾಜ್ಯ ಎಂಬ ಅರ್ಥವಾದರೆ ಬಸವಣ್ಣನವರು ಶೈವರಾಗಿ ಹೋಗುತ್ತಾರೆ. ಅಂತೆ ಹಾಗೆ ಅರ್ಥ ಮಾಡದೆ ಅದನ್ನು ಲಕ್ಷಣಾರ್ಥದಿಂದ ವೀರಶೈವ ಎಂದು ತಿಳಿದುಕೊ ಳ್ಳಬೇಕಾಗುವದು.

ಹಾವಿನಹಾಳ ಕಲ್ಲಯ್ಯನ ರಗಳೆಯಲ್ಲಿಯೂ ಒಂದೆರಡು ಕಡೆಗೆ ಶೈವಸಾಮ್ರಾಜ್ಯದ ಅರ್ಥವನ್ನು ಹೀಗೆ ವಿಸ್ತರಿಸಬೇಕಾಗುವದು

'ಇಂತು ಗುರುರುದ್ರಮುನಿದೇವ ಬಿಜಯಂಗೆಯ್ಯೆ
ಪಿಂತೆ ಕಲ್ಲಯ್ಯನಾ ಶೈವರಾಜ್ಯಂಗೆಯ್ಯೆ,[೧೧]

ರುದ್ರಮುನಿಗಳಿಂದ ವೀರಶೈವ ದೀಕ್ಷೆಪಡೆದ ಕಲ್ಲಯ್ಯನು ವೀರಶೈವ ರಾಜ್ಯಂಗೆಯ್ಯುವುದು ಸ್ವಾಭಾವಿಕವಾಗಿದೆ. ಆ ಶಬ್ದವನ್ನು ಬಳಸದೆ 'ಶೈವಸಾಮ್ರಾಜ್ಯಂಗೆಯ್ಯೆ' ಎಂಬುದನ್ನೇ ವಿಶಿಷ್ಟ ಅರ್ಥದಲ್ಲಿ ಉಪ ಯೋಗ ಮಾಡಲಾಗಿದೆ. ಇದೇ ರೀತಿಯಲ್ಲಿ ಸಿದ್ಧರಾಮ ಪುರಾಣದಲ್ಲಿ ಬರುವ 'ಸಿದ್ಧರಾಮನಾಥಂ ಶೈವ ಸಾಮ್ರಾಜ್ಯ ಸುಖದಲ್ಲಿದ್ದನೆಂದು ಕವಿ ನುಡಿದ ಮಾತುಗಳಿಂದ ಆತನು ಶೈವನೇ ಆಗಿರಬೇಕೆಂಬ ಸಿದ್ಧಾಂ ತಕ್ಕೆ ಬಾರದೆ ವೀರಶೈವನಾಗಿದ್ದರೂ ಆಗಿರಬಹುದೆಂದು ತರ್ಕಿಸಬಹುದು.

(೯) ಬಸವರಾಜ ದೇವರ ರಗಳೆ ಪು. ೨೪.

(೧೦) ,, ಪು. ೩೫

(೧೧) ಹರಿಹರನ ರಗಳೆಗಳು ಭಾಗ ೬, ಪುಟ ೭೭.

ಹುಟ್ಟಿದೊಡನೆ ಸಿದ್ಧನಿಗೆ ಅಷ್ಟಾವರಣವಾಯಿತೆಂದಾಗಲಿ, ಲಿಂಗಧಾರಣೆ ನಡೆಯಿತೆಂದಾಗಲಿ ಇರದೆ 'ಜಾತಕರ್ಮಾದಿಗಳು ನಡೆದವೆಂದು ಕವಿಯು ಹೇಳುತ್ತಾನೆ. ಹುಟ್ಟಿದ ಶಿಶುವಿಗೆ ಜಾತಕರ್ಮಾದಿಗಳು ನಡೆದ ಮಾತ್ರಕ್ಕೆ ಆತನು ಶೈವನಾಗಲಾರನು. ಪ್ರಭುದೇವರು ಹುಟ್ಟಿದೊಡನೆ ಜಾತ ಕರ್ಮಗಳಾದುವೆಂದು ಹರಿಹರನು ಹೇಳುತ್ತಾನೆ.[೧೨] ಹೋಮ ಮಾಡುವ, ಸ್ಥಾವರಲಿಂಗ ಪ್ರತಿಷ್ಠೆ ಮಾಡಿ ಪೂಜಿಸುವ ದೇವಾಲಯ ಗಳನ್ನು ಕಟ್ಟಿಸುವ ಉಲ್ಲೇಖವು ಸಿದ್ಧರಾಮ ಪುರಾಣದಲ್ಲಿ ಅನೇಕ ಕಡೆಗೆ ಬರುತ್ತದೆ. ಇವುಗಳನ್ನು ಉದ್ಧರಿಸಿ ಶ್ರೀಯುತ ಡಿ. ಎಲ್. ನರಸಿಂಹಾಚಾರ್ಯರು ರಾಘವಾಂಕನ ಸಿದ್ಧರಾಮನು ಶೈವನಾಗಿರಬೇ ಕೆಂದು ನಿರ್ಣಯಿಸಿರುವರು. ವೀರಶೈವ ಧರ್ಮವು ಒಬ್ಬ ಮತಸ್ಥಾಪ ಕನಿಂದ ಆವುದೋ ಒಂದುದಿನ ಅಸ್ತಿತ್ವಕ್ಕೆ ಬಂದುದಲ್ಲ. ಅದು ಬಹು ಪುರಾತನವಾದುದೆಂದು ಅನೇಕ ಪಂಡಿತರು ಅಭಿಪ್ರಾಯಪಿತ್ತಿರು ವರು.[೧೩] ಹನ್ನೆರಡನೆಯ ಶತಮಾನದಲ್ಲಿ ಬಸವಾದಿ ಪ್ರಮಥರು ಈ ಪುರಾತನ ವೀರಶೈವ ಧರ್ಮವನ್ನು ಪುನರುಜ್ಜೀವನಗೊಳಿಸಿರುವರು. ವೀರಶೈವ ಧರ್ಮಕ್ಕೆ ಆಧಾರ ಗ್ರಂಥಗಳಾದ ಶಿವಾಗಮಗಳಲ್ಲಿ ಆ ಧರ್ಮದ ಬಹು ಮಹತ್ವದ ತತ್ತ್ವಗಳಿರುವುದು ಕಂಡುಬರುತ್ತದೆ. ಶಿವನನ್ನು ಲಿಂಗರೂಪದಲ್ಲಿ ಇಲ್ಲವೆ ದೇವಾಲಯದ ಮೂರ್ತಿಯ ರೂಪದಲ್ಲಿ ಪೂಜಿಸ ಬಹುದೆಂದು ಈ ಗ್ರಂಥಗಳಲ್ಲಿ ಹೇಳಲಾಗಿದೆ. ಹನ್ನೆರಡನೆಯ ಶತ ಮಾನದ ಪೂರ್ವದ ವೀರಶೈವ ಧರ್ಮದ ರೂಪರೇಷೆಗಳನ್ನೇಳೆಯು ವುದು. ಈಗ ದೊರೆತ ಸಾಧನ ಸಾಮಗ್ರಿಯಿಂದ ಅಸಾಧ್ಯವಾದರೂ ಅದರ ಅಸ್ತಿತ್ವದ ಬಗೆಗೆ ಆವ ಸಂಶಯವನ್ನೂ ಎತ್ತುವಂತಿಲ್ಲ. ಅಗ್ನಿ ಪೂಜೆ, ಪಂಚಸೂತಕ, ಜಾತಿಭೇದ ಇವೆಲ್ಲವುಗಳ ಸುಳವು ವೀರಶೈವ ಧರ್ಮದಲ್ಲಿ ಇಲ್ಲವೆಂಬುದೇ ಆ ಧರ್ಮದ ಅತ್ಯಂತ ಪ್ರಾಚೀನತೆಯನ್ನು

---

(೧೨) ಪ್ರಭುದೇವರ ರಗಳೆ ಪುಟ ೩– 'ಅಥವರೂಪಂಗೆಸೆವ ಜಾತಕರ್ಮಂ ಮಾಡೆ'

(13) A critical examination of the theology and Metaphysies of the sect suggests that if (Veerashaiva religion) is very ancient. —Hand Book of Veerashaivism by Dr. S. C. Nandimath. P. 3

ಸೂಚಿಸುತ್ತದೆ. [೧೪] ಈ ಪ್ರಾಚೀನ ವೀರಶೈವ ಧರ್ಮವು ೧೧-೧೨ ನೆಯ ಶತಮಾನದಲ್ಲಿ ವರ್ಣಾಶ್ರಮ ಧರ್ಮದ ಪ್ರಭಾವಕ್ಕೆ ಪಕ್ಕಾಗಿ ತನ್ನ ವೈಶಿಷ್ಟ್ಯವನ್ನೇ ಮರೆತು ಬಿಡುವುದರಲ್ಲಿತ್ತು. [೧೫] ಆ ಕಾಲದಲ್ಲಿ ಜಾತ ಕರ್ಮ ಮಾಡುವುದು, ಹೋಮ ನಡೆಸುವುದು, ಅಗ್ನಿಪೂಜೆ, ಲಿಂಗ ಪ್ರತಿಷ್ಠೆ ಮಾಡುವುದು, ದೇವಾಲಯಗಳನ್ನು ಕಟ್ಟಿಸುವುದು ಇವು ವೀರ ಶೈವ ಧರ್ಮದಲ್ಲಿ ಸಾವಧಾನವಾಗಿ ನುಸುಳುತ್ತಿದ್ದುವು. ಹೋಮ ಮಾಡುವುದು ಸ್ಥಾವರಲಿಂಗಪೂಜೆ ಮಾಡುವುದು ಇವೇ ಮೊದಲಾದ ಹಲವಾರು ಕ್ರಿಯೆಗಳು ವೀರಶೈವರಲ್ಲಿ ಇಂದಿಗೂ ಕಂಡುಬರುತ್ತವೆ. ೧೧-೧೨ ನೆಯ ಶತಮಾನದ ವೀರಶೈವ ಧರ್ಮವು ಇಂತಹ ಅವಸ್ಥೆಯ ಲ್ಲಿದ್ದುದರಿಂದ ಆ ಕಾಲದಲ್ಲಿ ಬಾಳಿದವರ ಜೀವನಕ್ರಮದಲ್ಲಿ ವೀರಶೈವ ರಿಗೆ ಸಲ್ಲದ ಜಾತಕರ್ಮ, ನಿತ್ಯಹೋಮ, ಅಗ್ನಿಪೂಜೆ, ಸ್ಥಾವರಲಿಂಗ ಪ್ರತಿಷ್ಠೆ, ಪೂಜಾದಿಗಳು ಕಂಡುಬಂದರೆ ಅದಕ್ಕೆ ನಾವು ಆಶ್ಚರ್ಯ ಪಡುವ ಕಾರಣವಿಲ್ಲ. ಅವರ ವೀರಶೈವತ್ವದ ಬಗೆಗೆ ಸಂಶಯಪಡುವ ಕಾರಣವೂ ಇಲ್ಲ. ಸಿದ್ಧರಾಮನ ಸ್ಥಿತಿ ಇಂತಿರುವುದರಿಂದ ಮಾನ್ಯ ರಾದ ಡಿ. ಎಲ್. ನರಸಿಂಹಾಚಾರ್ಯರು ಹೇಳುವ ಜಾತಕರ್ಮ, ಹೋಮ, ಸ್ಥಾವರಲಿಂಗಪೂಜೆ ಮೊದಲಾದವು ಸಿದ್ಧರಾಮನು ಶೈವ ನೆಂಬುದಕ್ಕೆ ಪ್ರಬಲವಾದ ಪ್ರಮಾಣಗಳಾಗಿ ನಿಲ್ಲವು.

'ಸಿದ್ಧರಾಮನು ವೀರಶೈವನೆಂದು ರಾಘವಾಂಕನೇ ಈ ಕಾವ್ಯದಲ್ಲಿ ಕಂಠೋಕ್ತವಾಗಿ ಹೇಳಿದ್ದರೆ ಈ ಸಮಸ್ಯೆಗೆ ಕಾರಣವೇ ಇರುತ್ತಿರಲಿಲ್ಲ [೧೬] ಎಂಬ ಮಾತು ನಿಜ. ಕವಿಯು ಕಂಠೋಕ್ತವಾಗಿ ಸಾರದಿದ್ದರೂ ಧ್ವನಿ

---

(೧೪) Hand book of Veerashaivism P. 5 & Vaishnavism and Shaivism and minor religious systems. P. 199.

(೧೫) Perhaps in the 11th, 12th cenhiries some good rules of religion and social duties being overshadowed by the rules of Varnashram Dharma were falling in to desuetude the old form of Veerashaivism.

—Hand book Veerashaivism.

P. 5

(೧೬) ಸಿ. ಪು. ಪುಟ /i ನೋಡು

ಸಿದ್ಧರಾಮನು ಸ್ವತಃ ಜಂಗಮನಾಗಿ ಜಂಗಮರ ಮಧ್ಯದಲ್ಲಿಯೇ ಇದ್ದ ನೆಂಬುದಕ್ಕೆ ಅನೇಕ ಆಧಾರಗಳಿವೆ. 'ನವಣೆಯ ಕೆಯ್ಯ ಬಳಿಯೊಳಾ ನಂದದಿಂದಿರ್ಪ ಸಿದ್ಧೇಂದ್ರನಂ ಮೆರೆಯಲು ಆಗಜಾರಮಣನು ತನ್ನ ವೇಷವನು ಜಂಗಮ ರೂಪಿನೊಳಡಗಿ ನಡೆತಂದನಂತೆ [೨೪] 'ಮದುವೆ ಬೇಕಾದವರು ಕನ್ನಿಕೆಯ ಗೋತ್ರಜರು ಸಹಿತಾಗಿಬಹುದು ಎಂದು ಸಾರಿಸಲು........ಅಂಗ, ವಂಗ, ಕಳಿಂಗ.........' ಮೊದಲಾದ ದೇಶಗಳಿಂದ 'ಜಂಗಮಂ' ಬಂದುದು ಎಂದು ಕವಿಯ ಹೇಳಿಕೆ. [೨೫] ಹೀಗೆ 'ಸಿದ್ಧರಾಮ ಚಾರಿತ್ರ'ದಲ್ಲಿ ಮೇಲಿಂದ ಮೇಲೆ ಬರುತ್ತಿರುವ 'ಜಂಗಮ' ಶಬ್ದವು ಕೇವಲ ಕವಿಯ ವೀರಶೈವತ್ವವನ್ನಷ್ಟೇ ಸೂಚಿಸದೆ ಜಂಗಮರ ಗುಂಪು ಆ ಕಾಲದಲ್ಲಿ ಎಲ್ಲೆಲ್ಲಿಯೂ ಕಂಡುಬರುತ್ತಿತ್ತೆಂಬು ದನ್ನು ವ್ಯಕ್ತಪಡಿಸುತ್ತದೆ. ವೀರಶೈವರ ಅಷ್ಟಾವರಣಗಳಲ್ಲಿ 'ಜಂಗಮ'ದ ಪ್ರವೇಶವಾಗಲು ಬಹುತರವಾಗಿ ಈ ಗುಂಪು ಕಾರಣವಾಗಿರಬಹುದು.

ದೀಕ್ಷಾವಿಧಾನವು ವೀರಶೈವರನ್ನೊಳಗೊಂಡು ಎಲ್ಲ ಶೈವರಿಗೂ ಬಹು ಮಹತ್ವವಾದುದು. [೨೬] ವೀರಶೈವರನ್ನುಳಿದು ಎಲ್ಲ ಶೈವರೂ ಈ ವಿಧಾನವನ್ನು ಅಗ್ನಿಯ ಸಮ್ಮುಖದಲ್ಲಿ ಮಾಡುವರು. [೨೭] ವೀರ ಶೈವರು ಮಾತ್ರ ಅಗ್ನಿಗೆ ಪ್ರತಿಯಾಗಿ ಪಂಚಕಲಶ ಸ್ಥಾಪನೆ ಮಾಡಿ ದೀಕ್ಷೆ ಪಡೆಯುವರು.

---

(೨೪) ಶಿ. ಪು. ಸಂ ೨. ಪ, ೨೩-೨೪.

(೨೫) ಪು. ಸಂ ೮. ಪು. ೫೭-೫೮.

(೨೬) Dixa is very important Ceremony in all schools of Shivism.

—Hend book of Veerashaivism. P. 66

(೨೭) The most important feature in the ceremonies of Virashaivism is the absence of fire. The five plays an important and essential as part in the rites of 'twiceborn'. It appears that the place of the five is taken by the linga in the ceremonies of Veerashaivas.

—Hand book of Veerashaivism. P. 64

ಸಿದ್ಧರಾಮೇಶನಿಗೆ ಗಿರಿಜಾಧೀಶನು ತಾನೇ ಗುರುವಾಗಿ ನಿಂತು-೨೮

"ಕಂಗೆಸೆವ ನಾಲ್ಕು ಬಾಗಿಲ ಶಿವಾಲಯದ ಕಳ
ಸಂಗಳೇ ಕಳಸವಗಜಾತ ನಂದೀಶ್ವರಂ
ಭೃಂಗಿಯುಂ ವೀರೇಶರೆಸೆವ ಕಳಸಾಚಾರ್ಯರಾಮಲ್ಲನಾಥನೆಡೆಯ
ಲಿಂಗಾಲಯದ ಕಳಸ ಗುರು ಕಳಶವಾಜಿತಾ

ಸಂಗನೇ ಗುರುವಾಗಿ ಭರದೊಳಪ್ರತಿಮ ಸಿದ್ಧಂಗನುಗ್ರಹವಿತ್ತನು.-೨೯ ಇಲ್ಲಿ ಉಳಿದ ಶೈವರ ದೀಕ್ಷಾವಿಧಾನದಲ್ಲಿ ಅಗ್ರಸ್ಥಾನವನ್ನು ಪಡೆದ ಅಗ್ನಿಯ ಸುಳಿವಿಲ್ಲ. ಮೇಲಾಗಿ ಪಂಚಕಳಸಗಳೂ ಕಳಸಾಚಾರ್ಯರೂ ಅಪ್ರತ್ಯಕ್ಷರೀತಿಯಿಂದ ಅಲ್ಲಿ ಕಂಡು ಬಂದುದನ್ನು ಕವಿಯು ಸ್ಪಷ್ಟವಾಗಿ ಉಲ್ಲೇಖಿಸಿರುವನು. ವೀರಶೈವ ದೀಕ್ಷೆಯಲ್ಲಿ ಗುರುವಿನಿಂದ ಲಿಂಗಧಾರಣೆಯಾಗುವುದು ಇಂದಿಗೂ ಪ್ರಚಲಿತವಿರುವಂತೆ ಮಗುವಿಗೆ ಲಿಂಗ ಧಾರಣೆ ಹುಟ್ಟಿದೊಡನೆ ಆಗುವದು. ನಿಜವಾಗಿಯೂ ವೀರಶೈವ ಧರ್ಮದಂತೆ ಇದೊಂದೇ ದೀಕ್ಷೆ ನ್ಯಾಯವಾದುದು. ಆದರೂ ಉಳಿದ ಶೈವ ಪಂಗಡಗಳ ಪ್ರಭಾವದ ಮೂಲಕ ಎರಡನೆಯ ದೀಕ್ಷೆ ರೂಢಿಯಲ್ಲಿ ಬಂದಿದೆ.[೩೦] ಅಂತೂ ಒಂದು ಸಲವಾಗಲಿ ಎರಡು ಸಲವಾಗಲಿ ದೀಕ್ಷೆಯೊಡನೆ ವೀರಶೈವನಿಗೆ ಲಿಂಗಧಾರಣೆ,[೩೧] ಮಂತ್ರೋಪದೇಶ

---

(೨೮) ಸಿ. ಪು. ಸಂ. ೩ ಪ ೧೨

(೨೯) ಸಿ. ಪು. ಸಂ. ೩ ಪ ೧೩

(೩೦) In Veerashaivism, the Dixa is to be performed probably only once in the life of a follower and at the very beginning of his career. Therfore, it is enjoined that it should take place immediately after the birth of all individual.

(೩೧) But probably on account of the infulence of the surrounding systems........... There are at least two Dixshas to bo performed.

—Hand book Veerashaivism. P. 67

ವಾಗಲೇಬೇಕು. ಸಿದ್ಧರಾಮನಿಗೆ ಜನ್ಮದಾರಭ್ಯದಿಂದಲೇ ಉತ್ತಮಾಂಗ ದಲ್ಲಿ ಲಿಂಗ ಮೂಡಲಾಗಿತ್ತು.[೩೨] ಆದುದರಿಂದ ಗುರುವಾಗಿ ನಿಂತ ಗಿರಿಜಾಧೀಶನು ಬೇರೆ ಲಿಂಗವನ್ನು ಕಟ್ಟದೆ 'ಉದಯ ವಪ್ಪಂದು ಕೂಡುತ್ತಮಾಂಗದಲಿ ಮೂಡಿದ ಗೂಢಲಿಂಗವನ್ನು ತೋರಿಸುವನು. ಪಂಚಾಕ್ಷರಿಯ ಹೃದಯಮಂ ತಿಳಿಸಿ ನಿಜಭಕ್ತಿಯಂ ಗುರುಪೂಜೆಯಾಗಿ ಕೈಕೊಳ್ಳುವನು. 'ಕಟ್ಟಿದ ಲಿಂಗವ ಬಿಟ್ಟು ಬೆಟ್ಟದ ಲಿಂಗವನ್ನು ಪೂಜಿಸ ಲಾಗದೆಂಬ ನಿಷ್ಠೆಯನ್ನು ಈ ಉತ್ತಮಾಂಗದ ಲಿಂಗದಲ್ಲಿ ಸಿದ್ಧರಾಮನು ಇಟ್ಟಿಲ್ಲವೆಂಬುದೂ ಆತನು ಸ್ಥಾವರಲಿಂಗವನ್ನು ಪೂಜಿಸುತ್ತಿದ್ದನೆಂಬುದೂ ನಿಜ. ಇಂಥ ನಿಷ್ಠೆ ವೀರಶೈವರಲ್ಲಿ ಹನ್ನೆರಡನೆಯ ಶತಮಾನದನಂತರ ರೂಢವಾಗಿರಬೇಕು. ಸ್ಥಾವರಲಿಂಗದ ಮೇಲಿನ ಮಮತೆಯಿಂದಲೇ ಬಸವಣ್ಣನವರೇ ಮೊದಲಾದ ಶಿವಶರಣರು ತಮ್ಮ ಇಷ್ಟಲಿಂಗವನ್ನು 'ಕೂಡಲಸಂಗಮದೇವ' ಇವೇ ಮೊದಲಾದ ಸ್ಥಾವರಲಿಂಗದ ಹೆಸರಿ ನಿಂದ ಕರೆದುಕೊಂಡು ಆ ಅಂಕಿತಗಳಿಂದಲೇ ತಮ್ಮ ವಚನಗಳನ್ನು ಬರೆ ದಿರುವರು. ಇಂದಿಗೂ ವೀರಶೈವರು ತಮ್ಮ ಮನೆದೇವರ ವಿಷಯ ವನ್ನು ಮಾತಾಡುವದುಂಟು. ಈ ಸ್ಥಾವರಲಿಂಗದ ಮೇಲಿನ ನಿಷ್ಠೆ ಇನ್ನೂ ಮಾಯವಾಗದಿದ್ದುದರಿಂದ ಸಿದ್ಧರಾಮನು ಅದನ್ನು ಪೂಜಿಸಿ ದುದುಂಟು. ಸಿದ್ಧರಾಮನ ಉತ್ತಮಾಂಗದ ಲಿಂಗವು ಸಹಜ ಸಿದ್ಧ ವಾಗಿದ್ದು ಗುರುದತ್ತವಾದ ಇಷ್ಟಲಿಂಗಕ್ಕೆ ಪ್ರತಿಯಾಗಿ ಅದನ್ನು ಹೋಲು ತ್ತಿರುವುದು. ಹಾಗಿರದಿದ್ದರೆ ದೀಕ್ಷೆಯ ಕಾಲದಲ್ಲಿ ಗಿರಿಜಾಧೀಶನು ಆ ಲಿಂಗವನ್ನು ಮುಟ್ಟಿ ತೋರಿಸುವ ಅವಶ್ಯಕತೆ ಏನು ? ಮುಂದೆ ಪ್ರಭುದೇವರು ಸಿದ್ಧರಾಮನನ್ನು ಕಲ್ಯಾಣಕ್ಕೆ ಕರೆದೊಯ್ದು ಚೆನ್ನಬಸ ವಣ್ಣನವರಿಂದ ಇಷ್ಟಲಿಂಗಧಾರಣೆ ಮಾಡಿಸಿದರೆಂಬ[೩೩] ಐತಿಹಾಸಿಕ ಸಂಗತಿಯನ್ನು ರಾಘವಾಂಕನು ಬಿಟ್ಟುದರ ಕಾರಣವಾದರೂ ಇದೇ ಇರಬಹುದು. ಗಿರಿಜಾಧೀಶನೇ ಲಿಂಗದಾನ ಮಾಡಿದ ಮೇಲೆ ಮತ್ತೆ ಚೆನ್ನಬಸವಣ್ಣನವರಿಂದ ಲಿಂಗಧಾರಣೆ ಮಾಡಿಸುವುದು ಅನಾವಶ್ಯಕ

---

(೩೨) 'ಶಿವಲಿಂಗಮಂ ಮುಸುಕಿ ಬೆಳೆದುತ್ತಮಾಂಗವನು.
ಸಿ. ಪು. ಸ. ೨. ಪ ೪.

(೩೩) ಸಿದ್ಧರಾಮನ ವಚನ ಪ್ರಭು ಚೆನ್ನಬಸವಣ್ಣನವರ ವಚನ ಶೂನ್ಯ ಸಂಪಾದನೆ ಪ್ರಭುಲಿಂಗಲೀಲೆ ಮೊದಲಾದ ಗ್ರಂಥಗಳನ್ನು ನೋಡಬೇಕು.

ವೆಂದು ಆತನ ಕಲ್ಪನೆಯಾಗಿರಬಹುದು. ಒಟ್ಟಿನಲ್ಲಿ ರಾಘವಾಂಕನಿಗೆ ಐತಿಹಾಸಿಕ ಸಿದ್ಧರಾಮನ ಚಾರಿತ್ರ ಮಹತ್ವವಲ್ಲ. ಸಿದ್ಧರಾಮನಿಗೆ ಭವ್ಯ ದಿವ್ಯ ವ್ಯಕ್ತಿತ್ವವನ್ನು ಕೊಟ್ಟು ಪುರಾಣ ಪುರುಷನನ್ನಾಗಿ ಮಾಡಿ ವೀರಶೈವ ಪುರಾಣಕ್ಕೊಂದು ಮಾದರಿಯನ್ನಿಡಬೇಕೆಂಬುದು ಆತನ ಹಂಬಲ.[೨೪] ಅಂತೆ ಕ್ರಾಂತಿಕಾರಕ ರಾಘವಾಂಕನು ಇತಿಹಾಸದಲ್ಲಿಯೂ ಕ್ರಾಂತಿಯುನ್ನುಂಟು ಮಾಡಿ ಪುರಾಣವನ್ನು ರಚಿಸಿದನು. ಸಿದ್ಧರಾಮನ ಸುತ್ತು ಅನೇಕ ಪವಾಡಗಳನ್ನು ಹೆಣೆದಿರುವನೆಂಬುದು ಆ ಪುರಾಣವನ್ನೋದಿದವರಿಗೆಲ್ಲ ತಿಳಿದುಬರುವದು. ಸುಮಾರು ಒಂದುನೂರು ವರ್ಷದಷ್ಟು ಸಹ ಹಿಂದಿನವನಲ್ಲದ ಸಿದ್ಧರಾಮನು ಇಂತಹ ಪವಾಡಗಳನ್ನೆಲ್ಲ ಮಾಡಲು ಅರ್ಹನಾಗಿದ್ದನೆಂಬುದನ್ನು ಪಂಡಿತ ರಾಘವಾಂಕನ ಕ್ರಾಂತಿಕಾರಕ ಮನಸ್ಸು ಒಪ್ಪಿರಲಾರದು. ಆದರೂ ಒಂದು ಆದರ್ಶ ವೀರಶೈವ ಪುರಾಣವನ್ನು ಬರೆಯಬೇಕೆಂದು ಅವನ್ನೆಲ್ಲ ಆತನು ಒಪ್ಪಲೇಬೇಕಾಯಿತು. ಇತಿಹಾಸವನ್ನೇ ಒಪ್ಪಿ ಪ್ರಭು ಚೆನ್ನಬಸವಣ್ಣನವರ ಉಪದೇಶದಿಂದಲೇ ಆತನಿಗೆ ಲಿಂಗಧಾರಣೆ ಮಾಡಿಸಿದ್ದರೆ ಅವರ ಮುಂದೆ ಈತನ ವ್ಯಕ್ತಿತ್ವ ಮಿನುಗದೆಂಬ ಭಯವೂ ಆತನಿಗೆ ಬಂದಿರಬಹುದು. ಅಂತೆ ಇತಿಹಾಸದ ಸಿದ್ಧರಾಮನು ಏರಿಳಿತಗಳ ಹೊಯ್ದಾಟಕ್ಕೆ ಸಿಲುಕಿ ಮೊದಮೊದಲು ಸಹಜ ಮಾನವನಾಗಿ ಮುಂದೆ ಪ್ರಭು, ಚೆನ್ನಬಸವಣ್ಣನವರ ಉಪದೇಶಕ್ಕೆ ಪಕ್ಕಾಗಿ ಮೋಕ್ಷದ ಪಥವನ್ನು ಕಂಡರೆ ಪುರಾಣದ ಸಿದ್ಧರಾಮನು ಜಗಕೆ 'ಅರೆಮರುಳಂತೆ' ಕಂಡುಬಂದರೂ ಜನ್ಮದಾರಭ್ಯ ಸಿದ್ಧಪುರುಷನಾಗಿ ಜಗದ ಗುರುವಾಗಿರುವನು.[೨೫] ಲೋಕಸಂಗ್ರಹಕ್ಕಾಗಿ 'ಸಾಕಾರದೊಳ್ ನಿಷ್ಠೆ ಭೂತಂಗಳೊಳಗನು ಕಂಪೆ'ಯನ್ನು ತೋರಿಸುತ್ತಿರುವನು 'ಜಸಮಿಗಲು ದೇವತಿರ್ಯಗ್ಮನುಷ್ಯಾದಿಗಳಿಗಸಮಗುರು' ಸಿದ್ಧರಾಮನಾದರೂ 'ಜನಂ ಮೆಚ್ಚಲೆಂದು'[೨೬] ಆತ

---

(೨೪) ಶ್ರೀಮತ್ ಸಿದ್ಧರಾಮ ಪುರಾಣದೊಳು ನವಮಃ ಸಂಧಿ ಪೂರ್ಣಂ
ಸಿ. ಪು. ಸಂ. ೯ ಪು. ೧೬೪.

(೨೫) ಸಿ. ಪು. ಜಗದ ಗುರುಸಿದ್ಧರಾಮನಾಥಂ ಮನುಜನಲ್ಲ.
ಸಿ. ಪು. ಸಂ. ೧ ಪ. ೭–೨೬–೪೨–೩೭–೩೦
ಸಂ. ೪. ಪ. ೧೫. ಸಂ. ೭. ಪ. ೧–೨೫
ಸಂ. ೨ ಪ. ೧೦–೧೨–೨೦–೨೧–೨೨

ನಿಗೆ ತಾನೇ ಗುರುವಾಗಿ ಗಿರಿಜಾಧೀಶನು ದೀಕ್ಷೆಯನ್ನು ಕೊಟ್ಟರು
ವನು. ಉತ್ತಮಾಂಗದಲ್ಲಿ ಲಿಂಗವಿದ್ದರೂ 'ಲಿಂಗಪ್ರಾಣಿ' [೩೬] ಯಾಗಿ
ದ್ದರೂ ಬಾಹ್ಯ ಪೂಜೆಗೊಂದು ಲಿಂಗದ ಅವಶ್ಯಕತೆಯಿದ್ದಿತು. ಈ ಬಾಹ್ಯ
ಪೂಜೆಯನ್ನು ಆತನು ತನಗಾಗಿ ಮಾಡದಿದ್ದರೂ ತನ್ನಂತೆ ನಡೆಯುವ
ಲೋಕದ ಜನರಿಗೊಂದು ಮಾರ್ಗವನ್ನು ತೋರುವುದಕ್ಕಾಗಿ ಮಾಡಲೇ
ಬೇಕಾಗಿದ್ದಿತು.

'ಯದ್ಯದಾಚರತಿ ಶ್ರೇಷ್ಠಸ್ತತ್ತದೇವೇತರೋ ಜನಃ
ಸಯತ್ ಪ್ರಮಾಣಂ ಕುರುತೆ ಲೋಕಸ್ತದನುವರ್ತತೆ

ಎಂಬ ಗೀತೆಯ ಮಾತು ಎಲ್ಲ ಮಹಾನುಭಾವರಿಗೂ ಅನ್ವಯಿಸುತ್ತದೆ.
ಅದಕ್ಕಾಗಿ 'ಬಳಸಿಪರುಷದ ಕರಂಡಿಗೆಯೊಳಣಿಮಾದಿ ಗುಣಮಿಳಿತ
ಸೆಜ್ಜೆಯೊಳಮಲ ಲಿಂಗವಿಳಿದಾಸಿದ್ಧ ಕುಲತಿಲಕನಿರ್ವ ಭೂಮಿಯೋಳು
ವೈದೋರಿತು. [೩೭] ಆ ಲಿಂಗವನ್ನು ಮನೆಯೊಳಾರಾಧಿಸುತ್ತಿರಲು
ಮುಂದೆ ಮನೆಮಾರನ್ನು ಬಿಟ್ಟು ಹೊರಡುವ ಸಮಯಬಂದಾಗ
ಆ 'ಲಿಂಗಮಂ ಧರಿಸಿ ಪಿಡಿದು [೩೮] ಹೋದನಂತೆ. ಹೀಗೆ ಹಲವು ಕಡೆಗೆ
ಲಿಂಗ ಮತ್ತು ಅದನ್ನಿಡುವ ಸೆಜ್ಜೆಯ ಉಲ್ಲೇಖ ಬಂದಿವೆ. ಇಷ್ಟಲಿಂಗ
ವನ್ನೇ ಇವು ಸೂಚಿಸದಿದ್ದರೂ, ಇಷ್ಟಲಿಂಗವು ಪೂರ್ತಿಯಾಗಿ ರೂಢಿ
ಯಲ್ಲಿ ಬಾರದಮುನ್ನ ಅಂತಹದೊಂದು ಲಿಂಗವನ್ನು ವೀರಶೈವರು
ತಾವು ಹೋದಲ್ಲೆಲ್ಲ ಒಯ್ಯುತ್ತಿರಬಹುದೆಂಬುದನ್ನು ಸೂಚಿಸುವಂತಿದೆ.
ಈ ರೂಢಿಯೇ ಮುಂದೆ ಅನುಭವಮಂಟಪದ ಶರಣರ ಆಧ್ಯಾತ್ಮಿಕ
ಕಾರ್ಯಾಲಯದಲ್ಲಿ ಇಷ್ಟಲಿಂಗವಾಗಿರಬಹುದು. ಒಟ್ಟಿನಲ್ಲಿ ಸಿದ್ಧರಾಮ
ನಿಗೆ ಇಷ್ಟಲಿಂಗಧಾರಣೆಯು ಇಂದಿನ ವೀರಶೈವ ಸಂಪ್ರದಾಯದಂತೆ
ಆಗಿದೆಯೆಂಬುದಕ್ಕೆ ಸಿದ್ಧರಾಮ ಪುರಾಣದಲ್ಲಿ ಖಚಿತವಾದ ಆಧಾರ
ದೊರೆಯದಿದ್ದರೂ ವೀರಶೈವರು ಸ್ಥಾವರಲಿಂಗ ಪೂಜೆಯನ್ನು ಬಿಟ್ಟು
ಇಷ್ಟಲಿಂಗಾರಾಧನೆಯನ್ನು ಸ್ವೀಕರಿಸುವ ಸಂಧಿಕಾಲದಲ್ಲಿ ಹೇಗಿದ್ದರೆಂಬು
ದನ್ನು ರಾಘವಾಂಕನ ಸಿದ್ಧರಾಮನಿಂದ ಕಂಡುಕೊಳ್ಳಬಹುದಾಗಿದೆ.

---

(೩೬) ಸಿ. ಪು. ಸಂ. ೩. ಪ. ೧೨
(೩೭) ,, ಸಂ. ೨ ಪ. ೧೦
(೩೮) ,, ಸಂ. ೩—೩೩
(೩೯) ,, ಸ ೩ ಪ ೩೬

ವೀರಶೈವರು ಇಷ್ಟಲಿಂಗದಲ್ಲಿ ತೋರುವ ನಿಷ್ಠೆಯನ್ನೇ ಸಿದ್ಧರಾಮನು 'ಏಕನದ್ವಿತಿಯನೆನಿಸುವ ಲಿಂಗ'[೪೦]ವನ್ನು ನಂಬುವುದರಲ್ಲಿ ತೋರಿಸು ವನು. ಆ ಲಿಂಗವನ್ನು ನಂಬದ ಕಾರಣ 'ನಾಗಾರ್ಜುನ' ವ್ಯಾಳಿ, ಕೋರಾಂಟಕರು ಕೆಟ್ಟರೆಂದು [೪೧] ಆತನ ನಂಬುಗೆ. ಭಾವಪ್ರಾಣಗಳು ಲಿಂಗಮಯವಾದಂತೆ ದೇಹವೂ ಲಿಂಗಮಯವಾಗಿದೆಯೆಂಬುದನ್ನು ಸೂಚಿಸುವುದು ಇಷ್ಟಲಿಂಗದ ಕುರುಹು. ಇಷ್ಟಲಿಂಗಾರಾಧನೆಯ ಕೊನೆಯ ಗುರಿ ಸಿದ್ಧ ಇಲ್ಲವೆ ಐಕ್ಯಾವಸ್ಥೆಯನ್ನು ಪಡೆಯುವುದು. ರಾಘವಾಂಕನ ಸಿದ್ಧರಾಮನು ಜನ್ಮದಾರಭ್ಯ ಇಲ್ಲವೆ ಮಲ್ಲಿಕಾರ್ಜುನನ ದರ್ಶನವಾದಂದಿನಿಂದಲೇ ಸಿದ್ಧಾವಸ್ಥೆಯಲ್ಲಿರುವನು. [೪೨] ದೇಹವು ಲಿಂಗ ಮಯವಾಗಿದೆಯೆಂಬುದು ಆತನ ಉತ್ತಮಾಂಗದಲ್ಲಿದ್ದ ಲಿಂಗದಿಂದ ಸೂಚಿತವಾಗುವಂತಿದೆ. ಅಂತೆ ಈತನಿಗೆ ಇಷ್ಟಲಿಂಗದ ಅವಶ್ಯಕತೆಯಿ ಲ್ಲವೆಂದೂ ಉತ್ತಮಾಂಗದ ಲಿಂಗವನ್ನೇ ಗಿರಿಜಾಧೀಶನು ಗುರುವಾಗಿ ನಿಂತು ತನ್ನ ಹಸ್ತದಿಂದ ಮುಟ್ಟಿ ಆಶೀರ್ವದಿಸಿರುವನೆಂದೂ ಪ್ರಭುವು ಆತನಿಗೆ ಬೇರೆ ಲಿಂಗ ಕಟ್ಟಲಿಲ್ಲ. ವೀರಶೈವರಿಗೆ ಅವಶ್ಯವಾದ ಭಕ್ತಿ, ಜ್ಞಾನ, ವೈರಾಗ್ಯಗಳೆಲ್ಲವನ್ನೂ ಸಿದ್ಧನು ಅಳವಡಿಸಿಕೊಂಡಿರುವನು.[೪೩] ಆತನು 'ಈ ಯುಗದ ಜೀವರ ಪುಣ್ಯದೊದವಂಗೆ ಕೈಕೊಂಡ ಮೂರ್ತಿ'. [೪೪] ದೀಕ್ಷೆಯ ಕಾಲದಲ್ಲಿ ಗಿರಿಜಾಧೀಶನು ಆತನಿಗೆ 'ಭೂತ ದಯಾ ವಿಚಾರಮಂ ನೇಮಮಂ' ಕೊಟ್ಟಿರುವನು. ಮಾನವರ ಉದ್ಧಾ ರಕ್ಕಾಗಿಯೇ ಮಾನವರ ನಡುವಿದ್ದು ಅವರು ಸಹಜವಾಗಿ ಸುಲಭ ವಾಗಿ ಅನುಸರಿಸಬಹುದಾದ ಮಾರ್ಗವನ್ನು ಕಂಡುಹಿಡಿದು 'ಸಾಕಾರ ದೊಳ್ ನಿಷ್ಠೆ ಭೂತಂಗಳೊಳಗನು ಕಂಪೆ' ಇವುಗಳನ್ನು ತನ್ನ ಜೀವ ನದ ಗುರಿಯನ್ನಾಗಿಟ್ಟುಕೊಂಡನು. ಕೆರೆ ಬಾವಿ ಗುಡಿಗುಂಡಾರಗಳನ್ನು ಕಟ್ಟಿಸಿದನು. ಶಾಪಗ್ರಸ್ತರಾದ ಅನೇಕ ಜೀವಿಗಳನ್ನು ಉದ್ಧರಿಸಿದನು. ಆದುದರಿಂದ ಅಲ್ಲಮಪ್ರಭುವು 'ನಿನ್ನ ಈ ಸೃಷ್ಟಿಯೇ ಬೇರೆ ಅದಕೆ

---

(೪೦) ಸಿ. ಪು. ಸ. ೯ ಪ. ೪೩.

(೪೧) ,, ,,

(೪೨) ಅಡಿಟಿಪ್ಪಣಿ ೩೫ ನ್ನು ನೋಡಬೇಕು.

(೪೩) ಸಿ. ಪು. ಸಂ. ೨ ಪ ೭೨

(೪೪) ಸಿ. ಪು. ಸಂ. ೯ ಪ ೪೫

ಮೆಚ್ಚಿದೆನು' [೪೫] ಎಂದು ನುಡಿಯುವನು. ಪ್ರಭುವಿನ ದೃಷ್ಟಿಯಲ್ಲಿ ಸಿದ್ಧರಾಮನು ವೀರಶೈವನಾಗಿರದೆ ಭವಿಯಾಗಿದ್ದರೆ, ಕೇವಲ ಶೈವನಾಗಿದ್ದರೆ ಆತನನ್ನು ಕಡುತರವಾಗಿ ಟೀಕಿಸಿ, ಬಸವಣ್ಣ ಗೋರಕ್ಷಾದಿಗಳಿಗೆ ಉಪದೇಶಿಸಿದಂತೆ ಆತನಿಗೂ ಉಪದೇಶಮಾಡಿ ಆತನನ್ನೂ ತನ್ನ ಮಾರ್ಗದತ್ತ ಒಯ್ಯುತ್ತಿದ್ದನು. ಕಾರಣ ಪ್ರಭು ಮೆಚ್ಚಿದ ಸಿದ್ಧರಾಮನು ಶೈವನಾಗಿರದೆ ವೀರಶೈವನಾಗಿರಬೇಕು.

ಕ್ಷೇತ್ರ ಪೂಜೆ ಮಾಡುವಾಗ ಮದುವೆ ಬೇಕಾದವರು ಕನ್ನಿಕೆಯ ಗೋತ್ರಜರು ಸಹಿತ ಬರಬೇಕೆಂದು ಸಾರಲು ಅನೇಕ ಜನ ಬರುವರು. ಅವರ ಮಂಗಳ ವಿವಾಹವನ್ನು 'ಒಕ್ಕುದ ನಿಕ್ಕಿ' ಜಂಗಮವ ತಣಿಸಿ, 'ಲಿಂಗದ ಸಮಕ್ಷದೊಳು' 'ಗುರುವಿಂ' ಮಾಡಿಸುವನು. ಅಗ್ನಿಯ ಸಮ್ಮುಖದಲ್ಲಿ ವಿವಾಹವನ್ನು ಜರುಗಿಸುವುದು ವೈದಿಕ ಬ್ರಾಹ್ಮಣರಲ್ಲಿಯೂ ಶೈವಸಿದ್ಧಾಂತವನ್ನು ಅನುಸರಿಸುವವರಲ್ಲಿಯೂ ಇಂದಿಗೂ ರೂಢಿಯಾಗಿದೆ. [೪೬] ಸಿದ್ಧರಾಮನು ವೀರಶೈವನಾಗಿರದೆ ಶೈವನಾಗಿದ್ದರೆ ಅಗ್ನಿಯನ್ನು ಬಿಟ್ಟು 'ಲಿಂಗದ ಸಮಕ್ಷದಲ್ಲಿ' ಮಂಗಳ ವಿವಾಹವನ್ನು ಮಾಡಿಸುತ್ತಿದ್ದನೆ.!

ಒಮ್ಮೆ ಚೈತ್ರಮಾಸದಲ್ಲಿ ಸುತ್ತಲಿನ ಪ್ರಕೃತಿ ಎಂದಿನಂತಲ್ಲದೆ ಕಣ್ಗೆ ಮಂಗಳಂ-ಚಿತ್ತಂ ಪರಮ ಮಂಗಳವಾಗಿ ಏಕಾಂತತರ ಮನೋಹರವಾಗಿ ಮೆರೆಯುತಿರೆ ಕಂಡು ಇದರೊಳಾನೆನ್ನ ಪುರುಷನೊಳು ಕೂಡಿ ಸುಖ ಪಡೆವೆನೆಂದು ಒಸೆದು ಹೃತ್ಕಮಲದಲರ್ವಸೆಯ ಮೇಲೆ ಉರುತರ ಜ್ಞಾನ ಪ್ರಭಾದೀಪ್ತಿವೆಳಗಿನೊಳು ನೆರೆವ ತವಕದ ಕಳಾ ಸುಖಮುಖದ ಪರವಶದಲ್ಲಿ [೪೭] ಸಿದ್ಧನಿರುವನು. ಆಗ ಅಂಗಭವನು ಮೂಜಗದ ಸತಿಯರ ಶಿರೋರತ್ನವೆಂಬ ಪೆಣ್ಣನ್ನು ತಂದು ಅಪ್ರತಿಮ ಶಿವಸಿದ್ಧಪತಿಯ ಮುಂದಿರಿಸಿ 'ಈ ಶಾಂತೆಗೇ ಶಾಂತಮಂ ಕೊಡು' ಎಂದು ಬೇಡಿಕೊಳ್ಳುವನು. ಸಿದ್ಧರಾಮನು 'ಸತಿಗೆ ಸತಿ ಸೋಲ್ತು

(೪೫) ಸಿ. ಪು. ಸ. ೯ ಪ. ೪೫

(೪೬) —Hand book of Veerashaivism. P. 77
೨೭ನೆಯ ಅಡಿಟಿಪ್ಪಣಿಯನ್ನೂ ನೋಡಬೇಕು.

(೪೭) ಸಿ. ಪು. ಸಂ. ೪. ಪ ೬೯.

ಕೂಡಿದ ಕಾಲವುಂಟೆ ವಸುಮತಿಯೊಳು' ೪೮ ಎಂದು ಉತ್ತರಿಸುವನು. 'ಆ ನೆನ್ನ ಪುರುಷನೊಳು ಕೂಡಿ ಸುಖ ಪಡೆವೆನು.' ಸತಿಗೆ ಸತಿ ಸೋಲ್ತು ಕೂಡಿದ ಕಾಲವುಂಟೆ' ಎಂಬ ಮಾತುಗಳಲ್ಲಿ 'ಶರಣಸತಿ, ಲಿಂಗಪತಿ' ಎಂಬ ಭಾವನೆಯು ವ್ಯಕ್ತವಾಗುತ್ತದೆ. 'ಶರಣಸತಿ ಲಿಂಗ ಪತಿ' ಎಂಬ ಭಾವನೆಯು ವೀರಶೈವರಿಗೇ ವಿಶಿಷ್ಟವಾದುದು. ಸಿದ್ಧ ರಾಮನು ವೀರಶೈವನಾಗಿರದೆ ಶೈವನಾಗಿದ್ದರೆ ಹೀಗೆ ನುಡಿಯುತ್ತಿದ್ದನೆ?

ಮೊರಬದ ವಿಪ್ರ ಸಂಕುಳವು ಸಿದ್ಧರಾಮೇಶನನ್ನು ಶೂದ್ರನೆಂದು ಹಳಿಯಲು ಅವರು ಕಾಗೆಗಳ ಬಾಧೆಗೊಳಗಾಗುವರು. ಅದರ ನಿವಾ ರಣೆಗಾಗಿ ಅವರು ಸಿದ್ಧರಾಮನಲ್ಲಿಗೆ ಬರಲು "ನಾವೇನು ಶೂದ್ರರು." ಎಂದು ಸಿದ್ಧರಾಮೇಶನು ನುಡಿಯುವನು. ಈ ವಿಪ್ರರ ಅಭಿಪ್ರಾಯ ದಂತೆ ಆತನು ಶೂದ್ರನೇ ಆಗಿದ್ದರೆ ಲಿಂಗಪೂಜೆ, ವಿವಾಹ ಮೊದಲಾದ ವಿಧಿಗಳನ್ನು ಸಿದ್ಧರಾಮನು ತಾನೇ ಮಾಡುತ್ತಿರಲಿಲ್ಲ.

ಸಿದ್ಧರಾಮೇಶನು ಸ್ವತಃ ತಾನೇ ತನ್ನ ಅಣ್ಣ ಬೊಮ್ಮಯ್ಯಂಗೆ ಕರುಣದಿಂ ದೀಕ್ಷೆ ೪೯ ಕೊಡುವನು. ಲಿಂಗ ಪ್ರತಿಷ್ಠೆ ಮಾಡುವಾಗ 'ಪುಣ್ಯಾಕಾರ ಲಿಂಗಕ್ಕೆ ನಾನಾ ವಿಶೇಷ ಪೂಜೆಯನ್ನು' ತಾನೆ ಒದಗಿ ಸುವನು. ಮದುವೆಯ ಸಂದರ್ಭದಲ್ಲಿ ವಧೂವರರಿಗೆ ತಾನೇ ಗುರು ವಾಗಿ ನಿಂತು ಪ್ರಣವವನ್ನು ಉಚ್ಚರಿಸಿ ಲಗ್ನ ಮಾಡುವನು. ಇತರ ಶೈವ ಪಂಗಡಗಳಲ್ಲಿ ಮದುವೆ, ಹೋಮದೀಕ್ಷೆ, ಲಿಂಗ ಈ ಕಾರ್ಯ ಗಳನ್ನು ಋತ್ವಿಜರು ನಡಿಸುವರು, ವೀರಶೈವರಲ್ಲಿ ಮಾತ್ರ ಈ ಅಧಿ ಕಾರ ಗುರುಸ್ಥಲದ ಜಂಗಮಂಗಿದೆ. ಸಿದ್ಧರಾಮನು ಈ ಕಾರ್ಯಗ ಳನ್ನು ತಾನೇ ಮಾಡಿರುವುದರಿಂದ ಆತನು ವೀರಶೈವ ಜಂಗಮನಾ ಗಿರಬೇಕು. ಅಂತೆ ಗುರುವಾಗಿ ನಿಂತು ವಿವಾಹ ಜರುಗಿಸಿರುವನು. ಮೇಘಚೂಡನು ಶಾಪವಿಮುಕ್ತನಾಗಿ ಕೈಮುಗಿದು 'ಸಕಲ ದೀಕ್ಷಾವ ತಾರಾ, ಗುರವೆ.' ೫೦ ಎಂದು ಮುಂತಾಗಿ ಸಿದ್ಧರಾಮನನ್ನು ಬಣ್ಣಿ ಸುವನು.

---

(೪೮) ಸಿ ಪು. ಸಂ ೪ ಪ ೭೫

(೪೯) ,, ಸ ೩ ಪ ೩೭

(೫೦) ,, ಸ ೪ ಪ ೩೦

ಯೋಗಕ್ಕೂ [೫೧] ವೀರಶೈವ ಧರ್ಮಕ್ಕೂ ನಿಕಟವಾದ ಸಂಬಂಧವಿದೆ. ಇಷ್ಟಲಿಂಗಾರಾಧನೆಯಲ್ಲಿ ಚಿತ್ತವೃತ್ತಿ ನಿರೋಧದ ತತ್ತ್ವ ಅಡಕವಾಗಿದೆ. ಪಾತಂಜಲಿ ಯೋಗವನ್ನು ಹೀಗೆ ಇಷ್ಟಲಿಂಗಾರಾಧನೆಯಲ್ಲಿ ಅಳವಡಿಸಿಕೊಂಡು ವೀರಶೈವರು ಈ ಯೋಗವನ್ನು ಶಿವಯೋಗವೆಂದು ಕರೆದರು, ಅದನ್ನು ಸಾಧಿಸಿದವರಿಗೆ ಶಿವಯೋಗಿಗಳೆಂದರು. ಸಿದ್ಧರಾಮನು ಶಿವಯೋಗಿಗಳಲ್ಲಿ ಶ್ರೇಷ್ಠನೆಂಬುದಕ್ಕೆ ಅನೇಕ ಆಧಾರಗಳು ದೊರೆಯುತ್ತವೆ.

'ಯೋಗಿಯಾದರೆ ನನ್ನಂತಾಗಬೇಕು.' 'ಯೋಗದ ಸಿದ್ಧಿ ಸಿದ್ಧರಾಮಂಗಾಯಿತ್ತು' [೫೨] ಎಂದು ಆತನ ವಚನ ಸಾರುತ್ತವೆ. ಆತನು ಯೋಗಾರೂಢನಾದ ವರ್ಣನೆ ಸಿದ್ಧರಾಮ ಪುರಾಣದಲ್ಲಿ ಬರುತ್ತದೆ. [೫೩] ಸಿದ್ಧರಾಮನು ಸಾಧಿಸುತ್ತಿದ್ದ ಈ ಯೋಗ ಶಿವಯೋಗವೆಂದು ಆತನ ಮಾತುಗಳಿಂದಲೇ ಸ್ಪಷ್ಟವಾಗುತ್ತದೆ. ಆತನು ಕೆರೆ ಬಾವಿಗಳನ್ನು ಆಯಾಸದಿಂದ ಅಗಿಸುವಾಗ ಗಂಗೆ, ತುಂಗಭದ್ರೆ ಮಲಪ್ರಹಾರಿಣಿಯರೆಲ್ಲ ಬಂದು 'ಈ ಸರಿಯು ನೀ ಬಿಸಿಲೊಳಯ್ಯ ನೀನೊದೆದೆಗೆದು । ಸೂಸು ವಾಯಾಸವುಂಬುದು ಸಾಕು ನಾವೀ ಪ್ರ । ದೇಶದೊಳು ಕೆಱೆಯಾಗಿ ತೊಱೆಯಾಗಿ ಡೊಣೆಯಾಗಿ ವಾಪಿಕೂಪಂಗಳಾಗಿ ॥ ಈಶನಭಿಷವದಗ್ರ ಜಲಕೆ ಸಂದಿಪ್ಪೆಂದು' ಆಡಲು.

'ಶಿವಯೋಗಿಯು ಶರೀರಂ ವೃಥಾ ಸವೆಯಲಾಗದನು ಗೊಂಬನಿತು ಕಾಯಕಂ ನಡೆಯುರಬೇಕು' ಎಂದನು. ತಾನು ಶಿವಯೋಗವನ್ನು ಸಾಧಿಸಿ ವೀರಶೈವನಾಗಿರದಿದ್ದರೆ ಸಿದ್ಧರಾಮನು ತನ್ನನ್ನು ತಾನು ಶಿವಯೋಗಿಯೆಂದು ಕರೆದುಕೊಳ್ಳುತ್ತಿರಲಿಲ್ಲ. ಅಲ್ಲದೆ ಆ ಮಾತಿನಲ್ಲಿ ಬರುವ 'ಕಾಯಕ' ಎಂಬ ವೀರಶೈವ ಪರಿಭಾಷೆ ಸಿದ್ಧರಾಮನು ವೀರಶೈವನೆಂಬುದಕ್ಕೆ ಮತ್ತಿಷ್ಟು ಬಲಕೊಡುತ್ತಿದೆ. 'ಕಾಯಕವೇ ಕೈಲಾಸ'ವೆಂದರಿತ ವೀರಶೈವನ ಬಾಯಿಂದಲೇ ಈ ನುಡಿಗಳು ಬಂದಿರಬೇಕು. ಕಾಯಕ ಶಬ್ದವು ಕವಿಯ ವೀರಶೈವತ್ವವನ್ನು ಸೂಚಿಸುತ್ತಿದೆ ಎಂಬ

---

(೫೧) ಯೋಗಶ್ಚಿತ್ತವೃತ್ತಿ ನಿರೋಧಃ
—ಪಾತಂಜಲಯೋಗ.

(೫೨) ಸಿದ್ಧರಾಮೇಶ್ವರನ ವಚನಗಳು ಪು. ೧೪—೧೫

(೫೩) ಸಿ. ಪು. ಸಂ ೪ ಪ ೨೭

ಸಂಪಾದಕರ ಅಭಿಪ್ರಾಯಕ್ಕೆ ಇಲ್ಲಿ ಬಲದೊರೆಯುವಂತಿಲ್ಲ. 'ಶಿವಯೋಗಿ' 'ಕಾಯಕ' ಈ ಎರಡೂ ವೀರಶೈವ ಪರಿಭಾಷೆಗಳು ಪೂರಕ. ಪರಿಪೂರಕಗಳಾಗಿ ಸಿದ್ಧರಾಮನು ವೀರಶೈವನೆಂಬುದನ್ನು ಸಾರುತ್ತವೆ. ರಾಘವಾಂಕನು ಜೋಗಿವಡೆಯೊಡೆಯನ ಮುಖದಿಂದ 'ಶರಣಸಂಕುಳ ಸುರದ್ರುಮ ಸಿದ್ಧರಾಮಯ್ಯ'[೫೫] ಎಂದು ಬಣ್ಣನೆ ಮಾಡಿಸಿದುದರ ಮಥಿತಾರ್ಥವಾದರೂ ಇದೇ ಎಂದು ಹೇಳಬಹುದು. ಶರಣ ಎಂಬುದೂ ವೀರಶೈವರ ಪರಿಭಾಷೆಯ ಅರ್ಥದಲ್ಲಿಯೇ ಉಪಯೋಗವಾಗಿದೆ. 'ಸಿದ್ಧರ ಬಲ್ಲಹಂ ನವಸುಧಾ ಪಾದೋದಕವನು ಗುಡ್ಡರ್ಗೆಱೆ'[೫೬] ಯುತ್ತಾನೆ. ಗುಡ್ಡರಿಗೆ ಅದು 'ಮರಣಮಂ ತೊಡೆವ ಪ್ರಸಾದಾಮೃತ'ವಾಗುತ್ತದೆ. ಪಾದೋದಕ ಪ್ರಸಾದಗಳೆರಡೂ ವೀರಶೈವರ ಅಷ್ಟಾವರಣಗಳಲ್ಲಿ ಬಹು ಮಹತ್ವವಾದವು. ಸಿದ್ಧರಾಮೇಶನು ವೀರಶೈವನಾಗಿರದಿದ್ದರೆ ಪಾದೋದಕವನ್ನು ಭಕ್ತರಿಗೆ ಕೊಡುತ್ತಿದ್ದನೆ? ಪಾದೋದಕದಿಂದ ತನುಮನಗಳೆರಡೂ ಪವಿತ್ರವಾಗುವವೆಂದು ವೀರಶೈವರ ನಂಬುಗೆ. ವೀರಶೈವರಲ್ಲದವರು ಪ್ರಸಾದವನ್ನು ಭುಕ್ತಶೇಷ, ಎಂಜಲ ಎಂದು ಕರೆಯುವರು.[೫೭] ವೀರಶೈವರ ನಂಬುಗೆ ಹಾಗಿಲ್ಲ. ಜಾತಿ ಮತ ಪಂಥಗಳ ವೈಷಮ್ಯವನ್ನು ಹೊಡೆದೋಡಿಸುವುದಕ್ಕಾಗಿ ಸಮತೆಯ ಬೀಜವನ್ನು ಬಿತ್ತುವದಕ್ಕಾಗಿ ವೀರಶೈವ ಧರ್ಮದಲ್ಲಿ ಪ್ರಸಾದವನ್ನು ಸೇರಿಸಿರಬಹುದು.[೫೮] ಹೀಗೆ ಪಾದೋದಕ ಪ್ರಸಾದಗಳಿಗೆ ವೀರಶೈವ ಮತದಲ್ಲಿ ಅತಿ ಮಹತ್ವದ ಸ್ಥಾನವಿರುವುದರಿಂದ ಅವುಗಳನ್ನು ಅಷ್ಟಾ

---

(೫೪) ಸಿ. ಪು. ಸಂ. ೪ ಪ. ೨೩

(೫೫) ,, ,, ೬ ಪ. ೩೩

(೫೬) ,, ,, ೬ ಪ. ೫೫

(೫೭) E. P. Rice History of Kannada literature P. 51

(೫೮) Their (Padodak & Prasad) social aim was to remove all kinds of distinctions such as caste, rank and sex and to introduce equality and common brother-hood in religion as well as in society. To achieve this, probably the Prasada was introduced.

—Hand book of Veerashaivism.

ವರಣಗಳಲ್ಲಿ ಸೇರಿಸಲಾಗಿದೆ. ಇತರ ಶೈವರಲ್ಲಿ ಪಾದೋದಕ ಪ್ರಸಾದ ಗಳಿಗೆ ಇಷ್ಟು ಮಹತ್ವದ ಸ್ಥಾನವಿದ್ದಂತೆ ಕಂಡುಬರುವುದಿಲ್ಲ. ಪಾದೋದಕವನ್ನು ಕೊಟ್ಟ ಸಿದ್ಧರಾಮನು ವೀರಶೈವ ಗುರು ಇಲ್ಲವೆ ಜಂಗಮನಾಗಿರಬೇಕು.

ಬಿಲ್ಲೇಶ ಬೊಮ್ಮಯ್ಯನೆಂಬವನು ಸಾಲ ಹೆಚ್ಚಿ ದಾಯಾದರ ಒಡವೆಗಳನ್ನು ಇರಿಕಿಕೊಂಡು ಸೊನ್ನಲಗೆಗೆ ಓಡಿಬಂದು ವೇಷ ಬದಲಾಯಿಸಿ ಸಿದ್ಧರಾಮನ ಶಿಷ್ಯಮಂಡಲ ಸೇರುವನು.[೫೯] ಇದನ್ನರಿತು ಸಾಲ ಕೊಟ್ಟವರು ಬಂದು ಹಣ ಕೇಳಲು

'ಭವಿಗಳಿಂದೆಕ್ಕ ಮಿಂಡಿಂಗುರುವ ಗುಡ್ಡನಹ
ಶಿವಭಕ್ತನಹ ಸದಾಚಾರಿಯಪ್ಪೆನ್ನ ಮೇ
ಲ ವಿಚಾರದಿಂ ಕಳವನಿಟ್ಟರೆಂದಾಕ್ರೋಶದಿಂ ಜಱಿದು
ಜಂಕಿಸಿದನು[೬೦]

ಶಿವಸಿದ್ಧಪದ್ಧತಿಯುಂ ಕಂಡು ಕರುಣವಂ ಪಡೆದು ಎಕ್ಕ ಮಿಂಡಿಂಗೆ
ಸಲುವ ವೇಷನಾಂತಃ ಗುಡ್ಡನಾಗಿರುತಿರ್ಪ ಬೊಮ್ಮಯ್ಯನು

ನಿಜವಾದ ಶಿಷ್ಯನಾಗಿರದಿದ್ದರೂ ಶಿಷ್ಯರಿಗೆ ಸಲುವ ವೇಷವನ್ನು ಧರಿಸಿ ನಟನೆಯೊಳಗಾದರೂ ಸಿದ್ಧರಾಮನ ಶಿಷ್ಯನಾಗಿರುವನು. ಆತನು ಸಿದ್ಧರಾಮನ ಶಿಷ್ಯರಲ್ಲಿ ಒಬ್ಬನೆಂಬುದು ಸತ್ಯವಾದುದು. ಇಂತಹ ಈ ಶಿಷ್ಯನು ಭವಿಗಳಿಗಿಂತ ಶ್ರೇಷ್ಠನು, ಶಿವಭಕ್ತನು, ಸದಾಚಾರಿ ಎಂದು ಹೇಳಿಕೊಳ್ಳುವನು. ಆತನ ಮಟ್ಟಿಗೆ ಈ ಮಾತು ಸತ್ಯವಾಗಿರದಿದ್ದರೂ ಸಿದ್ಧರಾಮನ ಶಿಷ್ಯರಲ್ಲೊಬ್ಬನಾಗಿ ಹೀಗೆ ನುಡಿಯುವುದರಿಂದ ಅದು (ಅವರಿಗೆ) ಸಿದ್ಧರಾಮನ ಉಳಿದ ಶಿಷ್ಯರಿಗೆ ತಪ್ಪದೆ ಅನ್ವಯಿಸುತ್ತಿದೆ. ಅಂದರೆ ಸಿದ್ಧರಾಮನ ಶಿಷ್ಯರು ಭವಿಗಳಿಗಿಂತಲೂ ಶ್ರೇಷ್ಠರು. ಶಿವಭಕ್ತರು ಸದಾಚಾರಿಗಳು ಎಂದಂತಾಯಿತು. ಭವಿ ಎಂಬುದು ವೀರಶೈವರ ಪರಿಭಾಷೆ. ಲಿಂಗವಿರಹಿತರನ್ನು ವೀರಶೈವರು ಭವಿಗಳೆಂದು ಕರೆಯುತ್ತಾರೆ. ಭವಿಗಳಿಗಿಂತ ತನ್ನ ಶ್ರೇಷ್ಠತೆಯನ್ನು ಹೇಳಿಕೊಳ್ಳುವ ಬಿಲ್ಲೇಶ ಬೊಮ್ಮಯ್ಯನು ಸತ್ಪದಲ್ಲಿಲ್ಲದಿದ್ದರೂ ವೇಷದಲ್ಲಿ ವೀರಶೈವ

---

(೫೯) ಸಿ. ಪು. ಸ. ೮ ಪ. ೧

(೬೦) ,, ,, ೪

ನಾಗಿರಬೇಕು. ಇತರ ಶಿಷ್ಯರನ್ನು ಹೋಲುವಂತೆ ಆತನು ವೇಷಧರಿ ಸಿರುವುದರಿಂದ ಅವರು ನಿಜವಾಗಿಯೂ ವೀರಶೈವರಾಗಿರಬೇಕು. ವೀರ ಶೈವರಿಗೆ ಗುರುವಾಗಿದ್ದ ಸಿದ್ಧರಾಮನು ವೀರಶೈವನಾಗಿದ್ದನೆಂದು ತಿಳಿ ದರೆ ತಪ್ಪಾಗುವದೆ?

ಸೊಡ್ಡಳ ಬಾಚರಸ, ಹಾವಿನಹಾಳ ಕಲ್ಲಯ್ಯ ಎಂಬೀ ವೀರ ಶೈವರು ಸಿದ್ಧರಾಮನನ್ನು ಕಂಡು ಬಲ್ಲವರಾಗಿ ಆತನಿಗೆ ಗೌರವವನ್ನಿ ತ್ತಿರುವುದರಿಂದ ಸಿದ್ಧರಾಮನೂ ವೀರಶೈವನೇ ಆಗಿರಬೇಕೆಂದು ವಾದಿ ಸುವುದು ತಪ್ಪೆಂದು ಸಂಪಾದಕರು ಅಭಿಪ್ರಾಯವಿತ್ತಿರುವರು. ಇಲ್ಲಿ ಬಾಚರಸ, ಕಲ್ಲಯ್ಯ ಇವರಿರ್ವರೂ ಸಿದ್ಧರಾಮನಿಗೆ ಇತ್ತ ಗೌರವ ವನ್ನು ಸ್ವಲ್ಪ ಸೂಕ್ಷ್ಮದೃಷ್ಟಿಯಿಂದ ನೋಡಬೇಕಾಗುವುದು. ಸಿದ್ಧರಾ ಮನನ್ನು ಕರೆದುತರಬೇಕೆಂದು ಭೂಪ ಬಿಜ್ಜಳನ ತಮ್ಮ ಕರ್ಣದೇವನು ಬಾಚರಸನನ್ನು ಕೇಳಿಕೊಳ್ಳುವನು. ವಾರಣಾಸಿಯ ಬಟ್ಟೆವೋದರೆಂಬು ದೆನಗಾಯ್ತೆಂದು ಹರ್ಷದಿಂದ ಆತನು ಸೊನ್ನಲಿಗೆಗೈತರುವನು. ಆತ್ಯಾ ನಂದದಿಂದ ಶ್ರೀವಿಭೂತಿಯ ಕಾಣ್ಕೆಯಿತ್ತು ಎರಗಿ ಅರಸನ ಅಭೀಷ್ಟ ವನ್ನು ತಿಳಿಸುವನು. ಸಿದ್ಧರಾಮನು ಆತನಿಗೆ ಯೋಗಮಜ್ಜನದನು ವನ್ನು ತೋರಿಸುವನು. 'ಬೇರೊಂದು ನಿರ್ಜನಕ್ಕೊಯ್ದು ಅನುಭವ ಸುಖವ ಹೇರಿ ಅದಕ್ಕೈಹಿಕಕ್ಕಾರೆನೆನೆ ಸೊಡ್ಡಳಗೆ ಬೇರಾಗದಂತೆ ಸಲು ವಂದಮುಂ' ಹೇಳುವನು. ಬರುವುದು ಬಿಡುವುದು ಎನ್ನಳವಲ್ಲ. ಮಲ್ಲ ಯ್ಯನ ಇಚ್ಛೆ ಎಂದು ನುಡಿಯುವನು. ಆ ಉಪದೇಶ ಪಡೆದು ಸೊಡ್ಡಳ ಬಾಚರಸನು ಲಿಂಗೈಕ್ಯನಾಗುವನು. ವೀರಶೈವನಾದ ಬಾಚರಸನು ವೀರಶೈವನಲ್ಲದ ಸಿದ್ಧನಿಗೆ ಇನಿತೊಂದು ಗೌರವವನ್ನು ತೋರಿ ಆತ ನಿಂದ ಉಪದೇಶಪಡೆಯುತ್ತಿದ್ದನೆ? ಬಾಚರಸನಂತಹ ವೀರಶೈವನಿಗೆ ಉಪದೇಶವಿತ್ತ ಸಿದ್ಧರಾಮನೂ ವೀರಶೈವನೇ ಆಗಿರಬೇಕು. ವೀರಶೈವ ಶರಣಂಗೆ ವೀರಶೈವರಲ್ಲದವರ ಉಪದೇಶ ಹೊಲ್ಲದು.

ಹಾವಿನಹಾಳ ಕಲ್ಲಯ್ಯನು ವೀರಶೈವನೆಂಬುದನ್ನು ಎಲ್ಲರೂ ಒಪ್ಪು ವರು. ಆತನಿಗೆ ವೀರಶೈವ ದೀಕ್ಷೆಯನ್ನಿತ್ತವರು ರೇಣುಕಾಚಾರ್ಯ ರಿಂದೊಗೆದ ರುದ್ರಮುನಿದೇವರು. [೬೧] ಕಲ್ಲಯ್ಯನು ಸಿದ್ಧರಾಮನಲ್ಲಿಗೆ ಬರುವುದು ಈ ದೀಕ್ಷೆಯಾದನಂತರ. ಆತನಿಗೆ ಶಿವಜ್ಞಾನ ಉಂಟೆಂಬು

(೬೧) ಹರಿಹರನ ರಗಳೆಗಳು ಭಾಗ ೬. ಪು. ೭೭

ದನ್ನು ಸಿದ್ಧರಾಮನೂ ಬಲ್ಲ. ೬೨ ಅಂತೆ ಅವರಿರ್ವರಲ್ಲಿ ಮಿತ್ರತ್ವವುಂಟಾಗಿತ್ತು. ೬೩ ಶಿವಜ್ಞಾನಿಯೂ ವೀರಶೈವನೂ ಆದ ಕಲ್ಲಯ್ಯನು ಹೊತ್ತು ಹೋಗದೆ ಕುಳಿತ ಮುಂಠಯುದ ಮಂದಿಯೊಳು ಕೆಲವರು ಸೊನ್ನಲಿಗೆ ಕಾಶಿ, ಗಯೆ ಮೊದಲಾದ ಕ್ಷೇತ್ರಗಳಿಗೆ ಎಣೆಯಾಗದೆಂದು ತಿರಸ್ಕರಿಸಲು ಆ ಮಾತು ಕೇಳಿ 'ಮನಸೊಂದು ವೇಗದಿಂ ಹರಿದು ಗುರುವಿನೆಡೆಗೆ ಬಂದುವಂದಿಸಿ ನಡೆದ ಸಂಗತಿಯನ್ನು ವಿಜ್ಞಾಪಿಸುವನು. ೬೪ ಆ ದಿವ್ಯಕ್ಷೇತ್ರ ಮಿಗಿಲೆನಿಸುವಂತಹದೊಂದು ಪವಾಡವನ್ನು 'ಕರುಣಿಪುದೆಂದು ಕಾಲ್ವಡಿದನು ೬೫ ಕೊನೆಗೆ ಗೊಪೆಯನ್ನು ಸೇರುವ ಬಗೆಗೆ ಆತನ ಸಲಹೆ ಕೇಳಿದಾಗ ಕಲ್ಲಯ್ಯನು ಸಿದ್ಧರಾಮನನ್ನು ಮುಕ್ತಕಂಠದಿಂದ ಹೊಗಳುವನು. ೬೬ ಶಿವಜ್ಞಾನಿಯಾದ ಕಲ್ಲಯ್ಯನು ತಾನು ವೀರಶೈವನಾಗಿ ಸಿದ್ಧರಾಮನು ವೀರಶೈವನಾಗಿರದೆ ಶೈವನಾಗಿದ್ದರೆ ಆತನಿಗೆ ಇಷ್ಟೊಂದು ಗೌರವವನ್ನು ತೋರಿಸುತ್ತಿರಲಿಲ್ಲ. ಇಬ್ಬರಲ್ಲಿಯೂ ಒಂದು ಬಗೆಯ 'ಮಿತ್ರತ್ವ'ವುಂಟಾಗಿರುವುದರಿಂದ ಇಬ್ಬರೂ ಸಮಾನ ಧರ್ಮರಾಗಿರಬೇಕು. ವೀರಶೈವನಾಗಿದ್ದ ಕಲ್ಲಯ್ಯನು ರುದ್ರಮುನಿಗಳಿಂದ ದೀಕ್ಷೆಪಡೆದು ವೀರಶೈವನಾಗಿ ಮತ್ತೆ ಸಿದ್ಧರಾಮನ ಸಾನ್ನಿಧ್ಯದಿಂದ ಶೈವನಾಗಿರಬಹುದೆಂದು ತರ್ಕಿಸುವುದಕ್ಕಿಂತ ಸಿದ್ಧರಾಮನೂ ವೀರಶೈವನಾಗಿದ್ದನೆಂಬ ನಿರ್ಣಯಕ್ಕೆ ಬರುವುದು ಹೆಚ್ಚು ಸಮಂಜಸವಾಗಿದೆ.

ಕಲ್ಲಯ್ಯನು ವೀರಶೈವನೆಂಬ ಸಿದ್ಧಾಂತವನ್ನು ನಂಬಿ ಮೇಲಿನ ಮಾತನ್ನು ವಿವೇಚಿಸಿದುದಾಯಿತು. ಆತನು ವೀರಶೈವನೆಂಬುದನು ಮಾನ್ಯರಾದ ಡಿ. ಎಲ್. ನರಸಿಂಹಾಚಾರ್ಯರೂ ಒಪ್ಪಿರುವರು. ೬೭ ಕಲ್ಲಯ್ಯನಿಗೆ ವೀರಶೈವ ದೀಕ್ಷೆಯಾದ ಪ್ರಸಂಗವನ್ನು ಸ್ವಲ್ಪ ವಿವೇಚಿಸೋಣ.

---

(೬೨) ಸಿ. ಪು. ಆ. ೯ ಪ ೫೦

(೬೩) ಹರಿಹರನ ರಗಳೆಗಳು ಭಾಗ ೬ ಪು ೮೦ ಸಾಲು ೮

(೬೪) ಸಿ. ಪು ಸಂ ೭ ಪ ೪-೫

(೬೫) ,, ,,

(೬೬) ,, ಸಂ ೯ ಪ ೫೧-೫೨

(೬೭) ಸಿ. ಪು. ಪುಟ / ii

'ರಂಗ ಮಂಟಪದೊಳಗೆ ಶಿವಕಲಶ ಮುಮನಿರಿಸಿ
ಪಿಂಗ ದೊಲವಿಂ ಪಂಚ ಶುದ್ಧಿಯಂ ಸಂಗಡಿಸಿ
ಸುರುಚಿರ ವಿಭೂತಿಯಂ ಶಿವಪಟ್ಟವಂ ಕಟ್ಟಿ
ಶರಣ ಸಂತತಿಯೊಲ್ದು ಸಂತೋಷವಂ ಮುಟ್ಟಿ
ಗುರುಕಲಶದೊಡನೆ ಶಿವಕಲಶಂಗಳಂ ಪಿಡಿದು
ಪರಮಾನುರಾಗದಿಂ ಕಲಶೋದಕವ ನೆರೆದು
ಇಂತು ಗುರು ರುದ್ರಮುನಿದೇವ ಬಿಜಯಂಗೆಯ್ಯೆ
ಪಿಂತೆ ಕಲ್ಲಯ್ಯನಾ ಶೈವ ರಾಜ್ಯಂಗೆಯ್ಯೆ
ಗುರು ಹಸ್ತದಿಂ ಪಿಡಿಯೆ ಲಘುವಳಿದು ಗುರುವಾಗಿ
ಉರುತರ ಜ್ಞಾನಮಯನಾಗಿ ಸುಖತರವಾಗಿ
ಸಂತ ಸುಖದಿಂದಮಿರ್ದಂ ೬೮

ಈ ಗುರು ರುದ್ರಮುನಿಯು ರೇಣುಕಾಚಾರ್ಯ ಸಂಭೂತನೆಂದು ಮೇಲೆ ಹೇಳಲಾಗಿದೆ. ಆತನು ಕಲಶ ಹೂಡಿ ಕಲಶೋದಕವನ್ನೆರೆಯುತ್ತಾನೆ. ಕಲ್ಲಯ್ಯನಿಗೆ ಇಷ್ಟಲಿಂಗ ಧಾರಣೆಯನ್ನಾಗಲಿ ಷಟ್‌ಸ್ಥಲೋಪದೇಶವನ್ನಾಗಲೀ ರುದ್ರಮುನಿದೇವರು ಮಾಡಿದುದರ ವರ್ಣನೆ ಇಲ್ಲಿ ಬಂದಿಲ್ಲ. ಆದರೂ ಕಲ್ಲಯ್ಯನ ವೀರಶೈವತ್ವದ ಬಗೆಗೆ ಯಾವ ಸಂಶಯವೂ ಇಲ್ಲ. 'ಶಿವ ತಂದೆ ನೀ ನಿರಲು ಭವಿತಂದೆ ಬಡಿವನೆ?' ಎನ್ನುವನು ಕಲ್ಲಯ್ಯ. ಹೀಗೆ ಹರಿಹರದೇವನು ಬರೆದ ಶಿವಗಣದ ರಗಳೆಗಳನ್ನು ಪರಿಶೀಲಿಸಿದರೆ ಹನ್ನೆರಡನೆಯ ಶತಮಾನದ ಅನೇಕ ಶಿವ ಶರಣರಿಗೆ ಇಷ್ಟಲಿಂಗಧಾರಣೆಯಾದುದನ್ನಾಗಲಿ ಷಟ್‌ಸ್ಥಲೋಪದೇಶ ದೊರೆತುದನ್ನಾಗಲಿ ಆತನು ಹೇಳುವದಿಲ್ಲ. ೬೯ ಕಲ್ಲಯ್ಯನವರನ್ನೊಳಗೊಂಡು ಈ ಎಲ್ಲ ಶಿವಶರಣರು ವೀರಶೈವರೆಂಬುದನ್ನು ಎಲ್ಲರೂ ಒಪ್ಪುವರು. ಆದುದರಿಂದ ರಾಘವಾಂಕನ ಸಿದ್ಧರಾಮನಿಗೆ ವೀರಶೈವ ಸಂಪ್ರದಾಯದಂತೆ ಇಷ್ಟಲಿಂಗಧಾರಣೆ ಷಟ್‌ಸ್ಥಲೋಪದೇಶಗಳಾಗಿಲ್ಲವೆಂಬ ಕಾರಣದಿಂದ ಆತನ ವೀರಶೈವತ್ವವನ್ನು ಶಂಕಿಸುವುದು ಸಮಂಜಸವಾಗದು. ಕಲ್ಲಯ್ಯನೂ ಸಿದ್ಧರಾಮನಂತೆ ದೀಕ್ಷೆಯಾದ ಮೇಲೆ ಸ್ಥಾವರ ಲಿಂಗವಾದ ಕಲ್ಲಿನಾಥನ ಪೂಜೆಯಲ್ಲಿ ನಿರತನಾಗುವನು. ಸಿದ್ಧರಾಮನು

---

(೬೮) ಹರಿಹರನ ರಗಳೆಗಳು ಭಾಗ ೬ ಪು ೭೭

(೬೯) ಏಕಾಂತದ ರಾಮಿತಂದೆಗಳ ರಗಳೆ, ರೇವಣಸಿದ್ಧೇಶ್ವರನ ರಗಳೆಗಳನ್ನು ನೋಡಬೇಕು.

ಸ್ಥಾವರಲಿಂಗ ಪೂಜೆಯಲ್ಲಿ ನಿರತನಾಗಿದ್ದನೆಂಬುದರ ನಿಮಿತ್ತ ಆತನು ವೀರಶೈವನಾಗಿರದೆ ಶೈವನಾಗಿದ್ದನೆಂದು ಹೇಳುವುದು ಸರಿ ಎನಿಸದು.

ಸಿದ್ಧರಾಮನಿಗೆ 'ಇದರ್ಕೆ ಮಿಲ್ಲೆಂಬ ಬಯಲಿನ ಭ್ರಮೆಯಃ ಬೆದಱ ಬಿಸುಡಡೆಂದು' ಪ್ರಭುವು ಹೇಳಲು ಆತನು ಸಮಾಧಿಯನ್ನು ನಿರ್ಮಿಸುವನು. ೭೦ ಈ ಸಂದರ್ಭದಲ್ಲಿ ಬರುವ ಸಮಾಧಿಯ ರಚನೆ, ಸಿದ್ಧರಾಮೇಶನು ಸಮಾಧಿಸ್ಥನಾಗುವ ವಿಧಾನ ಇವೆಲ್ಲ ಆತನ ವೀರಶೈವತ್ವವನ್ನು ಸೂಚಿಸುತ್ತವೆ. ಸಮಾಧಿಯೆಂಬುದೂ ವೀರಶೈವರ ಪರಿಭಾಷೆ.

ಹೀಗೆ ಸಿದ್ಧರಾಮ ಪುರಾಣವನ್ನು ಪರಿಕಿಸಿ ನೋಡಿದರೆ ರಾಘವಾಂಕನ ಸಿದ್ಧರಾಮನು ಶೈವನಾಗಿರದೆ ವೀರಶೈವನಾಗಿದ್ದನೆಂದು ಹೇಳುವುದೇ ಸಮಂಜಸವೆಂದು ತೋರುತ್ತದೆ.

---

## ಮನಕೆ ಬೋಧೆ.

( ಲೇಃ— ಶ್ರೀ. ಸದಾಶಿವ ಶಿವಾಚಾರ್ಯ ಸ್ವಾಮಿಗಳು,
ಮು. ಸಖರಾಯಪಟ್ಟಣ. )

ಸಂಗನಭಕುತರ ಸಂಗಾತಿಯಾಗಬೇಕೆಲೆ ಮನವೆಲೆ ಮನವೆ ।
ಹಿಂಗಿದುರ್ವಿಷಯ ಸಂಗವ ಬೇಗ ಸುಖಿಯಪ್ಪೆ ಎಲೆ ಮನವೆಲೆಮನವೆ ॥
ಮಂಗ ಗುಣದಿ ಲೋಕಮಾನ್ಯತೆ ದೊರಕದು ಎಲೆ ಮನವೆಲೆಮನವೆ ।
ಕಂಗಳ ಕೊನೆಯ ಕಾಮವ ನೀಗಿ ನಿಲ್ಲಬೇಕೆಲೆಮನವೆಲೆಮನವೆ ॥ ೧ ॥

ಜಂಗುಳಿ ಕೀಳ ದೈವಕೆ ಹರಿದಾಡಬೇಡೆಲೆ ಮನವೆಲೆಮನವೆ ।
ಮಂಗಲ ಗುರು ಶಂಭುಲಿಂಗವ ಬಿಡಬೇಡವೆಲೆ ಮನವೆಲೆಮನವೆ ॥
ಕಂಗಳ ಲಿಂಗದೊಳಿಟ್ಟು ನಿಜದೃಷ್ಟಿಯ ಪಡೆಯಬೇಕೆಲೆ ಮನವೆಲೆಮನವೆ।
ಮಂಗಲ ದೃಷ್ಟಿಯಿಂದಂಗನೆಯರ ಕಾಣೆ ಭಂಗಿಲ್ಲ ಜಗದಂಬೆ ರೂಪರೆಲೆ ಮನವೆಲೆಮನವೆ ॥ ೨ ॥

ಅಂತಿಂತು ವಿಷಯಗಳಳಿಯಾಸೆ ಮಾಡದಿರೆಲೆಮನವೆಲೆಮನವೆ ।
ಭ್ರಾಂತಿಗೀಂತಿಯ ದೂಡಿ ನಿಶ್ಚಿಂತನಾಗಬೇಕೆಲೆ ಮನವೆಲೆಮನವೆ ॥
ಕಂತುಮರ್ದನ ಲಿಂಗದಡಿಯ ಚಿಂತಿಸಬೇಕು ಎಲೆ ಮನವೆಲೆಮನವೆ ।
ಶಾಂತಿ ನಿಜಾನಂದದೊಳಗಾಡಿ ಮೆರೆಯಬೇಕೆಲೆ ಮನವೆಲೆಮನವೆ ॥ ೩ ॥

---

(೭೦) ಸಿ. ಪು. ಸಂ. ೯ ಪ ೫೫

# ಬ್ರಹ್ಮ ವಿದ್ಯೆಯೇ ಉಪನಿಷತ್ತು.

( ಲೇಃ— ಪ್ರೊ. ಹ. ತು. ಸಾಸನೂರ, ಎಮ್. ಏ. ಪ್ರೊಫೆಸರ
ವಿಜಯ ಕಾಲೇಜ ವಿಜಾಪುರ )

ಉಪನಿಷತ್ತೆಂದರೆ ಬ್ರಹ್ಮ ವಿದ್ಯೆ ಮತ್ತು ಅದನ್ನೇ ಪ್ರತಿಪಾದಿಸುವ ಗ್ರಂಥವೆಂದಾಗುವದು. ಆ ಬ್ರಹ್ಮ ವಿದ್ಯೆಯೆಂದರೇನು ? ಬ್ರಹ್ಮದ ಸ್ವರೂಪವೇನು ? ಪರಮಾತ್ಮ, ಜೀವ, ಮತ್ತು ಜಗತ್ತಿನ ಸ್ವರೂಪವೇನು? ಜೀವ ಮತ್ತು ಜಗತ್ತುಗಳೊಡನೆ ಅದರ ಸಂಬಂಧವೇನು ? ಹಾಗು ಅದನ್ನು ಹೊಂದುವ ಉಪಾಯವೇನು ? ಇದರ ಅಧಿಕಾರಿ ಯಾರು? ಇತ್ಯಾದಿ ವಿಷಯ ವಿವೇಚನೆಯು ಉಪನಿಷತ್ತುಗಳಲ್ಲಿ ಮಾಡಲ್ಪಟ್ಟಿರುತ್ತದೆ.

ಅಜ್ಞಾನಾಂಧಕಾರವು ಕಳಚಿ ಹೋಗಿ ಜ್ಞಾನದ ಪೂರ್ಣಾಲೋಕವು ಪ್ರಕಾಶಿತವಾಗುವದನ್ನು ಉಪನಿಷತ್ತು ಕಲಿಸುತ್ತದೆ. ಬಹು ಯುಗ ಯುಗಾಂತರಗಳಿಂದ ಸಂಚಿತ ಘನೀಭೂತ ಅಂಧಕಾರವು ಅನ್ಯ ಯಾವ ರೀತಿಯಿಂದಲೂ ಪರಿಹರಿಸಲಶಕ್ಯ. ಅದನ್ನು ದೂರ ಮಾಡಬೇಕಾದರೆ ಸಾಮಾನ್ಯ ಒಂದು ಅಗ್ನಿ ಜ್ವಲಿಸಬೇಕಾಗುವದು. ಅದರಂತೆಯೇ ಮಾನವ ಮಂಡಲಿಯ ಹೃದಯ ಕಂದರದಲ್ಲಿ ಚಿರಸಂಚಿತವಾದ ಅಂಧಕಾರವು ಮತ್ತೆ ಯಾವದರಿಂದಲೂ ಹೋಗುವದಿಲ್ಲ. ಆ ಸಂಚಿತ ಅಜ್ಞಾನಾಂಧಕಾರ ದೂರ ಮಾಡಬೇಕಾದರೆ ಹೃದಯದಲ್ಲಿ ವಿವೇಕಾಗ್ನಿ ಜ್ವಲಿಸಬೇಕಾಗುವದು. ವಿವೇಕಾಗ್ನಿ ಜ್ವಲಿಸಿದ ಮುಹೂರ್ತದಲ್ಲಿಯೇ ಸಮಸ್ತ ಅಂಧಕಾರ ಪುಂಜೀಕೃತ ಅಜ್ಞಾನರಾಶಿ ದೂರವಾಗಿ ಹೋಗುತ್ತದೆ. ಆ ಬ್ರಹ್ಮ ವಿದ್ಯಾ ಲಾಭ ಮಾಡಬೇಕಾದರೆ ಅದೇ ವಿವೇಕ ಇಲ್ಲವೆ ಜ್ಞಾನದ ವಿನಾ ಅನ್ಯ ಉಪಾಯವಿಲ್ಲ. "ನಾನ್ಯಃ ಪಂಥಾ ವಿದ್ಯತೇ ಅಯನಾಯ" (ತೈತ್ತಿರೀಯ). ನೀವು ಭವಸಾಗರದ ಆಚೆಗೆ ಹೋಗಲಿಕ್ಕೆ ಇಚ್ಛಿಸಿದರೆ ಮತ್ತೊಂದು ಪಥವಿಲ್ಲ. ಏಕ ಮಾತ್ರ ಉಪಾಯ-ವಿವೇಕ-ಜ್ಞಾನ ಅರ್ಥಾತ್ ಅದನ್ನೇ ತಿಳಿಯುವದು. ಅದನ್ನು ತಿಳಿಯದ ಹೊರತು ಮತ್ತೆ ಎರಡನೆಯ ಉಪಾಯವಿಲ್ಲ. ಅದಕ್ಕೆ ತಿಳಿಯುವದು ಶಕ್ಯವು. ಇದು ಬೇರೊಬ್ಬ ಇಂಜಿನಿಯರನ ಕೆಲಸವಲ್ಲ. ಇಲ್ಲಿ

ತಾನೇ ಇಂಜಿನಿಯರನು ಆಗಬೇಕಾಗುವದು. ಪಾರಾಗಬೇಕಾದರೆ ತಾನೇ ಸೇತುವೆ; ತಾನೇ ದಾಟುವ ಹಾದಿ; ತಾನೇ ಒಯ್ಯುವವ. ಆ ಪಥದಲ್ಲಿ ತಾನೇ ತಕ್ಕೊಂಡು ಹೋಗುವ ಪ್ರಯತ್ನ ಮಾಡಲಿಕ್ಕೆ ಬೇಕಾಗುವದು. ಬ್ರಹ್ಮ ವಿದ್ಯಾ ಪ್ರಕಟಿತವಾದ ಮುಹೂರ್ತದಲ್ಲಿಯೇ ಸಮಸ್ತ ಅಜ್ಞಾನ, ಸಮಸ್ತ ಭೇದ ಬುದ್ಧಿ ದೂರವಾಗಿ ಹೋಗುತ್ತದೆ. ನಾವು ಹೇಗೆ ಸಂಸಾರದಲ್ಲಿ ಭೇದ ಬುದ್ಧಿ ತಕ್ಕೊಂಡು ನಡೆದು ತಿರುಗುತ್ತೇವೆ, ಯಾರಿಗೆ ಬ್ರಹ್ಮ ವಿದ್ಯಾ ಪ್ರಾಪ್ತವಾಗಿರುತ್ತದೆ, ಅವರು ಅಂತಹ ಭೇದ ಜ್ಞಾನ ತಕ್ಕೊಂಡು ನಡೆಯುವದಿಲ್ಲ. ನೂಲಿಗೆ ಬೆಂಕಿ ಹಚ್ಚಿ ನೋಡಿರಿ. ಅದು ತಾನೇ ಸುಟ್ಟರೂ ಪೂರ್ವ ಆಕಾರ ಹಿಡಿದಿರುತ್ತದೆ. ಆಗ ಅದರ ಬಾಹ್ಯ ಆಕಾರ ಮಾತ್ರ ಇರುತ್ತದೆ. ಆದರೆ ಒಳಗೆ ಅಸಾರವಾಗಿರುತ್ತದೆ. ಮುಟ್ಟಿದೊಡನೆಯೇ ಪುಡಿಯಾಗಿ ಹೋಗುವದು. ಹಾಗೆಯೇ ಯಾರ ಹೃದಯದಲ್ಲಿ ಬ್ರಹ್ಮ ವಿದ್ಯಾ ಪ್ರಕಾಶ ಹೊಂದುತ್ತದೆ, ಅವನ ದೇಹ ಆಗ ಸುಟ್ಟ ನೂಲಿನಂತೆ ಇರುತ್ತದೆ. ಅರ್ಥಾತ್ ಕರ್ಮಫಲ ಭೋಗ ಪರ್ಯಂತ ಇರುವದು ಮಾತ್ರ. 'ನಾನು' 'ನನ್ನದು' ಭೇದ ಉಳಿಯುವದಿಲ್ಲ. ಇದೇ ವಿಚಿತ್ರ ಅಥವಾ ಮಹಾ ಮಾಯೆಯ ಪ್ರಭಾವವು. ಯಾರಿಗೆ ಜ್ಞಾನವಾಗಿರುತ್ತದೆ, ಅವನೇ ತಿಳಿಯಲಿಕ್ಕೆ ಶಕ್ತನು.

ಆ ವಿದ್ಯಾ ಅನುಶೀಲನ ಮಾಡಲು 'ನಾನು' 'ನನ್ನದು' ಎಂಬ ಬುದ್ಧಿಯು ವಿನಷ್ಟವಾಗಿ ಹೋಗುತ್ತದೆ; ಅವಿದ್ಯೆಯ ಸಮಸ್ತ ಕಾರ್ಯವು ದೂರವಾಗಿ ಹೋಗುತ್ತದೆ. ಯಾವ ವಿದ್ಯೆ ನೌಕೆಯಂತೆಯಾಗಿ ಭವ ಸಾಗರವನ್ನು ದಾಟಿಸಿ ಬ್ರಹ್ಮ ಸದನದಲ್ಲಿ ತಕ್ಕೊಂಡು ಹೋಗುತ್ತದೆ, ಅದೇ ಉಪನಿಷತ್ತು ಅಥವಾ ಬ್ರಹ್ಮ ವಿದ್ಯೆ. ಅದೇ ಬ್ರಹ್ಮ ವಿದ್ಯೆಯೇ ಮಾನವನಿಗೆ ಅವಿದ್ಯೆಯ ಕೈಯಿಂದ ಬಿಡುಗಡೆ ಮಾಡುವದು. ಯಾರ ಹೃದಯದಲ್ಲಿ ಈ ಬ್ರಹ್ಮ ವಿದ್ಯೆಯು ಪ್ರಕಾಶಿತವಾಗಿರುತ್ತದೆ, ಅವನಿಗೆ ಮತ್ತೆ ಅಜ್ಞಾನದಿಂದ ಬಂಧಿಸಲು ಶಕ್ಯವಿಲ್ಲ. ಯಾವ ಅವಿದ್ಯೆ ಎಲ್ಲ ಜನರನ್ನು ಅಂಕೆಯಲ್ಲಿಡುತ್ತದೆ, ಅದು ಅವನಿಗೆ ತಾನೇ ದಾಸಿಯಂತೆ ಇರುತ್ತದೆ. ಸಂಸಾರದ ರಮಣೀಯತೆಯಲ್ಲಿ ಅವನಿಗೆ ಮತ್ತೆ ರೂಪಗೊಳಿಸಿ ಇಡಲಿಕ್ಕೆ ಶಕ್ಯವಿಲ್ಲ.

ಬೀಜವನ್ನು ಬಿತ್ತಲು ಅಂಕುರವಾಗುವದು, ಆದರೆ ಸುಟ್ಟ ಬೀಜ (ಯಾವದು ಬೆಂಕಿ ಸುಟ್ಟು ಹೋಗಿದೆ.) ಉತ್ತಮ ಕ್ಷೇತ್ರದಲ್ಲಿ ಬಿತ್ತಿದರೂ ಅಂಕುರಿತವಾಗುವದಿಲ್ಲ. ಅದೆ ಧಾನ್ಯವಿರುತ್ತದೆ. ಅದೇ ಭೂಮಿಯಿರುತ್ತದೆ. ಕೇವಲ ಬೀಜದಲ್ಲಿ ಜೀವನ ಶಕ್ತಿಯಿಲ್ಲ. ಹಾಗೆಯೇ ಜ್ಞಾನಾಗ್ನಿ ಯಾರಲ್ಲಿ ಜ್ವಲಿಸಿರುತ್ತದೆ ಅವರ ಈ ಸಮಸ್ತ ಸಂಸಾರ ವಿದ್ಯಮಾನವಿದ್ದರೂ ಜನ್ಮ ಜನ್ಮದ ಕರ್ಮ ಮತ್ತು ಜನ್ಮ ಮರಣ ಪ್ರವಾಹ ಶಕ್ತಿ ನಷ್ಟ ಮಾಡಿಕೊಡುತ್ತದೆ. ಆಗ ಅವರ ಎಲ್ಲವು ಇದ್ದರೂ ಇಲ್ಲ. ಹುರಿದ ಬೀಜ ಹೇಗೆ ಇದ್ದರೂ ಇಲ್ಲ. ಅದರಂತೆಯೆ ಯಾರಿಗೆ ಬ್ರಹ್ಮ ವಿದ್ಯೆ ಲಾಭವಾಗಿರುತ್ತದೆ ಅವರ ಮತ್ತು ಕಮನಾಫಲ ರಾಶಿ ಅಥವಾ ಅವಿದ್ಯಾ ಇತ್ಯಾದಿ ಸ್ವಲ್ಪೂ ಇಲ್ಲ. "ನ ತಸ್ಯ ಪ್ರಾಣಾ ಉತ್ಕ್ರಮನ್ತಿ ಅತ್ರೈವ ಸಮವತಾಲೀಯಸೀ"—ಬ್ರಹ್ಮಜ್ಞಾನ ಪ್ರಾಣ ಅವನ ಶರೀರದಿಂದ ಹೊರಗೆ ಆಗಿ ಉತ್ಕ್ರಾಂತವಾಗುವದಿಲ್ಲ. (ಅರ್ಥಾತ್ ಅನ್ಯ ದೇಹದಲ್ಲಿ ಹೋಗುವದಿಲ್ಲ.) ಇದೇ ದೇಹದಲ್ಲಿ ವಿಲೀನವಾಗುವದು.) "ವಿಮುಕ್ತಶ್ಚ ವಿಮುಚ್ಯತೆ" ಕಠೋಪನಿಷತ್ ೫/೧೦—"ಅವಿದ್ಯಾ ಕೃತ ಕರ್ಮ ಬಂಧನದಿಂದ ವಿಮುಕ್ತವಾಗಿ ಮುಕ್ತಿ ಲಾಭ ಮಾಡುತ್ತಾನೆ." ಆಗ ಅವನ ಸಮಸ್ತವೂ ಪರಮಾತ್ಮನಲ್ಲಿ ಕೂಡಿ ಹೋಗುತ್ತದೆ. ಜೀವ ಸ್ವತಃ ವಿಮುಕ್ತನು; ದೇಹವು ಆವರಣ ಮಾತ್ರ. ಯಾವನು ಬ್ರಹ್ಮ ವಿದ್ಯಾ ಲಾಭ ಮಾಡಿದ್ದಾನೆ, ಅವನು ಅದೇ ಮುಕ್ತ ಅವಸ್ಥೆಯಲ್ಲಿ ವಿರಾಜಿಸುತ್ತಾನೆ. ಆ ವಿಷಯದಲ್ಲಿ ಸಂದೇಹವಿಲ್ಲ. ಪ್ರಾರಬ್ಧ ಕರ್ಮ ಫಲದಿಂದ ಅವನ ದೇಹ ಮಾತ್ರ ನಿಲ್ಲುತ್ತದೆ. ಕುಂಬಾರ ಸಾಲೆಯ ಕುಂಬಾರನ ಗಾಲಿಯು ಅದರ ಉದಾಹರಣ. ಕುಂಬಾರನ ಚಕ್ರದಿಂದ ಹರಿವೆ, ಕೊಡ ಮುಂತಾದವು ಹುಟ್ಟುತ್ತವೆ. ಆದರೆ ಮಣ್ಣು ತೀರಿ ಹೋದರೂ ಪೂರ್ವ ಸಂಸ್ಕಾರ ಬಲದಿಂದ ಗಾಲಿಯು ಕೆಲಕಾಲ ಹೇಗೆ ತಿರುಗುತ್ತದೆ, ಹಾಗೆಯೇ ಅದೇ ಜೀವನ್ಮುಕ್ತ ಪುರುಷನ ದೇಹವೂ ಕೆಲಕಾಲವಿರುತ್ತದೆ. ಆಗ ಜೀವನ ಧಾರಣದ ಇಚ್ಛಾ ಮತ್ತು ಪ್ರಯೋಜನ ಲೋಪವಾಗಿ ಹೋಗುತ್ತವೆ. ವಿಷಯಾದಿ ಭೋಗದ ಪ್ರವೃತ್ತಿಯು ಇರುವದಿಲ್ಲ. ಕುಂಬಾರನು ಹೊರಟು ಹೋದರೂ ಗಾಲಿಯು ಹೇಗೆ ತಿರುಗುತ್ತಿರುತ್ತದೆ, ಹಾಗೆಯೇ ಮುಕ್ತ ಪುರುಷನ ಪ್ರಯೋಜನವು ಪೂರ್ಣವಾಗಿ ಹೋದರೂ ದೇಹವು ಸಂಸಾರದಲ್ಲಿ ಚಕ್ರ ತಿರುಗಿದಂತೆ

ಕೆಲಸ ಮಾಡುತ್ತಿರುತ್ತದೆ. ಪ್ರಾರಬ್ಧ ಕರ್ಮ ನಷ್ಟವಾದೊಡನೆಯೇ ಮುಕ್ತಿಯು.

ಬ್ರಹ್ಮ ವಿದ್ಯಾ ಸಂಬಂಧದಿಂದ ಹೇಳುವದನ್ನು ಹೇಳಿತು. ಈಗ ನಾವು ಈ ಉಪನಿಷತ್ ಅಥವಾ ಬ್ರಹ್ಮ ವಿದ್ಯೆಯ ಪ್ರತಿಪಾದ್ಯ ಬ್ರಹ್ಮದ ಮಾತು ಆಲೋಚನ ಮಾಡುವಾ. ಉಪನಿಷತ್ತಿನಲ್ಲಿ ಬ್ರಹ್ಮ ವಿದ್ಯಾ ನಿರೂಪಿಸಲ್ಪಟ್ಟಿದೆ. ಉಪನಿಷತ್ತಿನ ಮತ್ತೊಂದು ಅರ್ಥ– ರಹಸ್ಯಗೋಪನೀಯ ನಾವು ಬೇಕು ಬೇಕಾದಲ್ಲಿ ಇದನ್ನು ಹೇಳುವದಲ್ಲ.

ಬ್ರಹ್ಮಸತ್ಃ— ಉಪನಿಷತ್ತು ಒಂದು ರಹಸ್ಯ ನಾಮ; ಯಥಾ "ತಸ್ಯೋಪ ನಿಷತ್" ಅದರ ಉಪನಿಷತ್ ಅರ್ಥಾತ್ ರಹಸ್ಯ ಅಥವಾ ಗುಹ್ಯನಾಮವೇನು ? ಬ್ರಹ್ಮದ ಗುಹ್ಯನಾಮವಿರುತ್ತದೆ. "ಸತ್ಯಸ್ಯ ಸತ್ಯಂ" (ಛಾಂದೋಗ್ಯೋಪನಿಷತ್) ಅದರ ಸತ್ತಾ ತಕ್ಕೊಂಡು ಚಂದ್ರ, ಸೂರ್ಯ, ಜಗತ್ತಿನಲ್ಲಿ ಸತ್ಯವಾಗಿರುತ್ತವೆ. ಹೇಗೆ ಕೆಂಪು ಅರಿವೆಯ ಮೇಲೆ ಬಿಳೀ ಕೆಲಸ, ಜಗತ್ತು ಇದರಂತೆ ಸತ್ಯವು. ಅದು ಸತ್ತಾ ಕೊಟ್ಟಿರುತ್ತದೆ. ಅಂತೇ ಅವುಗಳು ಸತ್ಯ. ಸತ್ಯ ಸ್ವರೂಪ ಬ್ರಹ್ಮ ಅವುಗಳಿಗೆ ಸತ್ಯ ಮಾಡಿರುತ್ತದೆ. ಅದೇ ಅಖಂಡ ಸಚ್ಚಿದಾನಂದ. ಬ್ರಹ್ಮವೇ ಸತ್ ಚಿತ್ ಮತ್ತು ಆನಂದ ಸ್ವರೂಪ. ದೊಡ್ಡ ದೊಡ್ಡ ಸಾಗರ ಅತ್ಯುಚ್ಚ ಪರ್ವತರಾಶಿ ಹಲವು ದಿನಗಳಿಂದ ಇರುತ್ತವೆಂದು ಹಾಗೂ ಅವುಗಳ ಬೃಹದಾಕಾರ ನೋಡಿ ಅವು ಸತ್ಯವೆಂದು ಮನದಲ್ಲಿಯಾಗುವದು. ಆದರೆ ಅವುಗಳ ಸತ್ತೆಯ ಮೂಲವು ಎಲ್ಲಿ? ಅವುಗಳೂ ಕಾಲದಿಂದ ಪರಿವರ್ತನಶೀಲ ಮತ್ತು ಅಸ್ಥಾಯಿ. ಅದೇ ಸತ್ಯಸ್ವರೂಪದೊಡನೆ ತುಲನೆಯಲ್ಲಿ ಅವುಗಳೂ ಜಲಬಿಂಬದಂತೆ ಕ್ಷಣಿಕ ಮತ್ತು ಅನಿತ್ಯ. ನಮ್ಮ ಕಣ್ಣೆದುರಿಗೆ ಇರತಕ್ಕವುಗಳು ಮತ್ತು ಬಹುದಿನಗಳಿಂದ ನಮ್ಮ ತಂದೆ ಪಿತಾಮಹ ಎಲ್ಲರೂ ನೋಡುತ್ತ ಬಂದಿರುತ್ತಾರೆ. ಇದಕ್ಕೋಸುಗ ಅವುಗಳಿಗೆ ಸತ್ಯವೆಂದು ನಾವು ಮನದಲ್ಲಿ ಮಾಡುತ್ತೇವೆ. ಆದರೆ ಅವುಗಳ ಸತ್ತಾ ಆದೇ ಸತ್ಯಸ್ವರೂಪದ ಸತ್ತೆಯಲ್ಲಿ ಬಿಂದು ಮಾತ್ರ. ಚಂದ್ರ, ಸೂರ್ಯ, ನಕ್ಷತ್ರ ಪ್ರಭೃತಿ ಜ್ಯೋತಿರ್ಮಂಡಲ ಎಲ್ಲಿಂದ ತೇಜವನ್ನು ಪಡೆಯಿತು? ಅವುಗಳು ಯಾರ ಪ್ರಕಾಶ ತಕ್ಕೊಂಡು ಜಗತ್ತನ್ನು ಬೆಳಗಿಸುತ್ತವೆ? ಅದೇ ಅವುಗಳ ಪ್ರಾಣದ ಪ್ರಾಣ, ಜೀವ

ನದ ಜೀವನವಾಗಿ ಇರುತ್ತದೆಂದೇ ಅವುಗಳ ಜ್ಯೋತಿ ಮತ್ತು ಶಕ್ತಿ ಇರದಿದ್ದರೆ ಅವುಗಳ ಶಕ್ತಿಯು ಎಲ್ಲಿ?

ಬ್ರಹ್ಮ ಚಿತ್ ಪ್ರಕಾಶ ಸ್ವರೂಪ।
ನ ತತ್ರ ಸೂರ್ಯೋ ಭಾತಿ ನ ಚಂದ್ರ ತಾರಕಾಂ।
ನೇಮಾ ವಿದ್ಯುತೋ ಭಾತಿ ಕುತೋಽಯಮಗ್ನಿಃ॥
ತಮೇವ ಬಾನ್ತ ಮನು ಭಾತಿ ಸರ್ವಂ।
ತಸ್ಯ ಭಾಸಾ ಸರ್ವಮಿದಂ ವಿಭಾತಿ॥

(ಕಠೋಪನಿಷತ್ ೨—೨—೧೫)

"ಅಲ್ಲಿ ಸೂರ್ಯನು ಕಿರಣಗಳನ್ನು ಹರಡುವದಿಲ್ಲ,
ಚಂದ್ರ ತಾರಕಗಳೂ ಕಿರಣವನ್ನು ಹರಡುವದಿಲ್ಲ,
ವಿದ್ಯುತ್ತುಗಳೂ ದೀಪ್ತಿ ಪ್ರಕಾಶವನ್ನು ಮಾಡುವದಿಲ್ಲ,
ಪಾರ್ಥಿವ ಅಗ್ನಿಯು ಮಾತಂತೂ ಇಲ್ಲೆ ಇಲ್ಲ. ಎಲ್ಲ ವಸ್ತುಗಳೂ ಅದೇ ದೀಪ್ತಿ ಮಾನದ ಪ್ರಕಾಶದಲ್ಲಿ ಅನು ಪ್ರಕಾಶಿತ— ಅದರ ದೀಪ್ತಿಯು ಲ್ಲಿಯೇ ಎಲ್ಲ ಎಲ್ಲ ದೀಪ್ತಿಯನ್ನು ಹೊಂದುತ್ತವೆ."

ಐಹಿಕ ಸುಖವು ತುಲನಾತ್ಮಕ, ಅತ್ಯುನ್ನತ ಗಿರಿಗಳ ಆಳವಾದ ಕಂದರಗಳು, ಸುಂದರವಾದ ಬನ, ಘೋರ ಅರಣ್ಯ, ಭೋರ್ಗರೆಯುವ ಹೊಳೆ, ಹೃದಯುವನ್ನೇ ಕುಸಿದಾಡಿಸುವ ಸರೋವರ ಇವೆಲ್ಲವುಗಳನ್ನು ನಿರ್ಮಾಣ ಮಾಡಿದವರಾರು? ಇವು ಉಪನಿಷತ್ತಿನಲ್ಲಿ ನಿರೂಪಿತವಾಗಿವೆ. ಉಪನಿಷತ್ ಈ ಸತ್ಯದ ಸ್ವರೂಪ ವಿಷಯು ಶಿಕ್ಷಣ ಕೊಡುತ್ತದೆ. ಉಪನಿಷತ್ತಿನ ಶಿಕ್ಷಣ "ಸತ್ಯಸ್ಯ ಸತ್ಯಂ"

ಬ್ರಹ್ಮ ಆನಂದ ಸ್ವರೂಪಃ— ಆನಂದ ಲಾಭವೇ ನಮ್ಮ ಉದ್ದೇಶ. ಜಗತ್ತಿನ ಆನಂದ ಸ್ವಲ್ಪಾದರೂ ಇಲ್ಲ. ಹಣ್ಣು ಹೂಗಳಲ್ಲಿ ಆನಂದ ವಿಲ್ಲ. ದುಡ್ಡು ದುಗ್ಗಾಣಿಗಳಲ್ಲಿ ಆನಂದವಿಲ್ಲ. ಆ ಎಲ್ಲ ಆನಂದ ದುಃಖಾನ್ವಿತ ಮತ್ತು ಕ್ಷಣಿಕ. ಆ ಸಚ್ಚಿದಾನಂದ ಬ್ರಹ್ಮವೇ ಆನಂದ ಸ್ವರೂಪ. ಅದೇ ಯಥಾರ್ಥ ಆನಂದವು. ಬೇರೆ ಎಲ್ಲವೂ ಅದರದೇ. ಆನಂದ ಬಿಂದು ಹೊಂದಿ ತಮಗೆ ಕೃತಾರ್ಥ ಎಂದು ಮನದಲ್ಲಿ ಮಾಡಿ ರುತ್ತವೆ. ಶ್ರುತಿ ಹೇಳುತ್ತದೆಃ- "ಏತಸ್ಯೈವಾನಂದಸ್ಯ ಅನ್ಯಾನಿ ಭೂತಾನಿ ಮಾತ್ರಾ ಮುಪಜೀವನ್ತಿ." (ತೈತ್ತರೀಯ) ಬೇರೆ ಪ್ರಾಣಿ

ಗಳು ಈ ಆನಂದದ ಅಂಶವನ್ನೇ ಉಪಭೋಗ ಮಾಡುತ್ತವೆ. ಬ್ರಹ್ಮ-ಸತ್ - ಜಗತ್ ಆದರದೇ ಸತ್ತೆಯಲ್ಲಿ ಸತ್. ಅದೇ ಬ್ರಹ್ಮದ ಸತ್ವ ಇರುತ್ತದೆಂದೇ ಬ್ರಹ್ಮಾನಂದವೂ ಜಗತ್ತಿನಲ್ಲಿ ಆರೋಪಿತವಾಗಿರುತ್ತದೆ. ಬಿಕ್ಷಾಲಬ್ಧ ವಸ್ತುವೇ ಆನಂದಮಯವಾಗಿರುತ್ತದೆ. ''ಹಿರಣ್ಮಯೇನ್ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಂ''-- ಈಶೋಪನಿಷತ್ - -೧೫. ''ಜ್ಯೋತಿರ್ಮಯ ಪಾತ್ರದಿಂದ ಸತ್ಯದ ಅರ್ಥಾತ್ ಸೂರ್ಯಮಂಡಲ ಸ್ಥಿತ. ಬ್ರಹ್ಮನ ಮುಖ ಆಚ್ಛಾದಿತ ಇರುತ್ತದೆ.'' ಆದರೆ ಅದೇ ನಿತ್ಯ ಸತ್ಯ ಭೂಮಾನಂದ ನಮ್ಮ ಅಜ್ಞಾನದಿಂದ ಆಚ್ಛಾದಿತವಿರುತ್ತದೆ. ಅದೇ ನಾವು ಸಕಲ ಆನಂದದಲ್ಲಿ ಉಪಭೋಗ ಮಾಡಿರುತ್ತೇವೆ. ಪುತ್ರನಲ್ಲಿ ಆನಂದ, ಪತ್ನಿಯಲ್ಲಿ ಆನಂದ ಹೇಗೆ? ಯಾವ ಕಾರಣದಿಂದ ಬ್ರಹ್ಮಾನಂದ ಅದರಲ್ಲಿ ಆರೋಪವಾಗಿರುತ್ತದೆ? ಒಂದು ವೇಳೆ ಅದರಲ್ಲಿ ಬ್ರಹ್ಮಾನಂದವಿರಲಿಲ್ಲವೆಂದರೆ ಸ್ತ್ರೀ-ಪುತ್ರ ಎಂದೂ ಆನಂದದಾಯಕವಾಗುತ್ತಿದ್ದಿಲ್ಲ. ಇವರು ಕೊಡುವ ಆನಂದ ಎರವಲಾಗಿ ತಂದ ಆನಂದ. ಇಂತಹ ಎರವಲಾಗಿ ತಂದ ಆನಂದವೇ ಇಷ್ಟು ರೀತಿಯಾಗಿ ಸುಖ ಕೊಡುತ್ತಿದ್ದರೆ, ಮೂಲ ಆನಂದವೆಷ್ಟು ಕೊಡಬಹುದು? ಇದರ ರಹಸ್ಯವನ್ನೇ ಉಪನಿಷತ್ತು ಕಲಿಸುತ್ತದೆ.

ಇದಕ್ಕೋಸುಗವೇ ಮಹಾತ್ಮರು ಚಿರಕಾಲ ಪ್ರಾರ್ಥನೆ ಮಾಡಿ ಇರುವದೇನಂದರೆ,

''ಯಾ ಮತಿರ ವಿವೇಕಾನಾಂ ವಿಷಷ್ವೇನ ಪಾಯಿನೀ ।
ತ್ವಾಮನುಸ್ಮರತಃ ಕೃಷ್ಣ ಹೃದಯಾನ್ಮಾಪಸರ್ಪತು॥

— ಭಾಗವತ.

ಹೇ ಭಗವಾನ್, ಅವಿವೇಕೀ ಜನರಿಗೆ ವಿಷಯದೊಡನೆ ಯಾವ ಪ್ರಗಾಢ ಪ್ರೇಮ ಅಥವಾ ಅನುರಾಗವು, ನಮಗೆ ಅದೇ ಪ್ರೇಮ ಅದೇ ಅನುರಾಗ ನಿಮ್ಮ ಮೇಲೆ ಬರುವದು; ಹಾಗು ಇದು ನಮ್ಮ ಹೃದಯದಿಂದ ದೂರು ಆಗುವದಿಲ್ಲ. ನಮ್ಮ ಹೃದಯದಲ್ಲಿ ಇದ್ದು ಅಂತರ್ಯಾಮಿ ರೂಪದಿಂದ ಬ್ರಹ್ಮ ಹೇಳುತ್ತಿರುವದೇನಂದರೆ, ''ನೀನು ನಮ್ಮಲ್ಲಿ ಗ್ರಹಣ ಮಾಡು. ಆದರೆ ಅವುಗಳಿಗೆ ಗ್ರಹಣ ಮಾಡಲಿಕ್ಕೆ ಶಕ್ಯವಾಗುವದಿಲ್ಲ. ಅವಕ್ಕೆ ಹೊಂದಬೇಕಾದರೆ ಸಾಧುಸಂಘವನ್ನು

ಇಚ್ಛಿಸುವೆವು. ಸಾಧು ಸಂಘ ಮತ್ತು ಸತ್ ಚಿಂತಾದೊಡನೆ ಯಾರು ಸಾಧನೆ ಮಾಡಿ ಈ ಉಪನಿಷತ್ (ಬ್ರಹ್ಮವಿದ್ಯಾ) ಲಾಭ ಮಾಡಿರುತ್ತಾರೆ. ಅವುಗಳ ಸಂಘ ಮಾಡುವದು ಆವಶ್ಯಕ.

ಉಪನಿಷತ್ತಿನ ಮೀಮಾಂಸೆಃ--- ಸಾರಸಿದ್ಧಾಂತ, ಅದ್ವೈತವಾದ ಭಿನ್ನ, ಪ್ರಬಲ ಸಾಂಪ್ರದಾಯಿಕ ವಿದ್ವೇಷಬುದ್ಧಿ ವಿದೂರಿತವಾಗುವದಿಲ್ಲ. ಶಾಕ್ತ, ವೈಷ್ಣವರ ವಿವಾದ ಚಿರಕಾಲವೂ ಇದ್ದು ಹೋಗುವದು. ಆದರೆ ಅದ್ವೈತವಾದದಲ್ಲಿ ಸಮಸ್ತ ಭೇದವೂ ಅದೇ ಏಕತ್ವದಲ್ಲಿ ಪರಿಣತವಾಗಿ ಹೋಗುತ್ತದೆ. ಅಲ್ಲಿ ಒಂದರ ಹೊರ್ತು ಎರಡು ಇಲ್ಲ. ದ್ವೈತ ಭಾವ ಅಥವಾ ದ್ವಿಧಾ ಬುದ್ಧಿಯೂ ಅಲ್ಲಿ ಇರಲಿಕ್ಕೆ ಶಕ್ಯವಿಲ್ಲ. ಮಹಿಮ್ನ ಸ್ತೋತ್ರದಲ್ಲಿ ಇರುತ್ತದೆ.

ತ್ರಯೀ ಸಾಂಖ್ಯಃ ಯೋಗಃ ಪಶುಪತಿ ಮತಂ ವೈಷ್ಣವ ಮಿತಿ
ಪ್ರಭಿನ್ನೇ ಪ್ರಸ್ಥಾನೇ ಪರ ಮಿದ ಮದಃ ಪಥ್ಯ ಮಿತಿ ಚ ।
ರುಚೀನಾಂ ವೈಚಿತ್ರ್ಯಾದೃಬು-ಕುಟಿಲ ನಾನಾ ಪಥಜುಷಾಂ
ನೃಣಾ ಮೇಕೋ ಗಮ್ಯಸ್ತ್ವಮಸಿ ಪಯಸಾಮರ್ಣವ ಇವ ॥

—ಮಹಿಮ್ನ ಸ್ತೋತ್ರ.

ಅರ್ಥಾತ್ ತ್ರಯಿ ( ಮೂರು ವೇದ ), ಸಾಂಖ್ಯ, ಯೋಗ, ಪಾಶುಪತ, ( ಶೈವ ), ಮತ್ತು ವೈಷ್ಣವ ಮತ-ಈ ಎಲ್ಲ ಭಿನ್ನ ಭಿನ್ನ ಮತ ಸಂಬಂಧದಿಂದ ಯಾವನು ಒಂದಕ್ಕೆ ಶ್ರೇಷ್ಠ, ಮತ್ತೊಂದಕ್ಕೆ ಹಿತಕರ ಅನ್ನುತ್ತಾನೆ. ಆದರೆ ಸಮುದ್ರವು ಹೇಗೆ ನದಿಗಳ ಏಕಮಾತ್ರ ಗಮ್ಯಸ್ಥಾನ, ಅದರಂತೆ ರುಚಿ ಭೇದದಿಂದ ಸರಲ, ಕುಟಿಲ ನಾನಾ ಪಥಗಾಮೀ ಜನರಿಗೂ-ನೀನೇ ತದ್ರೂಪ ಏಕ ಮಾತ್ರ ಗಮ್ಯ. ಯಾವ ಪಥದಲ್ಲಿಯೇ ಇರಲಿ ಎಂತಹ ಸಂಪ್ರದಾಯದ್ದೇ ಅನುಸರಣ ಮಾಡಿರಿ ಎಲ್ಲರೂ ಅದೇ ಒಂದೇ ಸ್ಥಲದಲ್ಲಿ ಹೋಗುವದು. " All roads lead to Rome. " ಎಂಬ ಆಂಗ್ಲ ನುಡಿ ಸತ್ಯವಾಗಿದೆ. ತ್ರಯೀ ಅರ್ಥಾತ್ ವೇದ-ಕರ್ಮಕಾಂಡ, ಪ್ರಧಾನತಃ ಯಾಗ ಯಜ್ಞಗಳದೇ ಮಾತನ್ನು ಹೇಳುತ್ತದೆ. ಕರ್ಮ ಕಾಂಡದಲ್ಲಿ ಕರ್ಮವೇ ಶ್ರೇಷ್ಠ. ಕಪಿಲನ ಸಾಂಖ್ಯ ಹೇಳುತ್ತದೆಃ— ಆತ್ಮ ಮತ್ತು ಅನಾತ್ಮಗಳ ವಿವೇಕ ವಿಶ್ಲೇಷಣ ಮಾಡು. ನಾವು ಜಡ ಮತ್ತು ಆತ್ಮನಿಗೆ ಮಿಶ್ರಿತ

ವದು, ಆಗ ವಾಸನೆ ಮತ್ತು ಧ್ಯಾನ ಪ್ರಧಾನವೆಂದು ಮನದಲ್ಲಿ ಆಗು ವದು. ಕರ್ಮ ಗೌಣವಾಗಿ ಹೋಗುವದು. ಗಿಡದಲ್ಲಿ ಒಂದು ಫಲ ವಿರುತ್ತದೆ. ಯಾವಾಗ ಅದಕ್ಕೆ ಮತ್ತೆ ಪೃಥ್ವಿಯ ರಸದ ಅವಶ್ಯಕತೆ ಇರುವದಿಲ್ಲ. ಆಗ ಅದು ತಾನೇ ಗಿಡದಿಂದ ಬಿದ್ದು ಹೋಗುತ್ತದೆ. ಬ್ರಹ್ಮರಸ ಸ್ವರೂಪ, ಅದು ರಸಮಯ, ಉಪಾಸನೆಯಿಂದ ಕ್ರಮ ಕ್ರಮ ದಿಂದ ಹೃದಯದಲ್ಲಿ ಅದನ್ನು ತರಲಿಕ್ಕೆ ಬೇಕಾಗುವದು, ಅದರ ರಸ ಆಸ್ವಾದನ ಮಾಡಬೇಕಾಗುವದು. ಒಮ್ಮೆ ಅದೇ ಸಚ್ಚಿದಾನಂದ-ರಸ ಹೃದಯದಲ್ಲಿ ಆಸ್ವಾದನ ಮಾಡಲಿಕ್ಕೆ ಸಮರ್ಥವಾದರೆ ಕರ್ಮ ತಾನೇ ಹೊರಟು ಹೋಗುವದು. ಅಂತೇ ಶ್ರುತಿ ತಾರಸ್ವರದಿಂದ ಹೇಳಿಗುವ ದೇನಂದರೆ:—

> "ಭಿದ್ಯತೇ ಹೃದಯ-ಗ್ರಂಥಿಶ್ಛಿದ್ಯತೇ ಸರ್ವಸಂಶಯಃ
> ಕ್ಷೀಯನ್ತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ ॥"

(ಮುಂಡಕೋಪನಿಷತ್ ೨-೨-೮)

ಬ್ರಹ್ಮಸಾಕ್ಷಾತ್ಕಾರದಿಂದ ಮಾನವರ ಎಲ್ಲ ಹೃದಯ ಗ್ರಂಥಿ ಭಿನ್ನವಾಗಿ ಹೋಗುತ್ತದೆ. ಎಲ್ಲ ಸಂಶಯ ಹೊರಟು ಹೋಗುತ್ತದೆ. ಮತ್ತು ಎಲ್ಲ ಕರ್ಮ ಬಂಧನ ಬಿಟ್ಟು ಹೋಗುವವು. ಅದೇ ಚಿರ ಶಾಂತಿ, ಅದ್ವಿ ತೀಯ ಆನಂದ.

---

# ಕಂಕರೀ ಕಕ್ಕಯ್ಯ.

ಕಲ್ಯಾಣ ಪಟ್ಟಣದಲ್ಲಿ ಕಂಕರೀ ಕಕ್ಕಯ್ಯನೆಂಬ ಶಿವಶರಣನು ವಾಸವಾಡುತ್ತಿದ್ದನು. ಅವನು ದಿನಾಲು ಭಕ್ತರ ಮನೆಗಳಿಗೆ ಹೋಗಿ ಕಂಕರಿಯನ್ನು ನುಡಿಸುತ್ತ ದೇವರ ಭಜನೆ ಮಾಡುತ್ತ ಭಕ್ತರು ಕೊಟ್ಟು ದನ್ನು ತೆಗೆದುಕೊಂಡು ತನ್ನ ಉಪಜೀವನವನ್ನು ಸಾಗಿಸುತ್ತಿದ್ದನು. ಆದರಲ್ಲಿ ತನಗೆ ಉಳಿದುದನ್ನು ದಾಸೋಹ ಕಾರ್ಯಗಳಿಗೆ ಉಪಯೋ ಗಿಸುವನು. ಹೀಗೆ ಕಂಕರಿಯನ್ನು ನುಡಿಸುತ್ತ ಜೀವಿಸಿರುವದೇ ಅವ ನಿಗೆ ಶಿವನ ಸೇವೆಯಾಗಿತ್ತು. ಹೀಗೆ ಅವನು ಕಲ್ಯಾಣ ಪಟ್ಟಣದಲ್ಲಿ ತನ್ನ ಕಾಯಕವನ್ನು ಮಾಡುತ್ತ ಅನೇಕ ವರ್ಷಗಳ ವರೆಗೆ ಇದ್ದನು.

ಆದರೆ ಜನರು ಅವನೊಬ್ಬ ಶ್ರೇಷ್ಠ ಶಿವಶರಣನೆಂಬುದನ್ನು ತಿಳಿ ಯದೆ ಅವನಿಗೋಸ್ಕರ ಉಪೇಕ್ಷಾಭಾವವನ್ನು ತಾಳಿದವರಾಗಿದ್ದರು. ಆದರೆ ಕಕ್ಕಯ್ಯನು ಅದನ್ನು ಲಕ್ಷಿಸದೆ ತನ್ನ ಕಾಯಕದಲ್ಲಿ ನಿರತನಾ ಗಿದ್ದನು. ಅವನ ಈ ಭಕ್ತಿಭಾವವು ಕಡೆಗೆ ಶಿವನ ಮನಸ್ಸಿಗೆ ತಾಕಿತು. ಆಗ ಶಿವನು ಅವನ ಪರಿಚಯುವೂ ಅವನ ಮಹತ್ವವೂ ಪಟ್ಟಣದಲ್ಲಿ ಎಲ್ಲ ರಿಗೂ ತಿಳಿಯಬೇಕೆಂಬ ಕಾಂಕ್ಷೆಯನ್ನು ತಾಳಿ ಒಬ್ಬ ಜಂಗಮನ ವೇಷವನ್ನು ಧಾರಣ ಮಾಡಿ ಕಕ್ಕಯ್ಯನು ಯಾವಲ್ಲಿ ತನ್ನ ಕಂಕರಿ ಯನ್ನು ನುಡಿಸುತ್ತ ಇದ್ದನೋ ಅಲ್ಲಿಗೆ ಬಂದು ಅವನನ್ನು ಕಾಣು ವವನಾದನು.

ಕಕ್ಕಯ್ಯನು ತನ್ನನ್ನು ಹೀಗೆ ಕಂಡವನು ಪರಮಾತ್ಮನೆಂಬುದನ್ನು ಏನೂ ತಿಳಿದಿರಲಿಲ್ಲ. ಆದ್ದರಿಂದ ಅವನನ್ನು ಕಂಡರೂ ಕೂಡ ಅವನು ತನ್ನ ಕಂಕರಿಯನ್ನು ನುಡಿಸುತ್ತ ಅದರಲ್ಲಿಯೇ ಮಗ್ನನಾಗಿದ್ದನು. ಅವನು ನುಡಿಸಿದಂತೆ ಪರಮಾತ್ಮನೂ ಸಹ ಅದರ ಜೊತೆಯಲ್ಲಿ ಕುಣಿ ಯಲಿಕ್ಕೆ ಪ್ರಾರಂಭವಾಡಿದನು. ಪರಮಾತ್ಮನು ಗಾಯನ ಮತ್ತು ನೃತ್ಯ ಪ್ರಿಯನೆಂಬುದು ಪ್ರಸಿದ್ಧವು. ಗಾಯನದ ಮೂಲಕ ಮಾಡಿದ ಅವನ ಭಜನೆಯು ಅವನಿಗೆ ತೀವ್ರ ಗೋಚರವಾಗುತ್ತದೆ. ಆದ್ದರಿಂದ ಅಸಂಖ್ಯ ಶಿವಶರಣರು ಗಾಯನ ಮತ್ತು ನೃತ್ಯಗಳ ಮೂಲಕ ಪರಮಾತ್ಮನನ್ನು ಒಲಿಸಿಕೊಂಡಿರುತ್ತಾರೆ.

ಕಂಕರೀ ಕಕ್ಕಯ್ಯನು ತನ್ನ ಕಂಕರಿಯನ್ನು ಹೀಗೆ ನುಡಿಸುತ್ತಿರುವಾಗ್ಗೆ ಅದರ ಜೊತೆಯಲ್ಲಿ ಬೇರೊಬ್ಬನು ಕುಣಿಯುತ್ತಿರುವದನ್ನು ನೋಡಿ ಅವನಲ್ಲಿ ಭಕ್ತಿಯ ಭರವು ಮತ್ತಿಷ್ಟು ಹೆಚ್ಚಿತು, ಮತ್ತು ಅದು ಹೆಚ್ಚಿದ ಹಾಗೆ ಅವನು ನಾನಾವಿಧವಾಗಿ ಕಂಕರಿಯನ್ನು ನುಡಿಸಹತ್ತಿದನು. ಅದರಲ್ಲಿಯೇ ಅವನು ಮಗ್ನನಾಗಿ ಹೋದನು. ಹೊರಗಿನ ಅರಿವು ಅವನಿಗೆ ಏನೂ ಉಳಿಯಲಿಲ್ಲ. ಅವನಿಗೆ ಬಾರಿಸುವ ಶ್ರಮವೂ ಸಹ ಅನಿಸುತ್ತಿರಲಿಲ್ಲ. ಇದೇ ಸ್ಥಿತಿಯು ಪರಮಾತ್ಮನಿಗೂ ಕೂಡ ಉಂಟಾಯಿತು. ಅವನೂ ಕೂಡ ಕಂಕರಿಯ ದನಿಗೆ ಅನುಗುಣವಾಗಿ ಕುಣಿಯಹತ್ತಿದನು. ಹೀಗೆ ಇಡೀ ದಿವಸ ಅವರ ಬಾರಿಸುವಿಕೆಯೂ ಕುಣಿತವೂ ನಡೆದವು. ಪಟ್ಟಣದಲ್ಲಿಯ ಜನರು ಕುತೂಹಲವುಳ್ಳವರಾಗಿ ಬಹು ಸಂಖ್ಯೆಯಿಂದ ನೆರೆದು ಅವರನ್ನು ನೋಡುತ್ತ ನಿಂತರು. ಆದರೆ ಉಭಯತರಲ್ಲಿ ಯಾರು ಮೊದಲು ದಣಿಯುವರೋ ಎಂಬುದರ ಮೌಜನ್ನು ನೋಡುವದೇ ಅವರ ಉದ್ದೇಶವಾಗಿತ್ತು. ಆದರೆ ಬಹಿರಂಗದ ಅರಿವು ಇವರಿಬ್ಬರಿಗೂ ಇರಲಿಲ್ಲ. ಅಂದ ಬಳಿಕ ಅವರಿಗೆ ದಣಿವು ಆಗುವದು ಹೇಗೆ? ಜನರೇ ಬೇಸತ್ತು ಹೊರಟು ಹೋಗುತ್ತಿದ್ದರು.

ಕಂಕರಿಯ ರವವೂ ನೃತ್ಯವೂ ಆ ದಿನ ಹಗಲು ಮಾತ್ರವಲ್ಲ, ಇಡೀ ರಾತ್ರಿ ಸಹ ನಡೆಯಿತು. ಅದನ್ನು ಜನರು ನೋಡಿ ಆಶ್ಚರ್ಯಪಟ್ಟರು. ಉಭಯತರೂ ಹೆಚ್ಚಿನ ತರಗತಿಯ ಶಿವಭಕ್ತರೆಂದು ಅವರನ್ನು ಹೊಗಳಹತ್ತಿದರು. ಹೀಗೆ ಉಭಯತರು ಮೂರು ದಿನಗಳವರೆಗೆ ತಮ್ಮ ಬಾರಿಸುವಿಕೆಯನ್ನೂ ಕುಣಿತವನ್ನೂ ನಡಿಸಿದರು! ಕಂಕರೀ ಕಕ್ಕಯ್ಯನ ಈ ಅಗಾಧವಾದ ಭಕ್ತಿಯನ್ನು ಪರಮಾತ್ಮನು ಕಂಡು ಅವನು ಸಹ ಬೆರಗಾದನು. ಆಗ ಅವನು ವಿಚಾರಮಾಡಿದ್ದು—ಕಕ್ಕಯ್ಯನ ಮಹಿಮೆಯನ್ನು ಜನರ ಲಕ್ಷಕ್ಕೆ ತಂದಂತಾಯಿತು. ಇನ್ನು ಮೇಲೆ ಅವನ ಬಾರಿಸುವಿಕೆಯನ್ನು ಸಾಕು ಮಾಡಬೇಕು ಎಂಬ ಅಪೇಕ್ಷೆಯನ್ನು ತಾಳಿ ತಾನು ಸೋತವನಂತೆ ಧರೆಗೊರಗಿದನು. ಕಕ್ಕಯ್ಯನು ಇದನ್ನು ನೋಡಿದರೂ ಕೂಡ ಅವನನ್ನು ಬಿಡದೆ ಅವನ ಸೆರಗು ಹಿಡಿದು ಎಳೆಯಲು ಶಿವನು ಅವನಿಗೆ ಪ್ರತ್ಯಕ್ಷನಾದನು ಮತ್ತು ನಿನಗೆ ಏನು ಬೇಕು ಬೇಡೆಂದು ಅವನಿಗೆ ಕೇಳಿದನು. ಅದಕ್ಕೆ ಕಕ್ಕಯ್ಯನು—ನಿನ್ನ ಮೆಚ್ಚು ನಿನ್ನಲ್ಲಿರಲಿ. ಅದು ನನಗೆ ಬೇಡ. ಆದರೆ ಈ ಮೂರ

ದಿನ ನಾನು ಎಡೆಬಿಡದೆ ಕಂಕರೀ ನುಡಿಸಿದ್ದರ ಕಾಯಕವನ್ನು ನೀನು ನನಗೆ ಕೊಡತಕ್ಕದ್ದು. ನಿನಗೆ ಬೇಡುವದು ಇದೇ ಎಂದು ಹೇಳಿದನು.

ಅದಕ್ಕೆ ಶಿವನು ಅವನಿಗೆ— ನಿನ್ನೊಡನೆ ನಾನು ಕುಣಿದಿದ್ದೇನೆ. ಅದು ವ್ಯರ್ಥವೇ ಹೇಗೆ? ನಾನು ನಿನ್ನ ಕೂಡ ಕುಣಿದದ್ದರ ಕಾಯಕ ವನ್ನು ನೀನು ನನಗೆ ಕೊಡಬೇಕಲ್ಲವೇ ಎಂದು ಕೇಳಿದನು.

ಅದಕ್ಕೆ ಕಂಕರೀ ಕಕ್ಕಯ್ಯನು—ನಿನಗೆ ನಾನು ಕಾಯಕವನು ಕೊಡುವದು ಸಲ್ಲದು. ನೀನು ಊರೊಳಗೊಂದು ಮನೆಯನ್ನು ಕಟ್ಟು. ಆಗ ನಾನು ನಿನ್ನ ಮನೆಗೆ ಕಾಯಕಕ್ಕೆ ಬರುತ್ತೇನೆ. ಆಗ ನೀನು ನನ್ನೊಡನೆ ಕುಣಿದೆಯಾದರೆ, ನಿನಗೆ ಕಾಯಕ ಕೊಡುತ್ತೇನೆ. ಹೀಗೆ ಹೇಳಲು ಕಕ್ಕಯ್ಯನು ನುಡಿದದ್ದು ಯಥಾರ್ಥವೆಂದು ಶಿವನು ಒಪ್ಪಿ ಕೊಂಡು ಅವನಿಗೆ ತಾನು ಕೊಡತಕ್ಕ ಕಾಯಕವನ್ನು ಕೊಟ್ಟನು.

ಆಮೇಲೆ ಶಿವನು ಕಕ್ಕಯ್ಯನಿಗೆ—ನೀನು ಇನ್ನುಮೇಲೆ ಈ ಲೋಕ ದಲ್ಲಿರಬೇಡ. ನನ್ನಕೂಡ ಕೈಲಾಸಕ್ಕೆ ಬರಬೇಕು ಎಂದು ಕರೆಯಲು, ಕಕ್ಕಯ್ಯನು ಈ ಮರ್ತ್ಯಲೋಕವೇ ನನಗೆ ಘನತರವಾದದ್ದು. ನಿನ್ನ ಗಣಪದವಿಯೂ ನನಗೆ ಬೇಡ. ನಿನಗೆ ಬೇಕಾದರೆ, ನೀನೇ ನಿನ್ನ ಒಕ್ಕಲು ಸಹವಾಗಿ ಭಕ್ತರಿದ್ದಂಥ ಈ ಮರ್ತ್ಯಲೋಕಕ್ಕೆ ಬಾ. ಇಲ್ಲಿ ಮಹಿಮರಿ ದ್ದಾರೆ. ಅವರನ್ನು ನೀನು ಇಲ್ಲಿ ಕಾಣುವಿ, ನನಗೆ ಕೈಲಾಸವು ಬೇಡ ಎಂದೆ ನ್ನಲು ಶಿವನು ಮೆಚ್ಚಿ ಅವನಿಗೆ— ಭಕ್ತಿ ಎಂಬ ಐಶ್ವರ್ಯವನ್ನು ಉಪ ಭೋಗಿಸಲು ಭಕ್ತರೇ ಸಮರ್ಥರು, ಅವರೇ ಶ್ರೇಷ್ಠರು, ಎಂದು ನುಡಿ ಯುತ್ತ ಕೈಲಾಸಕ್ಕೆ ಹೊರಟು ಹೋದನು.

ಇತ್ತ ಕಕ್ಕಯ್ಯನು ಬಸವಾದಿ ಪ್ರಮಥರೊಡಗೂಡಿ ಕಲ್ಯಾಣ ಪಟ್ಟಣದಲ್ಲಿ ತನ್ನ ಕಂಕರೀ ಕಾಯಕವನ್ನು ಮಾಡುತ್ತ ತನ್ನ ಇಷ್ಟ ಲಿಂಗದಲ್ಲಿ ನಿರ್ವಯಲಾದನು.

ಕಾಯಕವು ಕೇವಲ ಜೀವನೋಪಾಯವಲ್ಲ. ಇದರಲ್ಲಿ ಕೆಲವು ತಾತ್ವಿಕಾರ್ಥಗಳಿವೆ. ಯಾರು ಶ್ರಮಜೀವಿಗಳೋ ಅವರಿಗಾಗಿ ಮಾತ್ರ ಕಾಯಕ ಮಾಡತಕ್ಕದ್ದೆಂಬ ಭಾವವು ಈ ಚಿಕ್ಕ ಕಥೆಯಲ್ಲಿದೆ. ಯಾರು

ಬೊಮ್ಮಯ್ಯನು ಹಿಂದಿನಿಂದ ತನ್ನ ಹೆಡಿಗೆಯಲ್ಲಿ ನೋಡುವಷ್ಟರಲ್ಲಿ ಒಳಗೆ ಬಿತ್ತುವ ಬೀಜಗಳು ಬಹಳ ಸ್ವಲ್ಪ ಉಳಿದಿದ್ದವು. ಅವುಗಳನ್ನಷ್ಟೆ ಅವನು ತೆಗೆದುಕೊಂಡು, ಅಲ್ಲಲ್ಲಿ ಬಿತ್ತಿ ಮನೆಗೆ ಹೊರಟುಬಂದನು

ಅವನು ಮನೆಗೆ ಬಂದ ಬಳಿಕ ತನ್ನೊಡನೆ ಪಾಲು ಕೂಡಿದ ಗೌಡರುಗಳು ನಡೆದ ಸಂಗತಿಗಳನ್ನು ತಿಳಿದು ಅವನಿಗೆ— ನೀನು ಹದ ತಪ್ಪಿ ಬೀಜ ಬಿತ್ತಿದೆ. ಇದ್ದ ಕಾಳುಗಳನ್ನೆಲ್ಲ ನೀನು ಯಾರಿಗೋ ಕೊಟ್ಟುಬಿಟ್ಟೆ. ನಾವು ಬರಗಾಲ ಗಿರಗಾಲ ಕೇಳುವವರಲ್ಲ. ನೀನು ನಮಗೆ ಹಾನಿ ಮಾಡಿದೆ. ಈ ಹಾನಿಯನ್ನು ನಾವು ಸಹಿಸುವವರಲ್ಲ. ನಮಗೆ ಬರತಕ್ಕ ಧಾನ್ಯವನ್ನು ನಿನ್ನ ಪಾಲಿನಲ್ಲಿ ಹಿಡಿದುಕೊಂಡೇ ಬಿಡುವೆವು ಎಂದು ಅವನಿಗೆ ಧಟ್ಟಿಸಿ ನುಡಿದರು. ಆದರೆ ಬೊಮ್ಮಯ್ಯನು— ಈ ಕಠಿಣಕಾಲದಲ್ಲಿ ನಾವು ದಾನಧರ್ಮಮಾಡಬೇಕು. ನಮ್ಮದೆಲ್ಲ ಶಿವನ ಸೊಮ್ಮು. ಅವನದನ್ನು ಅವನಿಗೆ ಒಪ್ಪಿಸಬೇಕು ಎಂದು ಅವನು ಎಷ್ಟು ಹೇಳಿದರೂ ಅವರು ಕೇಳದೆಹೋಗಲು ಶಿವನೇ ನನ್ನನ್ನು ಕಾಯಲಿ ಎಂದು ಅಂದುಕೊಂಡು ಆ ಗೌಡರುಗಳಿಗೆ ಏನೂ ಅನ್ನದೆ ಸಮಾಧಾನ ಚಿತ್ತದಿಂದ ಇದ್ದನು.

ಆಮೇಲೆ ಬೊಮ್ಮಯ್ಯನು ಎಲ್ಲರಂತೆ ಎಲ್ಲ ಹೊಲಗಳಲ್ಲಿ ಕೃಷಿಯ ಕಾರ್ಯಗಳನ್ನು ಮಾಡುತ್ತ ಬಂದನು. ಕಡೆಗೆ ಆಶ್ಚರ್ಯವಾದದ್ದೇನೆಂದರೆ, ಅವನು ಬಿತ್ತಿದ ಹೊಲಗಳಲ್ಲಿ ಎಷ್ಟುಮಾತ್ರವೂ ಬರಿದು ಸ್ಥಳವಿಲ್ಲದೆ ಎಲ್ಲ ಕಡೆಗೂ ಸಸಿಗಳೆದ್ದಿದ್ದವು. ಅವು ಮುಂದೆ ಚನ್ನಾಗಿ ಬೆಳೆದು ಒಂದಕ್ಕೆ ಇಮ್ಮಡಿ ಮುಮ್ಮಡಿಯಾಗಿ, ಆ ವರ್ಷ ಹಿಂದಿನ ಎಲ್ಲ ವರ್ಷಗಳಿಗಿಂತಲೂ ಹೆಚ್ಚಿಗೆ ಕಾಳು ಬಂದವು. ಬ್ರಹ್ಮಯ್ಯನು ಬೆಳೆದ ದವಸದಲ್ಲಿ ರಾಜನಿಗೆ ಕೊಡತಕ್ಕದ್ದನ್ನು ಅವನಿಗೆ ಕೊಟ್ಟು ಉಳಿದುದನ್ನು ಹುಮುಗಾರರಿಗೆ ಪೂರ್ಣವಾಗಿ ಕೊಟ್ಟು ತನಗುಳಿದ ಧಾನ್ಯದಲ್ಲಿ ಆ ವರುಷ ಅವನು ಅನಂತ ದಾಸೋಹ ಕಾರ್ಯಗಳನ್ನು ನಡಿಸಿದನು. ಜನರೆಲ್ಲರು ದಾನಮಾಡಿದ್ದುದು ತಪ್ಪಲಾರದೆಂದು ಬೊಮ್ಮಯ್ಯನನ್ನು ಬಹಳ ಸ್ತುತಿಸುವವರಾದರು.

ಈ ಪ್ರಕಾರ ಬೊಮ್ಮಯ್ಯನು ತನ್ನ ಗ್ರಾಮದಲ್ಲಿ ಒಕ್ಕಲುತನ ಕಾಯಕವನ್ನು ಮಾಡುತ್ತ ತನ್ನ ಕಾಯಕದಿಂದ ಬಂದುದನ್ನು ದಾನ

ಧರ್ಮವಾಡುತ್ತ ತನ್ನ ಲಿಂಗದಲ್ಲಿ ಬಯಲಾದನು. ಜನರು ಅವನಿಗೆ 'ಶಿವಶರಣ ಸೇವಾಚಾರ್ಯ' ಎಂಬ ಹೆಸರನ್ನಿಟ್ಟು ಕರೆಯಹತ್ತಿದರು. ಈ ಪ್ರಕಾರ ಇಳಿಹಾಳಿ ಬೊಮ್ಮಯ್ಯನು ಶಿವಶರಣರಲ್ಲಿ ಬಹಳ ಪ್ರಸಿದ್ಧ ನಾಗಿದ್ದಾನೆ. ಅವನ ಹೆಸರು ಗಣಸಹಸ್ರದಲ್ಲಿ ಬಂದಿದೆ.

ಬ್ರಹ್ಮಯ್ಯನ ದೇವಾಲಯವು ಈಗಲೂ ಇಲ್ಲಾಳ ಗ್ರಾಮದಲ್ಲಿರು ತ್ತದೆ. ಅಲ್ಲಿಯ ಜನರು ಅದಕ್ಕೋಸ್ಕರ ಬಹಳ ಭಕ್ತಿಭಾವವನ್ನು ತಾಳಿ ನಡೆದುಕೊಳ್ಳುತ್ತಾರೆ.

ಇಳಿಹಾಳಿ ಬ್ರಹ್ಮಯ್ಯ, ಕೊಂಡುಗುಳಿಯ ಕೇಶಿರಾಜ[೧], ಬಾಹೂರು ಬ್ರಹ್ಮಯ್ಯ[೨], ತೆಲುಗು ಜೊಮ್ಮಯ್ಯ, ಇವರೆಲ್ಲರೂ ಪೆರ್ಮಾಡಿ ರಾಜನ ಕಾಲದಲ್ಲಿದ್ದವರು. ಚಾಲುಕ್ಯರಲ್ಲಿ ಅತ್ಯಂತ ಪ್ರಸಿದ್ಧಿಯನ್ನು ಹೊಂದಿದ ವಿಕ್ರಮಾದಿತ್ಯ ರಾಜನು ೧೦೭೬ ರಿಂದ ೧೧೨೬ ರ ವರೆಗೆ ಆಳಿದನು. ಈ ರಾಜನಿಗೆ 'ಪೆರ್ಮಾಡಿ' ಎಂಬ ಹೆಸರಿದ್ದಿತು. ಆದ್ದರಿಂದ ಇಳಿಹಾಳಿ ಬ್ರಹ್ಮಯ್ಯನು ಬಸವೇಶ್ವರನಕಿಂತಲೂ ಸ್ವಲ್ಪಕಾಲ ಹಿಂದಿನವನಾಗುತ್ತಾನೆ.

ಈ ಕಥೆಯಲ್ಲಿ ವೀರಶೈವನು ಚನ್ನಾಗಿ ದುಡಿಯಬೇಕು, ಅವನು ದಾಸೋಹಭಾವದಿಂದ ಇರಬೇಕು, ತನಗೆ ಬಂದುದನ್ನು ದಾನ ಧರ್ಮ ವಾಡಬೇಕು, ಹೀಗೆ ಆಚರಿಸಿದಲ್ಲಿ ಅವನು ಪ್ರಸಾದಿ ಸ್ಥಲದವನು, ಶಿವಾ ನುಭವಿಯು ಈ ರೀತಿ ಆಚರಿಸಬೇಕು ಎಂಬ ವಿಷಯಗಳು ಬಂದಿವೆ.

---

(೧) ಶಿವಶರಣರ ಚರಿತ್ರೆಗಳು ಭಾಗ ೨, ಪುಟ ೯೯. (೨) ಶಿವಶರ ಣರ ಚರಿತ್ರೆಗಳು ಭಾಗ ೧, ಪುಟ ೧೧.

# ವೀರಸಂಗಯ್ಯ.

ಬಿದಿರುಕೊಟ್ಟೆ ಎಂಬ ಗ್ರಾಮವು ಈಗ ನಿಜಾಮನ ರಾಜ್ಯದಲ್ಲಿದೆ. ಅದಕ್ಕೆ ಬೀದರ ಅಥವಾ ಬೇದರ ಎಂತಲೂ ಸಾಮಾನ್ಯ ಜನರು ಅದಕ್ಕೆ ಬಿದರುಕೋಟೆ, ಬಿದಿರಿ ಎಂತಲೂ ಕರೆಯುತ್ತಾರೆ. ಅದು ಈಗ ಜಿಲ್ಲೆಯ ಸ್ಥಳವಾಗಿದ್ದು ಕಲ್ಯಾಣ ಪಟ್ಟಣದ ಪೂರ್ವಕ್ಕೆ ೪೦---೪೫ ಮೈಲುಗಳ ಮೇಲೆ ಇರುತ್ತದೆ. ಇದು ಪೂರ್ವಕಾಲದಲ್ಲಿ ಶಿವಭಕ್ತರ ಸ್ಥಾನವಾಗಿತ್ತು. ಇಲ್ಲಿ ಕಾಮಣ್ಣನೆಂಬ ಭಕ್ತನು ಸೋಮಲದೇವಿ ಎಂಬ ತನ್ನ ಹೆಂಡತಿಯೊಡನೆ ಶಿವಾಚಾರ ನಿರತನಾಗಿ ವಾಸಮಾಡು ತ್ತಿದ್ದನು. ಅವನಿಗೆ 'ವೀರಸಂಗಯ್ಯ'ನೆಂಬ ಪುತ್ರನು ಜನಿಸಿದನು. ಅವರೆಲ್ಲರೂ ಲಿಂಗಧಾರಿಗಳು, ಗುರುಲಿಂಗ ಜಂಗಮ ನಿಷ್ಠರು. ಇವ ರಲ್ಲಿ ವೀರಸಂಗಯ್ಯನು ಉಜ್ವಲಭಕ್ತನು, ಶೂರನು, ಭಕ್ತ ನಿಂದೆ ಯನ್ನು ಎಂದಿಗೂ ತರಹರಿಸನು, ಗಣಾಚಾರಿಯು. ಇದರಿಂದ ಇವನು ಪಟ್ಟಣದಲ್ಲಿ ಪ್ರಸಿದ್ಧಿಯನ್ನು ಹೊಂದಿ ಭಕ್ತಾಗ್ರಗಣ್ಯನೆಂದು ಹೆಸರುವಾ ಸಿಯಾದನು.

ಹೀಗಿರುವಲ್ಲಿ ಕೋವೂರೆಂಬ ಪಟ್ಟಣವಿದ್ದು ಅಲ್ಲಿ ಭೀಮಯ್ಯನೆಂಬ ಭಕ್ತನು ತನ್ನ ಹೆಂಡತಿ ಕಾಮಲದೇವಿಯೊಡನೆ ಶಿವಭಕ್ತಿಯುಳ್ಳವನಾಗಿ ವಾಸಮಾಡಿಕೊಂಡಿದ್ದನು. ಅವನಿಗೆ ಚಂದ್ರಾಣಿದೇವಿ ಎಂಬ ಮಗಳು ಇದ್ದಳು. ಅವಳು ಕೇವಲ ಶಿವಭಕ್ತೆಯು. ರೂಪು ಲಾವಣ್ಯದಲ್ಲಿ ಮಿಗಿಲಾ ದವಳು, ಅತ್ಯಂತ ಸೌಂದರ್ಯವತಿಯು. ಹೀಗಿರುವಲ್ಲಿ ಭೀಮಯ್ಯನು ಅವಳನ್ನು ನಾಡಿನಲ್ಲಿ ಅತ್ಯಂತ ಪ್ರಸಿದ್ಧಿಯನ್ನು ಹೊಂದಿದ್ದ ವೀರಸಂ ಗಯ್ಯನಿಗೆ ಕೊಟ್ಟು ಲಗ್ನ ಮಾಡಬೇಕೆಂದು ಬಯಸಿದನು. ಮತ್ತು ಆ ಪ್ರಕಾರ ಉಭಯತರಲ್ಲಿ ಮಾತುಕಥೆಗಳೂ ನಡೆದವು.

ಈ ಕೋವೂರು ಪಟ್ಟಣದಲ್ಲಿ ಮಾಧವನೆಂಬ ವಿಷ್ಣು ಭಕ್ತನು ಈ ಕಾಲದಲ್ಲಿ ರಾಜ್ಯವಾಳುತ್ತಿದ್ದನು. ಅವನಿಗೆ ಭಾಸ್ಕರನೆಂಬ ಮಗನಿ ದ್ದನು. ಇವನು ತನ್ನ ಗ್ರಾಮದಲ್ಲಿದ್ದ ಭೀಮಯ್ಯನು ಚಂದ್ರಾಣಿಯನ್ನು ವೀರಸಂಗಯ್ಯನಿಗೆ ಕೊಟ್ಟು ಲಗ್ನ ಮಾಡುವವನಿದ್ದಾನೆಂಬ ವಾರ್ತೆ ಯನ್ನು ಕೇಳಿ, ಅವನು ತನ್ನ ಒಬ್ಬ ದಾದಿಯನ್ನು ಭೀಮಯ್ಯನ

# ನಿವೇದನೆ.

ಶಿವಾನುಭವ ಪತ್ರಿಕೆಯು ಪ್ರತಿ ತಿಂಗಳು ೧೫ನೇ ತಾರೀಖಿಗೆ ಪ್ರಸಿದ್ಧ ವಾಗುತ್ತಿದ್ದು ಅದನ್ನು ಯಾವಾಗಲೂ ಅದೇ ತಾರೀಖಿಗೆ ಹೊರಡಿಸುತ್ತಾ ಇದ್ದೇವೆ. ಆದರೆ ಈ ತಿಂಗಳಲ್ಲಿ ವಿಜಾಪುರ ಪಟ್ಟಣದಲ್ಲಿಯ ಪ್ರೆಸ್ಸಿನ ಕೆಲಸ ಗಾರರು 'ಸಂಪು' ಹೂಡಿದ್ದರಿಂದ ಪತ್ರಿಕೆಯನ್ನು ಈ ತಾರೀಖಿಗೆ ಹೊರಡಿ ಸಲಿಕ್ಕಾಗದ್ದಕ್ಕೆ ನಾವು ವಿಷಾದಿಸುತ್ತೇವೆ. ಆದರೆ ಈ 'ಸಂಪು' ಈಗ ನಿಲ್ಲಿ ಸಲ್ಪಟ್ಟದ್ದರಿಂದ ಪತ್ರಿಕೆಯು ಎಂದಿನಂತೆ ಸಕಾಲದಲ್ಲಿ ಹೊರಡುವದು. ಹೀಗೆ ತಡವಾದದ್ದಕ್ಕೆ ವಾಚಕರು ಕ್ಷಮಿಸಬೇಕು.

ಮ್ಯಾನೇಜರ- **ಶಿವಾನುಭವ**

# ಸೂಚನೆ.

ಈಚಿಗೆ ಕಾಗದದ ಕೊರತೆಯು ಹೆಚ್ಚೆಚ್ಚಿಗೆ ಉಂಟಾಗಹತ್ತಿರುತ್ತದೆ. ಇದು ಬ್ರಿಟಿಶ್ ಇಲಾಖೆಗಳಲ್ಲಿ ಹೆಚ್ಚಿಗೆ ಭಾಸವಾಗುತ್ತಿದ್ದು ಕಾಗದವನ್ನು ದೊರಕಿಸುವದು ಬಹು ಕಷ್ಟವಾಗಹತ್ತಿದೆ. ಕೆಲಸಗಾರರ ವೇತನವನ್ನೂ ಬಹಳ ಹೆಚ್ಚಿಗೆ ಬೆಳಿಸಬೇಕಾಗಿ ಬಂದಿದೆ. ಆದ್ದರಿಂದ ಪತ್ರಿಕೆಯ ಚಂದಾ ಹಣವು ಈ ವರೆಗೆ ೪-೮-೦ ಇದ್ದದ್ದನ್ನು ಮುಂದಿನ ತಿಂಗಳಿನಿಂದ ೪-೧೨-೦ ತಾತ್ಪೂರ್ತಿಕವಾಗಿ ಮಾಡಲ್ಪಟ್ಟಿದೆ. ಹೀಗೆ ಅನಿವಾರ್ಯ ವಾಗಿ ಮಾಡಬೇಕಾದದ್ದಕ್ಕೆ ನಾವು ವಿಷಾದಿಸುತ್ತೇವೆ.

ಸಂಪಾದಕ— **ಶಿವಾನುಭವ.**

# BOOK-POST.

R. N B. 2554

*From,*
Shivanubhava
Office
Bijapur.

ಶ್ರೀ ರಾ|| ರಾ||

ಚನಮಲ್ಲಪ್ಪ ಸಿದ್ದಪ್ಪ ಬಡೇವಿ
ಪೋ. ಬನಹಟ್ಟಿ
ಸ್ಟೇ. ಕುಡಚಿ
(M. S. M. Ry.)

INDIA POSTAGE 3 PS

ಈ ಪತ್ರಿಕೆಯನ್ನು ಇದರ ಸಂಪಾದಕ [illegible] ಜ.
ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ವಿಜಾಪು[illegible]ರದಲ್ಲಿ
ತಮ್ಮ ಹಿತಚಿಂತಕ ಪ್ರಿಂ. ಪ್ರೆಸ್ಸಿನಲ್ಲಿ [illegible] ಪ್ರಸಿದ್ಧಿ
ಸಿದರು.



ಸಂಪುಟ ೨೦ ] ಜೂನ ೧೯೪೬. [ ಸಂಚಿಕೆ ೯

## ವಿಷಯಾನುಕ್ರಮಣಿಕೆ.

# ಶಿವಾನುಭವ

ವರ್ಷ ೨೦ | ಜೂನ ೧೯೪೬ | ಸಂಚಿಕೆ ೯


## ಸ್ಥಾವರ ಲಿಂಗಗಳು.


**(ಲೇಖಕ:-- ಶ್ರೀ ಸಿ. ನಾ. ಮಹಾಂತಣ್ಣವರ ನಿವೃತ್ತ ಅಸಿ॥ ಡೆಪ್ಯುಟಿ ಎಜ್ಯು- ಇನಸ್ಪೆಕ್ಟರರು ಪುಣೆ.)**


ವೀರಶೈವ ಸಮಾಜ ಸಂಘಟನೆಯನ್ನು ಸಮೀಕ್ಷಿಸಲು ಶಿವಯೋಗಿಗಳ–ಶಿವಶರಣರ ಅಂತರಂಗದ ನೋಟಗಳೇ ಬಾಹ್ಯದಲ್ಲಿ ಬಿಂಬ ಪ್ರತಿಬಿಂಬವಾಗಿ ಕಂಗೊಳಿಸುವವು. ಸನಾತನವಾದ ಈ ಧರ್ಮದಲ್ಲಿ ಯುಗಯುಗಾಂತರವಾಗಿ ಯೋಗಗಳಲ್ಲಿ ಪರಮಯೋಗವಾದ ಶಿವಯೋಗವು ಬೀಜವೃಕ್ಷನ್ಯಾಯದಂತೆ ಆಗಮಿಸುತ್ತ ಬಂದಿದೆ. ಅನಾದಿಭಕ್ತನೂ ಆದಿಜಂಗಮವೂ ಇವರೀರ್ವರ ಕುಳಸ್ಥಳಗಳೊಂದಾಗಿ ನಿಂತ ನಿಲುವು ಜ್ಯೋತಿರಾಕಾರವಾಗಿ ಹೊರಹೊಮ್ಮಿದ ಜ್ಯೋತಿರ್ಲಿಂಗವು ಬಾಹ್ಯದಲ್ಲಿ ಇಡೀ ಭರತಖಂಡವನ್ನೇ ಬೆಳಗುವ ದ್ವಾದಶಸೂರ್ಯರನ್ನು ಅನುಕರಿಸುವ ದ್ವಾದಶಜ್ಯೋತಿರ್ಲಿಂಗಗಳಾಗಿ ಪ್ರಭಾತ ಕಾಲದಲ್ಲಿ ಶಿವಭಕ್ತರ ಹೃದಯಾಕಾಶದಲ್ಲಿ ಪಠನದ ಮೂಲಕ ಒಡಮೂಡುವವು. ಈ ಜ್ಯೋತಿರ್ಲಿಂಗಗಳಲ್ಲಿ ಕೆಲವು ನಮ್ಮ ಮತದ ಪೂರ್ವಾಚಾರ್ಯರ ಪಂಚಪೀಠಗಳು. ಅವರ ವ್ಯಷ್ಟಿರೂಪವಾದ ಇಷ್ಟಲಿಂಗಗಳೇ ಸಮಷ್ಟಿರೂಪಾಗಿ ಆಯಾ ಪೀಠಗಳ ಹತ್ತರದ ಶಿವಾಲಯಗಳಲ್ಲಿ ಶಿವಲಿಂಗಗಳಾಗಿ ನಿಂತು ಯಾತ್ರಿಕರ ಭಕ್ತ್ಯಾನುಗುಣವಾಗಿ ಫಲಪದಂಗಳನ್ನೀಯುತ್ತಿರುವವು.

ಸದ್ಭಕ್ತನು ಆಚರಿಸುವ ಪಂಚಾಚಾರಗಳೇ ಮೂರ್ತಿಗೊಂಡವೆಂಬಂತೆ ಸಮಾಜದಲ್ಲಿ ಭೃತ್ಯಾಚಾರವನ್ನನುಸರಿಸುವ ಮಠಪತ್ತಿ

ಗಳೂ ಸದಾಚಾರವನ್ನು ತೋರ್ಪಡಿಸುವ ಮಠದಯ್ಯಗಳೂ ಲಿಂಗಾಚಾರವನ್ನು ಲಿಂಗದೊಳು ನೆಲೆಗೊಳಿಸುವ ಬೃಹನ್ಮಠಾಧೀಶರೂ ಗಣಾಚಾರವನ್ನು ಸಂದರ್ಶಿಸುವ ಗಣಾಚಾರಿಗಳೂ ಶಿವಾಚಾರವನ್ನು ಸದುಹೃದಯದೊಳು ಒಡಮೂಡಿಸುವ ಶ್ರೀ ಜಂಗಮಮೂರ್ತಿಗಳೂ ಗ್ರಾಮಗ್ರಾಮಾಂತರಗಳಲ್ಲಿ ಇರುವರು. ಆದರೆ ಈಚೆಗೆ ಅವರಲ್ಲಿ ತಮ್ಮ ಕರ್ತವ್ಯಜ್ಞಾನವು ಸಾಕಷ್ಟು ಇಲ್ಲದ ಕಾರಣವು ಬೇರೆ.

ಸದ್ಭಕ್ತನು ತನ್ನಲ್ಲಿ ಅಂತರಂಗದ ಅಷ್ಟಾವರಣಗಳನ್ನು ಅರಿದು ಆಚರಿಸುತ್ತಿದ್ದರೂ ಬಹಿರಂಗದ ಅಷ್ಟಾವರಣಗಳನ್ನು ಬಿಡಲು ಬರಲಾರದು. ಅಂತೇ ಬಹಿರಂಗದ ತನುವಿನಲ್ಲಿ ಗುರುವಿಗೆ ಆತನ ಸೇವೆಯು. ಮನದಲ್ಲಿ ಲಿಂಗಸನ್ನಿಹಿತವಾದರೂ ಕರದಲ್ಲಿ ಲಿಂಗಾರ್ಚನೆ ಇರಬೇಕು. ಜ್ಞಾನದಲ್ಲಿ ಜಂಗಮಾಚಾರವಿದ್ದರೂ ಬಾಹ್ಯದಲ್ಲಿ ಜಂಗಮದಾಸೋಹವಿರಬೇಕು. ನಿತ್ಯವಾದ ಪಾದೋದಕವು ಸೂಕ್ಷ್ಮದಲ್ಲಿದ್ದರೂ ಬಹಿಃಕ್ರಿಯಾ ಪಾದೋದಕವು ಬೇಕು. ಅಚ್ಚಪ್ರಸಾದ ನಿಚ್ಚಪ್ರಸಾದಾನುಭವವಿದ್ದರೂ ಆಚಾರದಲ್ಲಿ ನಿಜಪ್ರಸಾದದ ಭಾವವೂ ಮೂಲಮಂತ್ರವೂ ಭಸ್ಮರುದ್ರಾಕ್ಷಿಗಳ ಧಾರಣವೂ ಇರಲೇಬೇಕು. ಮತ್ತು ಶುಭಾಶುಭಕಾರ್ಯಗಳಲಿ ಗುರುವು ನಡುಕಟ್ಟಿ ನಿಂತುಕೊಂಡು ಆಯಾಕಾರ್ಯಗಳನ್ನು ಭಕ್ತನಿಗೋಸ್ಕರ ವಿಧಾನ ಪೂರ್ವಕ ಜರುಗಿಸಬೇಕು. ಮನೆಯ ಮುಖ್ಯಸ್ಥನ ಇಂಥ ಕಾರ್ಯಗಳಲ್ಲಿ ವೀರಶೈವ ಸಮಾಜವು ಅರ್ಥಾತ್ ಊರ ದೈವದವರು ತಮ್ಮ ಸಹಕಾರ ಸಹಾನುಭೂತಿಗಳನ್ನು ತೋರಿಸಬೇಕು.

ಶಿವಯೋಗಿಯು ತನ್ನೊಳಗೆ ಶ್ರೀಗಿರಿಯನ್ನೂ ಶ್ರೀಶೈಲಮಲ್ಲಿಕಾರ್ಜುನನನ್ನೂ ಅಡಕೇಶ್ವರನನ್ನೂ ಪಾತಾಳ ಗಂಗೆಯನ್ನೂ ಕದಳೀಬನವನ್ನೂ ಕಂಡು ಬಾಹ್ಯದಲ್ಲಿ ಕಲಿಯುಗದ ಕೈಲಾಸವೆಂದು ಹೇಳಿಸಿಕೊಳ್ಳುವ ಶ್ರೀಶೈಲಪರ್ವತವನ್ನೂ ಶಿಖರೇಶ್ವರನನ್ನೂ ಅಡಕೇಶ್ವರನನ್ನೂ ಶ್ರೀಮಲ್ಲಿಕಾರ್ಜುನ ಸ್ವಯಂಭು ಜ್ಯೋತಿರ್ಲಿಂಗವನ್ನೂ ನಾವೆಲ್ಲರು ಕಾಣುತ್ತೇವೆ. ಶ್ರೀಶೈಲ ಯಾತ್ರೆಗೆ ಹೋಗಿ ಅಲ್ಲಿ ತೀರ್ಥಸ್ನಾನದಿಂದ ಪಾಪಪರಿಹಾರವನ್ನೂ ಲಿಂಗ ದರ್ಶನದಿಂದ ಶಾಂತಿಸುಖಸಮಾಧಾನಗಳನ್ನೂ ಅಲ್ಲಿರುವ ಜಂಗಮಮೂರ್ತಿಗಳ ಪಾದಪೂಜೆಯಿಂದ ತೀರ್ಥಪ್ರಸಾದವನ್ನೂ ಹೊಂದುತ್ತೇವೆ. ಹಿರಿಯರು ಪ್ರತಿಯೊಂದು ಗ್ರಾಮ

ದಲ್ಲಿ ಮಲ್ಲಿಕಾರ್ಜುನ ಗುಡಿಯನ್ನು ಕಟ್ಟಿ ಲಿಂಗಪ್ರತಿಷ್ಠೆಯನ್ನು ಮಾಡಿರುವರು. ಭಕ್ತರು ತಮ್ಮ ತಮ್ಮ ಮನೆಯ ದೇವರೆಂದು ಭಾವಿಸಿ ಜಗುಲಿಯ ಮೇಲೆ ಮಲ್ಲಿಕಾರ್ಜುನ ಲಿಂಗವನ್ನು ಬೆಳ್ಳಿಯಿಂದ ಅಥವಾ ಹಿತ್ತಾಳಿಯಿಂದ ಮಾಡಿಸಿ ಶಿವಕಳೆ ತುಂಬಿಸಿ ಪೂಜೆಗೆಯ್ಯುವರು. ಮನೆ ದೇವರು ಮನದೇವರು ಕುಲದೇವರು ಗ್ರಾಮದೇವರು ಇಡೀ ಸಮಾಜ ದೇವರಾಗಿ ಶ್ರೀ ಮಲ್ಲಿಕಾರ್ಜುನ ಲಿಂಗವು ಪೂಜೆಗೊಳ್ಳುತ್ತಾ ಇದೆ. ಸೊನ್ನಲಾಪುರದ ಶ್ರೀ ಸಿದ್ಧರಾಮನೂ ಮಹಾದೇವಿಯಕ್ಕನೂ ಶ್ರೀಶೈಲವನ್ನು ಕಂಡು ಯಾತ್ರೆಮಾಡಿ ಮುಂದೆ ಶ್ರೀಗುರುಕೃಪೆಯಿಂದ ತಮ್ಮ ಇಷ್ಟಲಿಂಗದಲ್ಲಿ ಮಲ್ಲಿಕಾರ್ಜುನ ಲಿಂಗವನ್ನು ಕಂಡವರಾಗಿದ್ದಾರೆಂಬದು ಪ್ರಸಿದ್ಧವು. ಮತ್ತು ಕೆಳಗಿನ ಅವರ ವಚನಗಳು ಇದೇ ಭಾವವನ್ನು ವ್ಯಕ್ತಮಾಡುತ್ತವೆ.

"ಕಣ್ಗೆ ಸತ್ವರಜತಮವೆಂಬ ತಿಮಿರವ ಕವಿದವರು ಗುರುವನೇ ಉಪಧಾವಿಸಿ ಕಣ್ಗೆ ಔಷಧಿಯ ಬೇಡುವರಯ್ಯಾ ॥ಶ್ಲೋಕ॥ ಅಜ್ಞಾನ ತಿಮಿರಾಂಧಸ್ಯ ಜ್ಞಾನಾಂಜನ ಶಲಾಕಯಾ । ಚಕ್ಷೂರುನ್ಮೀಲಿತಂ ಏನ ತಸ್ಮೈ ಶ್ರೀಗುರವೇ ನಮಃ ॥ ಎಂದುದಾಗಿ ಶಿವಜ್ಞಾನವೆಂಬ ಅಂಜನವ ನಚ್ಚಿ ತೋರುವೆ ಕಪಿಲಸಿದ್ಧ ಮಲ್ಲಿಕಾರ್ಜುನ ಲಿಂಗವು."

"ಶ್ರೀಹರನೆ ನೀನೆನಗೆ ಗಂಡನಾಗಬೇಕೆಂದು ಅನಂತಕಾಲ ತಪಸಿದ್ದೆ ನೋಡಾ. ಹಸೆಯ ಮೇಲಣ ಮಾತು ಬೆಸಗೊಳಲಟ್ಟಿದರೆ ಶಶಿಧರನ ಹತ್ತಿರಕ್ಕೆ ಕಳುಹಿದರೆಮ್ಮವರು. ವಿಭೂತಿಯನೇ ಹೂಸಿ ಕಂಕಣವನೇ ಕಟ್ಟಿದರು ಶ್ರೀಮಲ್ಲಿಕಾರ್ಜುನನು ತನಗೆ ನಾನಾಗಬೇಕೆಂದು."

ಬಸವಾದಿಪ್ರಮಥರೂ ಪೂರ್ವ ಪುರಾತನರೂ ಲಿಂಗಾಂಗಸಾಮರಸ್ಯದಲ್ಲಿ "ಋತಂ ಸತ್ಯಂ ಪರಬ್ರಹ್ಮ ಪುರುಷಂ ಕೃಷ್ಣಪಿಂಗಲಂ । ಊರ್ಧ್ವರೇತುಂ ವಿರೂಪಾಕ್ಷಂ ವಿಶ್ವರೂಪಾಯವೈ ನಮಃ" ಎಂಬ ಮಂತ್ರಪೂರ್ವಕವಾಗಿ ಒಕ್ಕು ಮಿಕ್ಕಪ್ರಸಾದವನ್ನು ಗ್ರಹಿಸುವರು. ಆ ಮಿಕ್ಕ ಪ್ರಸಾದರೂಪವಾದ ವಿರೂಪಾಕ್ಷಲಿಂಗವು ಬಹಿರಂಗವಾಗಿ ಪಂಪಾಕ್ಷೇತ್ರದಲ್ಲಿ ಇಂಪಾಗಿ ಸೊಂಪಾಗಿ ಪೂಜೆಗೊಳ್ಳುವದು. ಹಂಪೆಯ ಹರಿಹರದೇವ ಕವಿಯು ವಿರೂಪಾಕ್ಷಲಿಂಗನ ನೆನಹಿನಿಂದ ಪುರಾತನರ ಪ್ರಖ್ಯಾತ ರಗಳೆಗಳನ್ನೂ ರಚಿಸಿರುವನು. ಶ್ರೀ ವಿರೂಪಾಕ್ಷಲಿಂಗನ ಭಕ್ತರು ತಮ್ಮ

ತಮ್ಮ ಗ್ರಾಮದ ಶಿವಾಲಯಗಳಲ್ಲಿಯೂ ಮನೆಯ ಜಗುಲಿಗಳಲ್ಲಿಯೂ ಮನದಲ್ಲಿಯೂ ಮೂರ್ತಿಗೊಳಿಸಿ ಪೂಜಾಸ್ತೋತ್ರಗಳನ್ನು ಮಾಡುವ ದನ್ನು ಕಣ್ಣಾರೆ ನೋಡುತ್ತೇವೆ.

ಬಸವಣ್ಣನಾದರೂ ಬಾಗವಾಡಿಯಿಂದ ಕಪ್ಪಡಿಸಂಗಮಕ್ಕೆ ಬಂದು ಕೆಲವು ದಿವಸ ಸ್ಥಾವರಲಿಂಗವಾದ ಶ್ರೀ ಸಂಗಮೇಶನ ಪೂಜಾದಿಗಳನ್ನು ಭಕ್ತಿಯಿಂದ ಮಾಡಿದನು. ಆ ಸಂಗಮನೇ ಜಂಗಮವಾಗಿ ಬಂದು ಬಸವನಿಗೆ ವೀರಶೈವ ದೀಕ್ಷೆಯನ್ನಿತ್ತಿರುವನು. ಬಸವಣ್ಣನು ತನ್ನ ಕ್ರಿಯಾಚರಣೆಯಲ್ಲಿ ಕಾಣುತ್ತಿದ್ದ ಸಂಗಮನ ಸಾಕಾರವೇ ಅನಾದಿ ಯಿಂದ ಕೂಡಲಸಂಗಮದೇವನಾಗಿ ಸಂಗಮಕ್ಷೇತ್ರದಲ್ಲಿ ಸ್ವಯಂಭು ಲಿಂಗವಾಗಿ ಕೃಷ್ಣಾ ಮಲಪ್ರಭಾ ನದಿಗಳ ಸಂಗಮವಾದಾಗಿನಿಂದ ಕಂಗೊಳಿಸುತ್ತಿರುವನು. ಅದೇ ಸಂಗಮೇಶ್ವರನು ಪ್ರತಿಗ್ರಾಮದ ಶಿವಾ ಲಯಗಳಲ್ಲಿಯೂ ಭಕ್ತರ ದೇವರ ಮನೆಗಳಲ್ಲಿಯೂ ಒಡಮೂಡಿ ಪೂಜಾ ದಿಗಳನ್ನು ಸ್ವೀಕರಿಸುವನು.

ಇದಲ್ಲದೆ ಬಸವಣ್ಣನ ಗುಡಿಗಳು ಎಷ್ಟೋ ಕಡೆಗೆ ಇವೆ. ಅಲ್ಲಿ ಭಕ್ತರು ಬಸವಣ್ಣ ಮೂರ್ತಿಗೆ ನಡಕೊಳ್ಳುವದನ್ನು ನೋಡುತ್ತೇವೆ.

ಪೂರ್ವ ಪುರಾತನರ ನೂತನ ಪುರಾತನರ ಶಿವಗಣಂಗಳ ಸಚ್ಚ ರಿತೆಗಳನ್ನು ಸುವಿಚಾರಿಸಲು ಜನನ ಮರಣಂಗಳ ನೀಗಿ ಶಿವೈಕ್ಯರಾಗಲು ಶಿವನ ಕೃಪೆಯಿಲ್ಲದೆ ಎಂದೂ ಆಗದು. ಆ ಶಿವಕೃಪೆಯನ್ನು ಪಡೆಯಲು ಪಿಪೀಲಿಕಾ ಮಾರ್ಗವೂ ವಿಹಂಗಮಮಾರ್ಗವೂ ಎಂಬ ದ್ವಿಮಾರ್ಗಗಳು. ಪಿಪೀಲಿಕಾ ಮಾರ್ಗವೇ ನೂರೊಂದು ಸ್ಥಲಗಳಿಂದ ಕೂಡಿದ ಷಟ್‌ಸ್ಥಲ ಮಾರ್ಗವು. ವಿಹಂಗಮ ಮಾರ್ಗವೇ ವೀರ ವ್ರತಿ ಗಳ ಮಾರ್ಗವು. ಎಷ್ಟೋ ಶರಣರು ಕುಚದಲ್ಲಿ ಬಳ್ಳದಲ್ಲಿ ಕುರಿಯ ಹಿಕ್ಕೆಯಲ್ಲಿ ತಮ್ಮ ತಮ್ಮ ಭಾವದಂತೆ ಶಿವನ ಒಲಿಸಿದವರುಂಟು. ಅವೆಲ್ಲ ವೀರಶೈವ ಸಮಾಜಕ್ಕೆ ಅಪವಾದವು. ಆದರೆ ಜಗದಾರಾಧ್ಯವಾದ ಜಗತ್‌ವಂದ್ಯವಾದ ಜಗತ್ಪೂಜ್ಯವಾದ ಜಗನ್ಮಾನ್ಯವಾದ ಲಿಂಗಾಂಗ ಸಾಮರಸ್ಯಜ್ಞಾನವನ್ನು ಬೋಧಿಸುವ ಎರಡೆಂಭತ್ತುಕೋಟಿ ವಚನಗ ಳಿಂದ ಅಜ್ಞಾನಾಂಧಕಾರವನ್ನು ಹೊಡೆದೋಡಿಸುವ ಶಿವಶರಣಾನುವ

ರ್ತನೆಯ ಶ್ರೀ ವೀರಶೈವ ಷಟ್‌ಸ್ಥಲ ಮಾರ್ಗವೇ ವೀರಶೈವ ಮತ ದಲ್ಲಿ ಪಿಪೀಲಿಕಾ ಮಾರ್ಗವು.

ವೀರಶೈವ ಸಮಾಜದವರು ಶಿವನ ೬೪ ಲೀಲೆಗಳನ್ನು ತೋರ್ಪ ಡಿಸಲು ಅಲ್ಲಲ್ಲಿ ಸ್ಥಾಪಿಸಿದ ಆಯಾ ಹೆಸರಿನ ಶಿವಾಲಯಗಳೂ ಹುತ್ತಿ ನೊಳು ಹುದುಗಿರ್ದ ನೆತ್ತಿಯನ್ನೆತ್ತಿ ಸದ್ಭಕರ ಗೋವಿನಿಂದ ಹಾಲು ಕರೆಯಿಸಿಕೊಂಡು ಮಹತ್ತಾದ ಗುಡಿಗಳಲ್ಲಿ ಮಹತ್ವವನ್ನು ತೋರಿ ಸಿದ ಸ್ವಯಂಭುಲಿಂಗಗಳೂ ರಾಮಾಯಣ ಭಾರತಕಾಲದ ಭಕ್ತಿಯನ್ನು ವ್ಯಕ್ತಮಾಡಲು ರಚಿಸಿದ ದೇವಾಲಯಗಳೂ ವೇದಾಗಮ ಶಾಸ್ತ್ರಪು ರಾಣ ಪ್ರಸಿದ್ಧವಾದ ಶಿವಾಧಿಕ್ಯದ ಲಿಂಗಗಳೂ ಶಿವಶರಣರ ಪವಾಡಗಳ ಪ್ರಸಿದ್ಧತೆಯನ್ನು ಪ್ರಬೋಧಿಸುವ ಗುಡಿಗಳೂ ಅಸಂಖ್ಯವಾಗಿ ನಮ್ಮೆ ಲ್ಲರ ಅವಗಾಹನೆಯಲ್ಲಿ ಆಲೆದಾಡುತ್ತವೆ. ಇದಲ್ಲದೆ “ಧಿಗ್‌ಭಸ್ಮರಹಿತಂ ಫಾಲಂ ಧಿಗ್ರಾಮಮಶಿವಾಲಯಂ” ಎಂದು ಶ್ಲೋಕಾಂಶದಂತೆ ಪ್ರತಿಗ್ರಾ ಮದ ದೈವದವರು ತಮ್ಮ ತಮ್ಮ ಊರಲ್ಲಿ ಶಿವಾಲಯವನ್ನು ಕಟ್ಟಿಸಿಟ್ಟರು ವರು. ಗ್ರಾಮ ಸಮಾಜವೇ ಇಂಥ ಕಾರ್ಯ ಕೈಕೊಂಡದ್ದರಿಂದ ಶಿವ ಭಕ್ತಿ ಶಿವಾಚಾರಗಳನ್ನನುಸರಿಸಿದ ಅರಸರೂ ಅರಸರ ಕೈಕೆಳಗಿನ ಇನಾ ಮದಾರರೂ ಸುಪ್ರಸಿದ್ಧ ದೇವಾಲಯಗಳನ್ನು ಕಟ್ಟಿಸಿ ತಮ್ಮ ಹೆಸರು ಅಜರಾಮರವಾಗಿ ಉಳಿಯುವಂತೆ ಮಾಡಿದ್ದಾರೆ. ಇಷ್ಟೇ ಅಲ್ಲ ಗರ್ಭ ಗುಡಿ ಸಭಾಮಂಟಪಗಳ ಒಳಗೂ ಹೊರಗೂ ಶಿವಲೀಲೆ ಶಿವಪುರಾಣದ ಪ್ರತಿಮೆಗಳನ್ನು ಅಲ್ಲಲ್ಲಿ ರೂಪಿಸಿಬಿಟ್ಟಿದ್ದಾರೆ. ಇಂಥ ಗುಡಿಗಳಿಗೆ ಆಗಮಿ ಸಿದ ಭಕ್ತರ ಹೃದಯದಲ್ಲಿ ಪುರಾತನಕಾಲದ ಇತಿಹಾಸದ, ಶೂರಪುರು ಷರ ಪರಾಕ್ರಮದ, ಅಭಿಮಾನವು ತುಂಬಿತುಳುಕುವಂತೆ ಸ್ಥಿರ ನೋಟ (ಸಿನೇಮಾ) ವನ್ನು ರಚಿಸಿಟ್ಟಿದ್ದಾರೆ. ಶಿವಯೋಗಿಗಳ ಶಿವಶರಣರ ಸಮಾಜ ಹಿತೈಷಿಗಳ ಸಮಾಧಿಗಳ ಮೇಲಿನ ಲಿಂಗಗಳೂ ತೋರಲಿಂ ಗಗಳೂ ಅನೇಕವಿವೆ. ಈ ಮಹಾನುಭಾವರ ಶಿವಾಲಯಕ್ಕೆ ಆಗಮಿಸಿದ ಆಯಾ ಭಕ್ತರಿಗೆ ಅವುಗಳನ್ನು ನಿಷೇಧ ಮಾಡುವದು ಆರಿಂದಾದೀತು?

ನೂರೊಂದು ಸ್ಥಲಗಳಲ್ಲಿಯ ಷಟ್‌ಸ್ಥಲಾಂತರ್ಗತವಾದ ಅಂಗಸ್ಥ ಲದೊಳಗಿನ ಮಾಹೇಶ್ವರ ಸ್ಥಲದಲ್ಲಿ ಮಾತ್ರ ಸರ್ವಗತನಿರಸನ, ಶಿವಜ ಗನ್ಮಯ ಸ್ಥಲಗಳ ಭೇದವನ್ನೂ ವಾಗದ್ವೈತ ನಿರಸನ, ಪೂರ್ವಾಶ್ರಯ

ನಿರಸನ, ಆಹ್ವಾನ ವಿಸರ್ಜನ ನಿರಸನ, ಅಷ್ಟಮೂರ್ತಿ ನಿರಸನ ಸ್ಥಲಗಳ ವಿವರಣೆಯನ್ನೂ ವಿಶದೀಕರಿಸಿದೆ. ಇದರ ಮೇಲಿಂದ ಹಿಂದಿನ ಭಕ್ತಸ್ಥಲಾಂತರ್ಗತ ೧೫ ಸ್ಥಲಾಚಾರಸ್ಥರಿಗೆ ಈ ಮೇಲಿನ ನಿರಸನಗಳು ನಿರಸವೆಂಬಂತೆ ಧ್ವನಿತವಾಗುತ್ತದೆ.

ಹುಟ್ಟುಲಿಂಗದ ತೊಟ್ಟಿಲಲ್ಲಿದ್ದಾಗ ಅಥವಾ ಗರ್ಭಕ್ಕೆ ಕಟ್ಟಿದರೂ ಅಭಿಮನ್ಯು, ನೇಪೋಲಿಯನ್, ಶಿವಾಜಿಗಳಂತೆ ಎಲ್ಲರೂ ಆಗಲಿಕ್ಕೆ ಶಕ್ಯವಿಲ್ಲ. ದೀಕ್ಷಾ ಕಾಲಕ್ಕೆ ತಾಯಿಯು, ದೀಕ್ಷಾ ಮಾಡುವವನ ಸದ್ಭಾವಗಳು ಏಕವಾಗಿ ಕೂಸಿನ ಭಾವ ಷಟ್‌ಸ್ಥಲದಲ್ಲಿ ಮೂಡಿದ್ದಾದರೆ ಶಿಶುಲಿಂಗ ದೀಕ್ಷೆಯಿಂದ ಉಪಯೋಗವು. ಹಾಗೆ ಆಗದ್ದರಿಂದ ವೀರಶೈವ ಮತಶಾಸ್ತ್ರಾನುಗುಣವಾಗಿ, ಮುಂದೆ ಮೂರು ದೀಕ್ಷೆಗಳು ಕಲ್ಪಿಸಲ್ಪಟ್ಟಿವೆ. ಈ ಪ್ರಕಾರ ಅಂಗಲಿಂಗಾಚಾರಗಳು ಸಾಧನಗಳಿಂದ ಬಲಿತು ಕ್ರಮೇಣ ಷಟ್‌ಸ್ಥಲಾನುಭವವು ಅಳವಡುತ್ತ ಹೋಗುವದು. ಇಂಥ ಸಾಧನವನ್ನು ಸರಿಯಾಗಿ ಮಾಡಿ ಶಿವನನ್ನು ಕಂಡ ಶಿವಶರಣರು ಸ್ಥಾವರಲಿಂಗದ ಸುದ್ದಿಯನ್ನು ಯಾಕೆ ತೆಗೆದಾರು? ಅವರಿಗೇನು ಕೊರತೆ? ಆದರೆ ಇಷ್ಟರಿಂದ ಸ್ಥಾವರಲಿಂಗಗಳು ತ್ಯಾಜ್ಯವೆಂದು ಹೇಗೆ ತಿಳಿಯಬೇಕು?

"ಅದು ಬೇಕು, ಇದು ಬೇಕು, ಎಂಬ ಎದೆಗುಂಡಿಗೆತನ ಬೇಡ. ಸದೈವನಾಗಿರ್ದೊಡೆ ಸಾಕು. ಪಡಿಪದಾರ್ಥಂಗಳು ತಾನಿದ್ದೆಡೆಗೆ ಬಾಹವಯ್ಯಾ, ನಿಧಿ ನಿಕ್ಷೇಪಂಗಳು ತಾನಿದ್ದೆಡೆಗೆ ಬಾಹವಯ್ಯಾ, ಸದುಹೃದಯ ಶುದ್ಧನಾಗಿ ಸಕಳೇಶ್ವರ ದೇವಂಗೆ ಶರಣೆಂದೊಡೆ ನಿಜಪದವಿಯನೀವನು." ಈ ಅನುಭವವಿದ್ದ ಆಚಾರಸ್ಥರೂ ಸ್ಥಾವರಲಿಂಗಕ್ಕೆ ಏಕೆ ಹೋದಾರು? ತಮ್ಮ ತನುಮನಧನಗಳನ್ನು ಏಕೆ ಸವಿಸಿಯಾರು? ಸ್ಥಾವರಲಿಂಗವು ಅಸ್ಥಿರವಾದ ಫಲಪದಂಗಳನ್ನೀಯುವದೆಂದು ಈ ಮೊದಲೇ ಹೇಳಿದ್ದಾಗಿದೆ. ಅದೀಕ್ಷಿತರಾದರೂ "ಗತಿಯ ಬಯಸುವದಕೆ ಸಗುಣ ದೈವವಿಡಿಯದಿಹುದೆ ಸಾಕ್ಷಿ" ಎಂಬ ವಚನದಂತೆ ಶಿವಶರಣರ ಕೃತ್ಯಗಳ ಕುರುಹುಗಳ ಸ್ಮಾರಕಗಳಾಗಿ ಸ್ಥಾವರಲಿಂಗಗಳಿಗೆ ನಿಜಭಕ್ತಿಯಿಂದ ನಡಕೊಂಡಿದ್ದಾದರೆ ತಾವು ನಿಜಶರಣರ ಮಾರ್ಗವಾದ ಷಟ್‌ಸ್ಥಲಕ್ಕೆ ಹೊರತಾಗಲಾರರು.

ಒಟ್ಟಿನಲ್ಲಿ ಸ್ಥಾವರಲಿಂಗಗಳು ವೀರಶೈವ ಸಮಾಜದ ಮಹತ್ವವನ್ನೂ ಐತಿಹ್ಯವನ್ನೂ ಮನೋಭಿಷ್ಟವನ್ನೂ ಪಾವಿತ್ರ್ಯತೆಯನ್ನೂ ತೋ

ಪ್ರಡಿಸುತ್ತವೆ. ಆದರೆ ಕಡೆಯು ನಿಜಲಿಂಗಾನುಭವವು ವೀರಶೈವ ದೀಕ್ಷಿತನಿಗೆ ತ್ರಿಲಿಂಗಗಳಿಂದಲೇ ಸಾಧ್ಯವು. ಹೀಗೆ ಸ್ಥಾವರಲಿಂಗಗಳು ಮತ್ತು ತ್ರಿಲಿಂಗಗಳು ಇವುಗಳಲ್ಲಿ ತಾರತಮ್ಯವಿರುತ್ತದೆ. ನಿಜಲಿಂಗಾನುಭವಿಗಳಿಗೆ ಮಾತ್ರ ತ್ರಿಲಿಂಗಗಳೇ ಗ್ರಾಹ್ಯವೆಂದು ಹೇಳಲು ಅಡ್ಡಿ ಇಲ್ಲ.

---

## ಭಕ್ತ ಗುರು ಲಿಂಗ ಜಂಗಮಗಳು.

(ಲೇಖಕಃ— ಶ್ರೀ. ಬ. ಚ. ಪಟ್ಟೇದ-ಹುಕ್ಕೇರಿ.)

---

ಷಟ್‌ಸ್ಥಲಗಳಲ್ಲಿ ಭಕ್ತ ಗುರು ಲಿಂಗ ಜಂಗಮಗಳಲ್ಲಿ ಇರುವ ಪರಸ್ಪರ ಸಂಬಂಧವನ್ನು ಅರಿತುಕೊಳ್ಳುವದು ಅತ್ಯಾವಶ್ಯವಿರುತ್ತದೆ. ಈಗ ಜನರು ಕೇವಲ ಅವುಗಳ ಬಹಿರಂಗ ಸ್ವರೂಪಕ್ಕೆ ಮಹತ್ವ ಕೊಡುವದರಿಂದ ಅವುಗಳ ಅಂತರಂಗದ ಪರಿಣಾಮಗಳು ಅವರ ನಿದರ್ಶನಕ್ಕೆ ಬರುವದಿಲ್ಲ. ಇವುಗಳಲ್ಲಿ ಕೆಲವು ವೈಶಿಷ್ಟ್ಯಗಳಿರುತ್ತವೆ. ಅವುಗಳನ್ನು ನಾವು ಈ ಲೇಖದಲ್ಲಿ ವಿವರಿಸುತ್ತೇವೆ.

(೧) ಭಕ್ತನು ಅಂದರೆ ಲಿಂಗಾಂಗಿಯು ಆದಾವ ಸ್ಥಳದಲ್ಲಿ ನಿಂತಿದ್ದರೂ ಅಲ್ಲಿಯು ಆಚರಣೆಗಳನ್ನು ನಡಿಸುವಲ್ಲಿಯೇ ಉಳಿದ ಸ್ಥಳಗಳನ್ನು ಸಹ ಸಾಧಿಸಬೇಕು.

(೨) ಗುರು ಲಿಂಗ ಜಂಗಮಗಳಲ್ಲಿ ಜ್ಞಾನ, ಸುಜ್ಞಾನ, ಮಹಾಜ್ಞಾನಗಳು ಸಾಹಿತ್ಯವಾಗಿರುತ್ತವೆ. ಆದುದರಿಂದ ಮೂರೂ ಒಂದೇ. ಪರವಸ್ತುವೆಂಬ ಮೂಲಕ್ಕೆ ಈ ಮೂರು ರೆಂಬೆಗಳು.

(೩) ಗುರು ಲಿಂಗ ಜಂಗಮದಲ್ಲಿ ಚಾರಿತ್ರ್ಯ, ಲಕ್ಷಣ, ಜಾತಿಗಳನೆಣಿಸಲಾಗದು.

(೪) ಗುರು ಶಿಷ್ಯಸಂಬಂಧವನೇನೆಂದು ಉಪಮಿಸುವೆನಯ್ಯ! ಜ್ಯೋತಿಯಿಂದೊದಗಿದ ಜ್ಯೋತಿಯಂತೆ ಇರಬೇಕು. ಮರೀಚಿಕಾ ಜಲದಂತಿರಬೇಕು.

(೫) ಗುರು ನರನೆಂದರೆ ಆಗದು. ಭಕ್ತಿಗೆ ಪರಮಾಶ್ರಯವಾ ದುದೇ ಗುರು. ಗುರುವಿನಲ್ಲಿಯೇ ಮೊದಲು ಭಕ್ತಿಯ ಬೀಜಾರೋ ಪಣ. ಆಮೇಲೆ ಉಳಿದವುಗಳ ಮೇಲೆ ಹಬ್ಬಬಹುದು.

(೬) ಗುರು ಲಿಂಗ ಜಂಗಮವೇ ಕುಲದೈವ, ಮನೆದೈವ. ಅವ ರಲ್ಲಿ ಅಪಾರ ವಿಶ್ವಾಸವುಳ್ಳವರಾಗಬೇಕು.

(೭) ತ್ರಿವಿಧ ವಂಚನೆಯಾದರೆ ಭಕ್ತಿ ಸಲ್ಲದು. ಜಂಗಮಕ್ಕೆ ವಿವಾ ಹವಾಗಲಿ, ಅವಿವಾಹವಾಗಲಿ ಗುಣವೇ ಕಾರಣವು.

(೮) ಹುಸಿ, ಕಳವು, ಪರದಾರ, ಅನ್ಯದೈವ ಭಜನೆ, ಭವಿಬಳಕೆ ಬಿಡದನ್ನಕ್ಕರ ಭಕ್ತನೆಂದಾಗಬಾರದು. ಅಂಥವ ಕೆಟ್ಟ ಭವಿ.

(೯) ಭಕ್ತರಲ್ಲಿ ದುರಹಂಕಾರಕ್ಕೆ ಎಡೆಯಿಲ್ಲ. ಇವನ್ನು ಕ್ರಮ ವಾಗಿ ವಿವರಿಸುವಾ.

(೧) ಭಕ್ತನು (ಲಿಂಗಾಂಗಿಯು) ಆದಾವ ಸ್ಥಳದಲ್ಲಿ ನಿಂತಿದ್ದರೂ ಅಲ್ಲಿಯೇ ಉಳಿದೆಲ್ಲ ಸ್ಥಳಗಳನ್ನು ಸಾಧಿಸಬೇಕು. ಅಯ್ಯಗಳು (ಗುರು ಜಂಗಮರು ಸಹಿತ) ಮತ್ತು ಮಿಕ್ಕ ಲಿಂಗವಂತರು ಎಲ್ಲರೂ ಲಿಂಗ ಭಕ್ತರೇ, ಶಿವಭಕ್ತರೇ ಇದ್ದಾರೆ. ಅವರೆಲ್ಲರಿಗೂ ಷಟ್‌ಸ್ಥಲಗಳನ್ನೆಲ್ಲ ಒಂದೂ ಬಿಡದಂತೆ ಆಚರಿಸುವುದು. ಅಂದರೆ ಪ್ರತಿಯೊಬ್ಬನು ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯಗಳೆಂಬ ಆರೂ ಸ್ಥಲಗಳಿಗೆ ಪಾತ್ರನಾಗಿ ವರ್ತಿಸಿ ಜೀವಿಸಬೇಕಾಗುವುದು ಅತ್ಯವಶ್ಯವಾ ಗಿದೆ. ಹಾಗಿಲ್ಲದೆ ಹೋದರೆ ಅವನ ಉದ್ಧಾರವೇ ಇಲ್ಲ. ಅಂದಮೇಲೆ ಇಲ್ಲಿ ಭಕ್ತರು ಕಡಿಮೆ, ಮಹೇಶ್ವರರು ಹೆಚ್ಚು ಎಂಬ ಮಾತಿಗೆ ಎಲ್ಲಿ ಆಸ್ಪದವದೆ? ಹಾಗೆ ಅನ್ನುವದು ಷಟ್‌ಸ್ಥಲ ಮಾರ್ಗವಲ್ಲ.

೨ ಗುರು ಲಿಂಗ ಜಂಗಮಗಳಲ್ಲಿ, ಜ್ಞಾನ ಸುಜ್ಞಾನ ಮಹಾಜ್ಞಾನ ಗಳು ಸಾಹಿತ್ಯವಾಗಿರುತ್ತವೆ. ಆದ್ದರಿಂದ ಅವರು ಮೂರೂ ಒಂದೇ. ಪರವಸ್ತುವೆಂಬ ಮೂಲಕ್ಕೆ ಈ ಮೂರು ರೆಂಬೆಗಳು. ಇದರಿಂದ ಗುರು ಜಂಗಮತ್ವವು ಕೇವಲ ಜ್ಞಾನಪ್ರಧಾನವೇ ಹೊರತು, ಅದರ ಲಾಂಛ ನವು ಹೆಸರಿಗೆ ಮಾತ್ರ. ಬಹುಶಃ ಈ ಹೊರಮಿಂಚಿನಲ್ಲಿಯೇ ತೃಪ್ತ ರಾಗಿ ಜ್ಞಾನ ಮಹಾಜ್ಞಾನಗಳ ಸಂಪರ್ಕವಿಲ್ಲದೆ, ಅಜ್ಞ ಸಮಾಜದ

ಮಾನವನ್ನು ಆಕರ್ಷಿಸುವ ಬಹು ಸಂಖ್ಯಾಕರಾದ ಅಯ್ಯಾ ಗುರು ಜಂಗಮರು ಕಣ್ದೆರೆಯಬೇಕೆಂದು ಈ ವಚನವು ಎಚ್ಚರಿಸುತ್ತದೆ.

(೩) ಗುರು ಲಿಂಗ ಜಂಗಮರಲ್ಲಿ ಚಾರಿತ್ರ್ಯ ಲಕ್ಷಣ ಜಾತಿಗಳನೆಣಿಸಲಾಗದು. ಅವರಂತಹರಿಂತಹರೆನಲಾಗದು. ಗುರು ಜಂಗಮರು ತಾವು ಶಿವಜ್ಞಾನ ಮಹಾ ಜ್ಞಾನಗಳಿಂದಲಂಕೃತರೂ, ಆಚಾರವಂತರೂ ಆಗಿ, ಸಮಾಜೋದ್ಧಾರವೇ ತಮ್ಮ ಜೀವಿತ ಕರ್ತವ್ಯವೆಂದಿಟ್ಟುಕೊಂಡರೆ, ಹಾಗು ಅಲಿಪ್ತ ರೀತಿಯಿಂದ ಸಂಸಾರವನ್ನೂ ವ್ಯವಹಾರವನ್ನೂ ಸಾಗಿಸುವವರಾದರೆ ಅವರ ಚಾರಿತ್ರ್ಯದಲ್ಲಿ ದೋಷಗಳೇನೂ ಸಂಭವಿಸಲಾರವೆಂಬುದು ಸ್ಪಷ್ಟವೇ ಅದೆ. ಅವರು ನುಡಿದುದೇ ವೇದವಾಕ್ಯ, ನಡೆದುದೇ ಶಿವಮಾರ್ಗ, ಪಿಡಿದುದೇ ಪಾವನ, ನೋಡಿದುದೇ ಪರುಷ ಇಂತೆಂಬಲ್ಲಿ ಅವರ ಚಾರಿತ್ರ್ಯವನೆಣಿಸುವುದೂ ಅವರಂತಹರಿಂತರೆಂಬುದೂ ಸಂಭವಿಸುವುದು ಅಶಕ್ಯ.

ಹಾಲು ಕಂಧಲು ತುಪ್ಪದಮಡಿಕೆ ಬೋಡು ಮುಕ್ಕೆನಲಾಗದು. ಹಾಲು ಸಿಹಿ, ತುಪ್ಪ ಲಿಂಗಾರ್ಪಿತವಪ್ಪುದು. ಅದರಂತೆ ಶಿವಶರಣರನ್ನು ಜ್ಞಾನಶ್ರೇಷ್ಠರಾದುದರಿಂದ ಅವರಲ್ಲಿ ಲಕ್ಷಣವನ್ನು ಮೂಗುಹರಕ, ಕೈಚೊಂಚ, ಕುಂಟ ಇತ್ಯಾದಿಗಳನ್ನು ಎಣಿಸಕೂಡದೆಂದು ವಚನ ಶಾಸ್ತ್ರದ ಅಭಿಪ್ರಾಯವದೆ. ಅವರಂತಹರಿಂತಹರೆಂದು ಗುಣವಿಶಿಷ್ಟರಾದ ಗುರು ಜಂಗಮಾದಿಗಳನ್ನು ಅಸಡ್ಡೆ ಮಾಡಕೂಡದು.

"ಗಂಗೆಗೆ ಹೊಲೆಯಿಲ್ಲ ಜಂಗಮಕ್ಕೆ ಕುಲವಿಲ್ಲ" ಎಂಬ ನಾಣ್ಣುಡಿ. ಜ್ಞಾನಿಗಳಲ್ಲಿ ಎಂದೆಂದೂ ಜಾತಿಯನೆಣಿಸಬಾರದು. ಜ್ಞಾನವು ಇಂತಹದೊಂದು ಜಾತಿಗೇನೇ ಮೀಸಲಾಗಿಲ್ಲ. ಅದು ಬೇಕಾದವರಲ್ಲಿ ಒಡಮೂಡಬಹುದು. ಭಕ್ತರಂತೂ ಲಿಂಗ (ಜ್ಞಾನ) ಧಾರಿಗಳು. ಅವರಲ್ಲಿ ಗುರು ಲಿಂಗ ಜಂಗಮ ಸ್ಥಾನಗಳಲ್ಲಿರುವವರನಕ ಮಹಾಜ್ಞಾನಿಗಳಾಗಿರಬೇಕೆಂಬುದು ಸ್ವಾಭಾವಿಕವಾದ ಮಾತು. ಆ ಕಾರಣ ಭಕ್ತರಲ್ಲಿ ಅಯ್ಯಗಳು, ಬಣಜಿಗರು, ನೇಕಾರರು, ಕುಂಬಾರರು, ಹಡಪದವರು, ಗಾಣಿಗರು, ಮುಂತಾದ ಯಾವ ಕಾಯಕದವರಿದ್ದರೂ ಅದನ್ನು ನೋಡದೆ ಭಕ್ತಿ, ಜ್ಞಾನ, ಆಚಾರಗಳನ್ನೇ ನೋಡಬೇಕೆಂಬುದು ಇಲ್ಲಿ ಉಕ್ತವಾಗಿದೆ. ಈಗಣ ಗುರು ಜಂಗಮರು ಮೇಲಿನಂತೆ ಕಂಗೊಳಿ

ಸುವವರಾದರೆ, ಅವರನ್ನು ಕಡೆಗಾಣಿಸಿ ನಡೆಯುವವರಾರಾದರೂ ಆಗ ಬಹುದೇ? ಎಂದೂ ಶಕ್ಯವಿಲ್ಲ!

(೪) "ಗುರು ಶಿಷ್ಯ ಸಂಬಂಧವನೇನೆಂದು ಉಪಮಿಸುವೆನಯ್ಯಾ? ಜ್ಯೋತಿಯಿಂದೊದಗಿದ ಜ್ಯೋತಿಯಂತಿರಬೇಕ. ಮರಿಚಿಕಾಜಲದಂತಿರಬೇಕು" ಆಹಹ! ಇದೆಂತಹ ಸೊಗಸಾದ ಹಾಗು ಅಮೂಲ್ಯವಾದಂಥ ನುಡಿಯೋ? ಒಂದು ದೀಪದಿಂದ ಬೇರೊಂದು ಬತ್ತಿಗೆ ದೀಪವನ್ನು ಹೊತ್ತಿಸಿಕೊಂಡಂತೆ, ಗುರು ತಾನು ಸುಜ್ಞಾನ ಮಹಾ ಜ್ಞಾನಗಳಿಂದ ದೈದೀಪ್ಯನಾಗಿ, ತನ್ನನ್ನು ಮರೆಹೊಕ್ಕ ಶಿಷ್ಯನನ್ನು ಅನುಗ್ರಹಿಸಿ, ಅವನ ಅಂತರಂಗದಲ್ಲಿ ಜ್ಞಾನ ಜ್ಯೋತಿಯನ್ನು ಉರಿಸುವ ಸಾಮರ್ಥ್ಯವುಳ್ಳವನಾಗಿದ್ದರೆ, ಅವನ ಮಹಿಮೆಯನ್ನು ವರ್ಣಿಸದವರಾರು? ಮೃಗಜಲವು ಹೊರಗೆ ಕಣ್ಣಿಗೆ ತೋರಿದರೂ, ನಿಜವಾಗಿ ಅದರಲ್ಲಿ ನೀರು ಅಂದರೆ ದೃಶ್ಯ ವಸ್ತುವು ಇರುವುದೇ ಇಲ್ಲ. ಅದರಂತೆ ಗುರು ಶಿಷ್ಯ ಸಂಬಂಧವು ಹೊರಗೆ ವ್ಯವಹಾರ ಮೂಲಕ ಎಣಿಸಲ್ಪಟ್ಟರೂ, ಅವರ ಅಂತಃಕರಣದಲ್ಲಿ ಅದಾವ ಭೇದಭಾವವೂ ವಾಸಿಸದೆ, ಗುರುವಿನೊಳು ಶಿಷ್ಯ, ಶಿಷ್ಯನೊಳು ಗುರುವು ಬೆರೆದು ಸಮರಸವಾಗಿನಿಂತರೆ, ಅದನೆಂತು ಉಪಮಿಸಬೇಕು? ಈಗಿನ ಗುರು ಜಂಗಮರಾದರೂ ಹಾಗೆಯೇ ಆಗಲೆಂದು ಸಮಾಜವು ಹಾತೊರೆದು ಬಾಯ್ಬಿಡುವುದಲ್ಲವೇ? ಇತ್ತ ಸೋಗಿನ ಹಾಗು ಅಡ್ಡ ಹೆಸರಿನ ಡಾಂಭಿಕ ಗುರು ಜಂಗಮರು ಲಕ್ಷಿಸುವರೇ.

(೫) ಗುರು ನರನೆಂದರೆ ಆಗದು. ಭಕ್ತಿಗೆ ಪರಮಾಶ್ರಯವಾದುದೇ ಗುರು. ಗುರುವಿನಲ್ಲಿಯೇ ಮೊದಲು ಭಕ್ತಿಯು ಬೀಜಾರೋಪಣ. ಆ ಮೇಲೆ ಉಳಿದವುಗಳ ಮೇಲೆ ಹಬ್ಬಬಹುದು:- "ಅರಿವೇ ಗುರು ಆಚಾರವೇ ಗುರು" ಎಂದು ವಚನ ಶಾಸ್ತ್ರದ ಘೋಷಣೆ. ಗುರುವಿನಲ್ಲಿ ಸುಜ್ಞಾನಾಚಾರಗಳ ಸಾಹಿತ್ಯವಿರುವುದರಿಂದಲೇ ಆ ಜ್ಞಾನಾಚಾರಗಳಿಗೇ ಮಹತ್ವವಲ್ಲದೆ ಆತನ ಸಪ್ತಧಾತುಮಯ ದೇಹಕ್ಕಲ್ಲ. ಅದು ಎಲ್ಲರಲ್ಲಿಯು ಉಂಟು. ಜ್ಞಾನಾಚಾರಗಳ ಅಭಾವದಲ್ಲಿ ಅವರ ದೇಹವಷ್ಟೇ ಭಕ್ತ ದೃಷ್ಟಿಗೆ ಕಾಂಬುವುದಿಲ್ಲ. ಆಗ ಅವನು ಕೇವಲ ನರನೆಂದೇ ಎಣಿಸಲ್ಪಡುವನು. ಅವನು ಭವಿ ಸಮಾನನು. "ಆಚಾರವಿಲ್ಲದ ಗುರು ನರ. ಆಚಾರವಲ್ಲದ ಜಂಗಮ ಭೂತ ಪ್ರಾಣಿ" ಎಂದು

ವಚನ ಶಾಸ್ತ್ರವೇ ಸಾರಿ ಬಿಟ್ಟದೆ. ಜ್ಞಾನಾಚಾರಯುಕ್ತನಾಗಿದ್ದಾಗ ಗುರುವನ್ನು, ಪಂಚವಕ್ತ್ರ ದಶಭುಜ ತ್ರಿನೇತ್ರ ಮೊದಲಾದವನ್ನಡಗಿಸಿ ಕೊಂಡ ಪ್ರತ್ಯಕ್ಷ ಶಿವನೆಂದೇ ಭಾವಿಸುವುದು ಸಹಜವದೆ. ಇಂತಹ ಗುರುವೇ ಭಕ್ತಿಗೆ ಪರಮಾಶ್ರಯನು. ಅವನಲ್ಲಿಯೇ ಮೊದಲು ಭಕ್ತಿಯ ಬೀಜಾರೋಪಣ. ಉಳಿದ ಅಷ್ಟಾವರಣಗಳಲ್ಲಿ ಅದು ತದನಂತರ ಕುಡಿ ಚಾಚಬಹುದು. ಇದು ವಾಸ್ತವಿಕ ಮಾತು. ಆದರೆ ಈಗ ಗುರುವೆಂದು ಹೇಳಿಕೊಳ್ಳುವ ಪಡದಪ್ಪ ಚರಮೂರ್ತಿಗಳೆಲ್ಲರೂ ಅಂತಹರೇ ಇರುವರೇ? ಇಲ್ಲದಿದ್ದರೆ, ಅವರು ನರರೂ ಸ್ವಾರ್ಥಿಗಳೂ ಡಾಂಭಿಕರೂ ಎನಿಸಿಕೊ ಳ್ಳುವುದು ಅಪರಿಹಾರ್ಯ! ತಾವು ಸಮಾಜದಲ್ಲಿ ನರರೆಂದೆನ್ನಿಸಿಕೊಳ್ಳ ದಂತೆ ಅವರು ಏರ್ಪಾಡು ಹೊಂದುವುದು ಅತ್ಯಾವಶ್ಯಕವು. ಅದು ಎಲ್ಲರಿಗೂ ಭೂಷಣವೆಂದು ಇಲ್ಲಿ ಧ್ವನಿತವಾಗಿದೆ.

(೬) ಗುರು ಲಿಂಗ ಜಂಗಮುವೇ ಕುಲದೈವ, ಮನೆದೈವ- ಹೆಂಡತಿ ಗಂಡನಲ್ಲಿ ಹೇಗೋ ಹಾಗೆ ಅವರಲ್ಲಿ ಭಕ್ತರು ಅಪಾರ ವಿಶ್ವಾ ಸವುಳ್ಳವರಾಗಬೇಕು. ಲಿಂಗಾಂಗಿಗಳು ಮೂರ್ತಿಪೂಜಕರಲ್ಲ. ಅವರು ಭವಿಗಳಂತೆ ಮನೆದೈವ ಕುಲದೈವವೆಂದು ಮೂರ್ತಿಗಳಿಗೆ ಹೇಳಿಕೊಳ್ಳ ಲಿಕ್ಕೆ ಆಸ್ಪದವೇ ಇಲ್ಲ. ಅವರ ಇಷ್ಟ ಲಿಂಗವು ಕೇವಲ ಜ್ಞಾನದ ಕುರುಹು. ಸುಜ್ಞಾನ ಸ್ವರೂಪವಾದುದು. ಅವರು ಬರೇ ಜ್ಞಾನಾ ಚಾರಗಳ ಆರಾಧಕರು. ಇವುಗಳ ಆಕಾರವಾಗಿರುವ-ಭಕ್ತ ಶಿಖಾಮ ಣಿಗಳೆನಿಸುವ ಗುರು ಜಂಗಮರನ್ನೂ ಇಷ್ಟಲಿಂಗವನ್ನೂ ಅನನ್ಯ ಭಕ್ತಿ ವಿಶ್ವಾಸಗಳಿಂದ ನಂಬಿ ನಡೆಯುವದು ಅವರ ಹೊಣೆಗಾರಿಕೆ. ಅದೇ ಅವರ ಪವಿತ್ರ ಕರ್ತವ್ಯ. ಈಗಣ ಗುರು ಜಂಗಮರಲ್ಲಿ ಬಹು ಸಂಖ್ಯಾ ಕರು ಎಂದರೂ ಅಡ್ಡಿ ಇಲ್ಲ. ಅಂತಹರಿಲ್ಲದಿರುವುದರಿಂದಲೇ, ನಿಜ ವಾದ ಭಕ್ತರಿಗೆ ಬಹು ತೊಂದರೆಯಾಗಿದೆ. ಯಾರನ್ನು ಮನೆದೈವ ಕುಲದೈವವೆಂದು ಆರಾಧಿಸಬೇಕೆಂಬುದೇ ತಿಳಿಯದೇ ದಿಙ್ಮೂಢರಾಗಿ ದ್ದಾರೆ. ಮನೆ ಗುರುಗಳೆಂದು ಹೇಳುತ್ತಾ ಬರುವ ಮಹಿಮರಂತೂ "ಗುರುವೋಬಹವಃಸಂತಿ ಶಿಷ್ಯವಿತ್ತಾಪಹಾರಕಾಃ" ಎಂಬಂತಿರುವರೆಂದು ಹೇಳಲಿಕ್ಕೆ ಬಹು ಕಷ್ಟವಾಗುತ್ತದೆ. ಆದರೂ ಉಪಾಯವಿಲ್ಲ. ಇನ್ನು ಮುಂದೆ ಬೇಗನೆ ಅಂತಹ ಗುರು ಜಂಗಮರು ಎಲ್ಲೆಡೆಗಳಲ್ಲಿಯೂ

ವೈದ್ಯರೋ ಈ ಕೊರತೆಯನ್ನು ಹೋಗಲಾಡಿಸಬೇಕೆಂದು ಸದ್ಭಕ್ತರೆಲ್ಲರೂ ಮನಃಪೂರ್ವಕವಾಗಿ ಬಯಸುತ್ತಿರುವರು.

(೭) ತ್ರಿವಿಧ ದಾಸೋಹ ವಂಚನೆಯೆಂದರೆ ಭಕ್ತಿಗೆ ಸಲ್ಲದು. ಜಂಗಮವೇ ಭೋಗಗಳನ್ನು ಅರ್ಪಿಸಲು ಸಮರ್ಥ. ಜಂಗಮಕ್ಕೆ ವಿವಾಹವಾಗಲಿ ಅವಿವಾಹವಾಗಲಿ ಕಾರಣವಲ್ಲ; ಗುಣವೇ ಕಾರಣ. ಗುರುಲಿಂಗಜಂಗಮಕ್ಕೆ ಕ್ರಮವಾಗಿ ತನು ಮನ ಧನಗಳನ್ನು ನಿರ್ವಂಚನೆಯಿಂದ ಅರ್ಪಿಸಬೇಕೆಂದು ಉಚಿತವಾದ ಯಥಾರ್ಥ ಮಾತು. ಹಾಗೆ ವರ್ತಿಸುವುದೇ ಭಕ್ತರ ಪರಮ ಕರ್ತವ್ಯ. "ಕಾಯ ಗುರು, ಸುಜ್ಞಾನ ಲಿಂಗ. ಅನುಭಾವ ಮಹಾಜ್ಞಾನ! ಜಂಗಮ" ಈ ವಚನವನ್ನು ಎಷ್ಟು ಮಾತ್ರವೂ ಮರೆಯತಕ್ಕದ್ದಲ್ಲ. ಕಾಯದ ಕರ್ಮೇಂದ್ರಿಯಗಳಿಂದ ಅನಾಚಾರವು ಎಷ್ಟು ಮಾತ್ರವೂ ಘಟಿಸದಂತೆಯೂ ಯಾವಾಗಲೂ ಸದಾಚಾರವೇ ಒದಗುವಂತೆಯೂ ವರ್ತಿಸಿದರೆ ಮಾತ್ರ, ತನುವನ್ನು ಗುರುವಿಗೆ (ಅರಿವಿಗೆ) ಸಮರ್ಪಿಸಿದಂತಾಗುವುದು. ಇದೇ ಮೇರೆಗೆ ಮನದ ವಿಷಯದತ್ತಣ ಹರಿದವೂ ದುರಾಲೋಚನೆಗಳೂ ದೂರಾಗಿ, ಅದು ಸುಜ್ಞಾನ (ಲಿಂಗ) ದಲ್ಲಿಯೇ ಉಳಿದರೆ ಆಗ ಮಾತ್ರ ಲಿಂಗಕ್ಕೆ ಅರ್ಪಿತವಾಗುವುದು. ಧನವೆಂದರೆ ಪ್ರಪಂಚದಲ್ಲಿ ನಾವು ಅನುಭೋಗಿಸುವ ಸರ್ವ ವಿಷಯಗಳು (ಪದಾರ್ಥಗಳು). ಅವನ್ನಲ್ಲಿ ಜಂಗಮಕ್ಕೆ ನಿಜ ಭಕ್ತನು ಅರ್ಪಿಸುವುದೆಂದರೆ, ಅವುಗಳ ನಾಮರೂಪಗಳನ್ನಳಿದು ಉಳಿವ ಉಳಿವೆಯೇ (ಅಂದರೆ ಲಿಂಗರೂಪವೇ) ಅವು ಎಂದು ಅನುಭಾವ (ಮಹಾಜ್ಞಾನ) ಯುಕ್ತನಾಗಿ ಹಾಗೆ ವರ್ತಿಸುವುದೇ ಆಗಿರುವುದು. "ಲಿಂಗರೂಪಂ ಜಗತ್ ಸರ್ವಂ" ಎಂಬ ಸ್ಥಿತಿಯನ್ನಳವಡಿಸಿಕೊಳ್ಳದಿದ್ದರೆ, ಧನವನ್ನು ಜಂಗಮಕ್ಕೆ ಅರ್ಪಿಸಿದಂತಾಗುವದಿಲ್ಲ. ಈ ವಿವರವು ಶುದ್ಧ ತಾತ್ವಿಕ ಸ್ವರೂಪದ್ದಾದರೂ, ಬಹಿರಂಗದಲ್ಲಿ ಭಕ್ತನು ತಾನು ಅನುಭೋಗಿಸುವ ಪ್ರತಿಯೊಂದು ಒಡವೆಯನ್ನು ಜಂಗಮಕ್ಕಿತ್ತುಕೊಳ್ಳಬೇಕೆಂಬುದು ಸಮುಚಿತವಾಗಿದೆ. ಆದರೆ ಹಾಗೆ ಭಕ್ತಿ ವಿಶ್ವಾಸಗಳು ನೆಲೆಗೊಳ್ಳುವಂತೆ ಗುರು ಜಂಗಮರು ಮೊದಲು ತಾವು ಚೊಕ್ಕ ಚಿನ್ನದಂತೆ ಪರಿಶುದ್ಧರಾಗುವುದು ಅವಶ್ಯ. ಇಲ್ಲದಿದ್ದರೆ ಭೋಗಿಸುವ ಕಾಲದಲ್ಲಿ ಅವರ ಸ್ಮರಣವೇ ಆಗಲಾರದ್ದು. ಈ ಮಾತು ಎಲ್ಲರ ಅನುಭವದ್ದೇ ಆದೆ. ಈ ತರದ ಜಂಗಮ ಮೂರ್ತಿಗಳು ತೀರ ಅಪರೂಪ

ವಾದುದರಿಂದಲೇ ಬರಿಯು ಲಿಂಗಾರ್ಪಿತದ ಮೇಲೆಯೇ ಅವಲಂಬಿಸಿ ನಿಲ್ಲುವ ಪ್ರಸಂಗಬಂದಿದೆ. ಭೂತ ಪ್ರಾಣಿಗಳಾಗಿರುವ ಸ್ವಾರ್ಥ ಜಂಗ ಮರಲ್ಲಿಯೂ ಸಾಮಾನ್ಯರಾದ ನರರಲ್ಲಿಯೂ ಅಂತಹವೇ ಉಳಿಯುದಿ ರುವುದರಿಂದ, ಮುಂದೆ ಬಂದು ನಿಲ್ಲುವ ಅನಾಥ ಜನರನ್ನೇ ಜಂಗಮ ಸ್ವರೂಪವೆಂದು ಭಾವಿಸಿ ತಮ್ಮ ಶಕ್ತ್ಯಾನುಸಾರ, ಆ ದಾರಿದ್ರ್ಯ ಪೀಡಿ ತರಿಗೆ ಧನವನ್ನರ್ಪಿಸುವ ಪರಿಪಾಠ ನಿರೂಢವಾಗಹತ್ತಿದೆ. ಈ ಪ್ರವೃ ಯನ್ನು ನಿಲ್ಲಿಸುವ ಸಲುವಾಗಿ ನಮ್ಮ ಗುರು ಜಂಗಮ ವರ್ಗವು ಪ್ರಯತ್ನಿಸಬೇಕು.

(೮) ಹುಸಿ, ಕಳವು, ಪರದಾರ, ಪರದೈವ ಭಜನೆ, ಭವಿಬಳಕೆ ಬಿಡದನ್ನಕ್ಕರ ಭಕ್ತನೆಂದಾಗಬಾರದು. ಅವ ಕಟ್ಟ ಭವಿ. ಈ ಪಂಚ ದುರ್ಗುಣಗಳ ಲಿಂಗಧಾರಕರಿಗೆ ಅತ್ಯಂತ ತ್ಯಾಜ್ಯವೆಂಬುದರಲ್ಲೇನೂ ಸಂದೇಹವಿಲ್ಲ. ಆದರೆ ಇವು ಉಳಿದ ಭಕ್ತರಲ್ಲಿ ತೋರುವಂತೆಯೇ ಸಮಾಜ ನೇತಾರರಾದ ಅಯ್ಯ ಗುರು ಜಂಗಮರಲ್ಲಿ ಒಳಿತಾಗಿ ವಾಸಿ ಸುತ್ತಿರುವುದು ಮಾತ್ರ ಬಹು ವಿಷಾದದ ವಿಷಯವು. ಇದಕ್ಕೆ ಅಪ ವಾದವಾಗಿ ಅಲ್ಲೊಂದು ಇಲ್ಲೊಂದು ಉದಾಹರಣೆಗಳು ತೋರಬಹುದು. ಆದರೆ ಒಟ್ಟಿನಲ್ಲಿ ಅವು ಅಡಗುವುವು. ತೀರ್ಥಕ್ಷೇತ್ರಗಳಿಗೆ ಎಡತಾಕು ವುದು ಷಡ್ರಿಪುಗಳಿಗೆ ಬಲಿ ಬೀಳುವುದು ಇವಂತೂ ಸಾರ್ವತ್ರಿಕವೇ ಸರಿ. ಸಮಾಜ ಮುಂದಾಳುಗಳೂ ಗುರು ಜಂಗಮರೂ ಮೊದಲು ತಾವು ಜಾಗ್ರತರಾಗಿ ಈ ಭವಿತ್ವವನ್ನು ನಾಶಗೊಳಿಸಿಕೊಂಡು ಉಳಿದ ವರನ್ನು ಹಾಗೆ ಮಾಡಲಿಕ್ಕೆ ಯತ್ನಿಸಿದರೆ ಮಾತ್ರ ಅದು ಸಾಧ್ಯವಾ ದೀತಲ್ಲದೆ, ಬರಿಯು ಉಪದೇಶಗಳಿಂದ ಏನೂ ಫಲವಾಗುವುದಿಲ್ಲೆಂಬುದು ಅನುಭವದ ಸಂಗತಿಯಾಗಿದೆ.

(೯) ಭಕ್ತರಲ್ಲಿ ದುರಹಂಕಾರಕ್ಕೆ ಎಡೆಯಿಲ್ಲ. ಅಹಂಕಾರ ಆಶೆ ಗಳೇ ಜಗತ್ತನ್ನೆಲ್ಲ ತಿಕ್ಕಿಮುಕ್ಕುತ್ತಿರುವಾಗ, ದುರಹಂಕಾರ ದುರಾಶೆಗ ಳಿಗೆ ಎಡೆಗೊಟ್ಟರಂತೂ ತೀರೇಹೋಯಿತು. "ನಾನು ಬಲ್ಲಿದನು, ನನ್ನ ನಡೆನುಡಿ, ಆಚಾರ ವಿಚಾರಗಳು ಆದರ್ಶವಾದವುಗಳು." ಎಂದು ಭ್ರಮಿಸಿಕೊಂಡು, ತನ್ನಲ್ಲಿ ಗುಣಾದಿಗಳ ಕಡೆಗೆ ಇಣಿಕಿಟ್ಟು ನೋಡದೆ, ಯಾವಾಗಲೂ ಅನ್ಯರ ಛಿದ್ರಗಳನ್ನೇ ಎಣಿಸಿ ನಿಂದಿಸುವ ದುರ್ಗುಣವೇ

ಮುಖ್ಯವಾಗಿ ದುರಹಂಕಾರವೆನಿಸುತ್ತದೆ. ತನ್ನ ಡೊಂಕನ್ನು ತಿದ್ದಿ ಕೊಳ್ಳದೆ ಪರರ ಡೊಂಕನ್ನು ತಿದ್ದಲಿಕ್ಕೆ ಓಡಾಡುವವರನ್ನು ಶ್ರೀ ಬಸ ವಣ್ಣನವರೂ ಅಲ್ಲಗಳೆದಿದ್ದಾರೆ.

ಒಟ್ಟಿಗೆ ಮೇಲೆ ಕಾಣಿಸಿದಂತೆ ಸದ್ಯಕ್ಕೆ ನಮ್ಮ ಸಮಾಜದ ಅಧೋ ಗತಿಯು ಸ್ವರೂಪವಿದೆ. ಅದು ತಿದ್ದಲ್ಪಟ್ಟ ಬಲವಾದ ಸಂಘಟನೆಯಾ ಗದೆ ಹೋದರೆ, ನಮ್ಮ ಸಮಾಜಕ್ಕೆ ಉಳಿಗಾಲವಿಲ್ಲೆಂದು ಎಲ್ಲರೂ ಒಳಿತಾಗಿ ನೆನಿಸಬೇಕು.

---

## ಗುರುಮಲ್ಲೇಶ್ವರ ಭಜನೆಯ ಪದ್ಯಗಳು.

( ಲೇಖಕರು:—ಬಿ. ಪುಟ್ಟಮಲ್ಲಪ್ಪ ಮಾಸ್ಟರ್ ಗುರುಮಲ್ಲೇಶ್ವರ ಶಿವಾನುಭವ ಸಂಘ, ಕೊಳ್ಳೇಗಾಲ. )

**ರಾಗ ಆದಿ**

ಗುರುಮಲ್ಲೇಶನ ಭಜಿಸು ಹೇ ಮನುಜ । ಪರಶಿವಮೋಕ್ಷವು ಸಿಗು ವುದು ಸಹಜ । ಉರದೊಳಗಿರುತಿಹ ಪರತರಮೂರ್ತಿಯು । ಕರದೊಳು ಕಾಣುವ ಪರಿಗೈದವನ ॥ ಅನು ಪ ॥

ಮೃತ್ಯು ಹರಿಸಿ ನಿತ್ಯ ಮುಕ್ತರ ಮಾಡಿ ಧರ್ಮ । ಕೃತ್ಯವ ತೋರಿದ ಪ್ರಭುವರನ । ಅತ್ಯುತ್ಸಾಹದಿ ಭಕ್ತಿಯಂಗವ ತೋರಿ । ಸ್ತುತ್ಯನಾದ ನಿರಂಜನನಾ ॥ ೧ ॥

ಈ ಕ್ಷಿತಿಯೊಳು ಬಲು ದಕ್ಷತೆಯಿಂದಲಿ । ಈಕ್ಷಿಸಿ ಭಕ್ತರ ಪೊರೆದ ವನಾ। ತ್ರ್ಯಕ್ಷ ಪದಾರ್ಚಕ ಪಕ್ಷಮಾಶ್ರಿತ । ಸಕ್ಷಮರಕ್ಷೋದ್ಧಾರಕನಾ॥೨॥

ಶಿವಮಾಯಕಾಯವಿಮಾಯಸಮಾಗಮ । ತನಕುಶೇಶಯ ಹಂಸನ । ಭವ ಬಾಡಬತತ ವಿಭ್ರಮ ಚಿನ್ಮಯ । ಕುವಲಯ ದೇವನ ಪುರಕ ಧೀಶನ ॥ ೩ ॥

**೨ ಪತಿ ದಾನವ ಕೊಡುರಾಜ (ಎಂಬಂತೆ)**

ಗುರುಮಲ್ಲದೇಶಿಕ ಭೂಪ । ದುರಿತಾಬ್ಧಿಬಾಡಬದೀಪ ॥ಪ॥

ಬ್ರಹ್ಮಾಂಡ ಮಂಡಿತಾಚಾರ್ಯ । ಪಿಂಡಾಂಡ ಶೋಧಿತ ಕಾರ್ಯ । ಅಖಂಡ ಭಕ್ತ ಕೃಪಾರ್ಯ । ಪಾಖಂಡ ಖಂಡನ ಧೈರ್ಯ ॥೧॥

ಅಷ್ಟಾವರಣ ವಿಚಾರ । ಇಷ್ಟಾಂಗಗೌರ ಶರೀರ । ಸೃಷ್ಟೀಗಧೀಶ ತುಷಾರ । ಸೃಷ್ಟೀ ಸ್ವರೂಪನುದಾರ ॥೨॥

ಸಾಂದ್ರ ಪ್ರಮಥಮುನೀಂದ್ರ । ಆನಂದ ಚಿದ್ರಸಸಾಂದ್ರ । ಕೇಂದ್ರ ಭದ್ರಗಣೇಂದ್ರ । ಮಹಿಮೇಂದ್ರ ಶರನಿಧಿ ಚಂದ್ರ ॥೩॥

**೩ ಮಾಯಾತೀತನೆ ದೇವ** (ಎಂಬಂತೆ)

ಶ್ರೀ ಗುರುಮಲ್ಲೇಶ । ಯೋಗಿ ಹೃತ್ಕಮಲೇಶ । ಭೋಗಿಶ ಪೂಜ್ಜೇಶ । ಓಂ ಓಂ ಓಂ ತ್ರಾಹಿತ್ರಾಹಿ ಫಾಲೇಕ್ಷಣ । ಹರಯೋಗ ನಿಗ್ರಣ । ಪರಶಿವಸ್ಮರಣದುರಿತ ವಿದ್ರಾವಣ । ಓಂ ಓಂ ಓಂ ॥೧॥

ಶಾಶ್ವತೋನ್ನತ ಸುಹೃತ । ವಿಶ್ವ ದಯಾನ್ವಿತ । ಈಶ್ವರಸಮ್ಮತ । ವಿಶ್ರುತೋನ್ವಿತ । ಓಂ ಓಂ ಓಂ ॥೨॥

ಮಂಗಳಾಂಗ ಮನೋಂಬುಜ । ಜಂಗಮಪದವ್ರಜ । ಲಿಂಗ ಸುಸರಸಿಜ । ಸಂಗಮಾನಸಿಜ । ಓಂ ಓಂ ಓಂ ॥೩॥

ವೀರಕುಲಕಧಿನಾಯಕ । ಗುರುತ್ವದಾಯಕ ದುರಿತನಿದಾರಕ । ಶರಣಜನೋತ್ಸುಕ । ಓಂ ಓಂ ಓಂ ॥೪॥

ದೇವಪುರಕಧೀಶ್ವರ । ದೇವೇಶಶಂಕರ । ದೇವಾಂಶ ಸುಂದರ । ಪಾವನ ಶ್ರೀಕಾರ ಓಂ ಓಂ ಓಂ ॥೫॥

**೪ ನಿಟಲಾಕ್ಷನ ಭಜಿಸು** (ಎಂಬಂತೆ)

ಪಾಲಿಸು ನಿರುತದಿ ಗುರುಮಲ್ಲೇಶ್ವರ । ಪಾಲಿಸು ಭಕ್ತೋದ್ಧಾರ ಕೃಪಾವರ । ಪಾಲಿಸು ಪಾವನ ದಿವ್ಯ ಶರೀರ । ಪಾಲಿಸು ಶಿವಕೃಪ । ಸಮಯೋದ್ಧಾರ ॥ ಪ ॥

ಶ್ರುತಿತತಿ ನುತ ಘನ ಜಿತ ರತಿ ಯತಿಪತಿ । ಸುರತತಿ ಸಂಸ್ತುತ ವಿರತಿರತೇ । ಮತಿಗತಿ ಹಿತಪತಿ ವಿತತ ಯಶೋನ್ನತ । ಯತಿ ವರಕೃತ ನುತಿ ಗತಿ ಪ್ರೀತಾ ॥ ೧ ॥

ಅಮಿತಗುಣಾಮಯ ಶಮಿತನತಾಮಯ । ಪ್ರಮಥ ಪುಂಗವ ನಾಥಜಯ । ಶಮದಮ ಗುಣಯುತ ಯಮಿಜನ ಸಂಸ್ತುತ । ಸುಮನಸ ಭಕ್ತೋದ್ಧಾರ ಹಿತ ॥ ೨ ॥

ಕಲಿಕಾಲುಷ ಹರ ಮಲತ್ರಯ ದೂರ । ಅಲಘುತರೋಜ್ವಲ ಸುಖಕರ । ವಲಸಿತ ಮನೋಹರ ದಿವ್ಯಶರೀರ । ಸುಲಲಿತ ಕಂಧರಶಂಕರ ॥೩॥

ಮಾಡಬಾರದು. ಮಾಡಿದರೆ ಅವರ ವಂಶವು ನಷ್ಟವಾಗುವದು. ಯಾಕಂದರೆ ಮಠವು ವಿದ್ಯಾರ್ಥಿಗಳ ನಿಲಯವು, ಪ್ರಾಪಂಚಿಕರ ಮನೆಯಲ್ಲ. ಅಲ್ಲಿ ವಿದ್ಯಾರ್ಥಿಗಳು ವಾಸಮಾಡಿಕೊಂಡಿರಬೇಕು. ಅವರಿಗೆ ಊಟದ ವ್ಯವಸ್ಥೆಯನ್ನು ಅಲ್ಲಿಯೇ ಮಾಡಿಸಬೇಕು. ವಾರದ ಮನೆಗಳನ್ನು ಹಚ್ಚಿಕೊಡಬಾರದು. ಹಚ್ಚಿಕೊಟ್ಟರೆ ವಿದ್ಯಾರ್ಥಿಗಳ ಅಭ್ಯಾಸಕ್ಕೆ ತೊಂದರೆಯಾಗುವದು ಮತ್ತು ಅವರ ಶೀಲಕ್ಕೆ ಕುಂದುಬರುವದು. ಆದ್ದರಿಂದ ಪ್ರತಿಯೊಂದು ಮಠವನ್ನು ಪಾಠಶಾಲೆಯನ್ನಾಗಿ ಮಾಡಬೇಕು. ವೀರಶೈವ ಆಚಾರ ವಿಚಾರಗಳನ್ನೂ ಮತತತ್ವಗಳನ್ನೂ ಸಂಸ್ಕೃತಿಯನ್ನೂ ಪ್ರಸಾರಗೊಳಿಸುವದಕ್ಕಾಗಿಯೇ ಹಿಂದಿನ ಹಿರಿಯರು ಮಠಗಳನ್ನು ಸ್ಥಾಪಿಸಿದ್ದಾರೆ. ಆದರೆ ಆ ಮಠಗಳೆಲ್ಲ ಕಾಲಾಂತರದಿಂದ ವ್ಯಕ್ತಿಗಳ ಸೊತ್ತಾಗಿ ಬಿಟ್ಟವೆ. ನಿಜವಾಗಿ ಮಠಗಳು ವ್ಯಕ್ತಿಗಳ ಆಸ್ತಿಗಳಲ್ಲ, ಸಮಾಜದ ಸೊತ್ತುಗಳು. ಆ ಮಠದ ಹಕ್ಕು ಬಾಬುಗಳಿಗಾಗಿ ಎಷ್ಟೋ ವ್ಯಕ್ತಿಗಳು ವ್ಯಾಜ್ಯಗಳಿಗಾಗಿ ಸಮಾಜದ ದುಡ್ಡನ್ನು ವ್ಯರ್ಥ ಹಾಳುಮಾಡಿದ ಉದಾಹರಣೆಗಳೆಷ್ಟೋ ಉಂಟು. ವಿದ್ಯಾರ್ಥಿಗಳ ಬದಲು ಆ ಮಠಗಳಲ್ಲಿ ಈಗ ಪ್ರಾಪಂಚಿಕರು ಮಕ್ಕಳು ಮರಿಗಳನ್ನು ಹಡೆದು ಸಂಸಾರ ಮಾಡುತ್ತಿರುವದುಂಟು. ಇದು ತೀರ ಲಾಂಛನಾಸ್ಪದವು. ಆದ್ದರಿಂದ ಹಳ್ಳಿಯ ವಿರಕ್ತ ಮಠಗಳನ್ನೆಲ್ಲ ಪುನರುಜ್ಜೀವನಗೊಳಿಸಿ ಪಾಠಶಾಲೆಗಳನ್ನು ಮಾಡುವದು ಅತ್ಯಾವಶ್ಯಕ.

ಒಬ್ಬ ಸ್ವಾಮಿಗಳ ಆಧೀನದಲ್ಲಿ ಅನೇಕ ಮಠಗಳಿರುವದರಿಂದ ಸ್ವಾಮಿಗಳು ಒಂದೇ ಊರಲ್ಲಿ ನೆಲಿಸಿರುವದಿಲ್ಲ. ಅವರು ಸದಾ ಸಂಚಾರಮಾಡುತ್ತಿರುವರು. ಆದ್ದರಿಂದ ಮಠಗಳು ಹಾಗೇ ಖಾಲಿ ಬಿದ್ದಿರುವವು. ಇಲ್ಲವೆ ಪ್ರಾಪಂಚಿಕರು ಅವುಗಳಲ್ಲಿ ವಾಸಮಾಡುತ್ತಿರುವರು. ಆದ್ದರಿಂದ ಸ್ವಾಮಿಗಳು ತಮ್ಮ ಮಠಗಳನ್ನೆಲ್ಲ ವಿದ್ಯಾಲಯಗಳನ್ನಾಗಿ ಮಾಡುವದು ಶ್ರೇಯಸ್ಕರವು. ಹಾಗೆ ಮಾಡುವ ಕಾಲವು ಈಗ ಬಂದಿದೆ. ತಾವಾಗಿಯೇ ಮಠಗಳನ್ನು ಪಾಠಶಾಲೆಗಳನ್ನು ಮಾಡುವದು ಒಳಿತು. ಇಲ್ಲದಿದ್ದರೆ ಅವು ತಾವಾಗಿಯೇ ಪಾಠಶಾಲೆಗಳಾಗುವವು. ಮಠದ ಸ್ವಾಮಿಗಳು ಹೇಳಿದಂತೆ ಭಕ್ತರೆಲ್ಲರೂ ಕೇಳುವದರಿಂದ ಆ ಊರಲ್ಲಿ ಒಂದು ಪಾಠಶಾಲೆಯು ಸಹಜದಾಗಿ ನಡೆಯುವದು. ಮಠವಿದ್ದರೆ ಸಾಕು. ಪಾಠಶಾಲೆಗೆ ಬೇರೆ ಕಟ್ಟಡದ ಅವಶ್ಯಕತೆಯಿಲ್ಲ. ಆದ್ದರಿಂದ ಸ್ವಾಮಿ

ಗಳು ಇನ್ನು ಸ್ವಾರ್ಥಪರಾಯಣರಾಗಿ ಮಠದ ಉತ್ಪನ್ನವನ್ನು ಬೆಳೆಯಿ
ಸುವ ಗೋಜಿಗೆ ಹೋಗದೆ ಮುಂಜಾಗ್ರತೆಯಿಂದ ತಮ್ಮ ಸರ್ವಸ್ವವನ್ನೆಲ್ಲ
ಪಾಠಶಾಲೆಗಾಗಿ ಧಾರೆಯೆರೆಯುವದು ಶ್ರೇಯಸ್ಕರವು. ಹಾಗೆ ಮಾಡ
ದಿದ್ದರೆ ಈಗಿನ ಸಮಾಜವಾದದ ಕ್ರಾಂತಿಕಾಲದಲ್ಲಿ ಮಠಗಳೆಲ್ಲ ಸುಲಭ
ವಾಗಿ ಪಾಠಶಾಲೆಗಳಾಗಬಹುದೆಂಬದನ್ನು ಸ್ವಾಮಿಗಳು ಲಕ್ಷಿಸಬೇಕು.

## ಪಾಠಶಾಲೆಗಳ ಘಟನೆ.

ಪಾಠಶಾಲೆಗಳಲ್ಲಿ ಒಂದು ಕ್ರಮಬದ್ಧವಾದ ಘಟನೆಯಿರುವದು
ನೆಟ್ಟಗೆ. ಹಳ್ಳಿಗಳ ಎಲ್ಲ ಪಾಠಶಾಲೆಗಳಿಗೂ ಒಂದೇ ಮಾದರಿಯ
ಅಭ್ಯಾಸ ಕ್ರಮವನ್ನು ಗೊತ್ತುಪಡಿಸಬೇಕು. ಹಳ್ಳಿಯ ಪಾಠಶಾಲೆಗಳ
ಅಭ್ಯಾಸವನ್ನು ಮುಗಿಸಿದ ಬಳಿಕ ವಿದ್ಯಾರ್ಥಿಗಳು ತಾಲೂಕಿನ ಸ್ಥಳ
ಗಳಲ್ಲಿ ಸ್ಥಾಪಿತವಾಗುವ ಪಾಠಶಾಲೆಗಳಿಗೆ ಮುಂದಿನ ಅಭ್ಯಾಸಕ್ಕಾಗಿ
ಹೋಗಬೇಕು. ತಾಲೂಕಿನ ಪಾಠಶಾಲಾಭ್ಯಾಸವು ಪೂರೈಸಿದ ನಂತರ
ವಿದ್ಯಾರ್ಥಿಗಳು ಜಿಲ್ಹಾ ಸ್ಥಳಗಳಲ್ಲಿ ಸ್ಥಾಪಿಸಲ್ಪಟ್ಟಿರುವ ಹೆಚ್ಚಿನ ತರ
ಗತಿಯ ಪಾಠಶಾಲೆಗಳಿಗೆ ಅಭ್ಯಾಸವನ್ನು ಮುಂದುವರಿಸಲು ಹೋಗ
ಬೇಕು. ಈ ಪ್ರಕಾರ ಹಳ್ಳಿ-ತಾಲೂಕ-ಜಿಲ್ಹಾ ಪಾಠಶಾಲೆಗಳಿಗೆ ಒಂದು
ಸಾಮಾನ್ಯವಾದ ಅಭ್ಯಾಸಕ್ರಮವನ್ನು ಗೊತ್ತುಪಡಿಸಬೇಕು. ಹಳ್ಳಿ-
ತಾಲೂಕ-ಜಿಲ್ಹಾ ವಿದ್ಯಾಸಂಸ್ಥೆಗಳಿಗೆ ಅನುಕ್ರಮವಾಗಿ ಪಾಠಶಾಲೆ, ಶಿಕ್ಷ
ಣಾಲಯ, ವಿದ್ಯಾಮಂದಿರ ಎಂಬ ಹೆಸರುಗಳನ್ನು ಕೊಡಬಹುದು.
ಇಲ್ಲವೆ ಯುಕ್ತಕಂಡ ಬೇರೆ ಸಾಮಾನ್ಯ ಹೆಸರುಗಳನ್ನು ಕೊಡಬ
ಹುದು. ಈ ಕ್ರಮವು ಮುಂಬಯಿ, ಮದ್ರಾಸ, ಮೈಸೂರು, ನಿಜಾಮ
ಪ್ರಾಂತ ಮತ್ತು ಇತರ ದೇಶೀ ಸಂಸ್ಥಾನಗಳಲ್ಲಿರುವ ಆಯಾಯ
ಹಳ್ಳಿ-ತಾಲೂಕ-ಜಿಲ್ಹೆಗಳ ವಿದ್ಯಾಸಂಸ್ಥೆಗಳಿಗೂ ಸಮನ್ವಯಿಸಬೇಕು.

ಎಲ್ಲ ಪ್ರಾಂತಗಳ ಅಂದರೆ ಅಖಿಲ ಕರ್ನಾಟಕ ವೀರಶೈವರ ಪರ
ವಾಗಿ ಆಯಾಯ ಪ್ರಾಂತದ ಪ್ರತಿನಿಧಿಗಳಿಂದ ಕೂಡಿದ ಒಂದು ವಿದ್ಯಾ
ಪೀಠ (*University*)ಯನ್ನು ಒಂದು ಮಧ್ಯವರ್ತಿ ಸ್ಥಳದಲ್ಲಿ ಅಂದರೆ
ಗದಗಿನಲ್ಲಿ ಸ್ಥಾಪಿಸಬೇಕು. ಈ ವಿದ್ಯಾಪೀಠದವರು ಆಯಾಯ ತರ
ಗತಿಯ ಪಠ್ಯಪುಸ್ತಕ, ಅಭ್ಯಾಸಕ್ರಮ, ಪರೀಕ್ಷೆ, ಗ್ರ್ಯಾಂಟಿನ ಯೋಜನೆ,

### ೫ ರೇಣುಕ ಗುರುನಾಥ ಜಯ (ಎಂಬಂತೆ)

ಪೊರೆಗುರು ಮಲ್ಲೇಶ ಜಯ । ಚರವೃಂದ ವಂದ್ಯಾಯ । ಪರಿಪೂತದೇಹಾಯ । ಪ್ರಮಥೇಶ ವಿಭೋ ॥ ೧ ॥

ಭಕ್ತಮೂಲ ಭಂಗಾಯ । ಶಿವಲಿಂಗ ಸಂಗಾಯ । ಕವಿತುಂಗಸೇವ್ಯಾಯ । ಅವಿರಳ ಮಯಭೋ ॥ ೨ ॥

ಭೂಪನಿವಹೋಪನತ । ಚಾಪಲ ಮಯೋಪಯುತ । ಕೋಪಹೃತ ಭಾಪುಸುತ । ರೂಪಮಯಂಭೊ ॥ ೩ ॥

### ೬ ರಕ್ಷಿಸು ಗುರುಮಲ್ಲೇಶಾ (ಎಂಬಂತೆ)

ಪಾಲಿಸು ಗುರುಮಲ್ಲೇಶಾ ಸುಶೀಲಯತಿ ಜನಕೋಶಾ । ಫಾಲಗುಪ್ತ ಪ್ರಕಾಶ । ಭವ । ಮೂಲಬಾಡಬಧೀಶಾ ॥ಪ॥

ದುರಿತಾಂಬು ನಿಧಿ ನಿರ್ಧ್ವಂಶ । ಸತ್ಯರಣಜನೋತ್ಸುಕ ಹಂಸಸ್ಮರಮದನಾಶಕ ಕಂಸ । ಗುರು । ಚರಕುಲರೇಣುಕ ಅಂಶ ॥೧॥

ಮದಮೋಹಮತ್ಸರ ರಹಿತ । ವಿಧಿ ಮುಖ್ಯ ಸುರಕುಲನಮಿತ । ಬುಧವೃಂದ ಕೀರ್ತಿಸು ಚರಿತ । ಹೃದಯಾಂಗ ಲಿಂಗೋಚ್ಚರಿತ ॥೨॥

ಧೃತವೇದ ಪೂಜಿತ ಲಿಂಗ । ಕೃತಭಕ್ತ ದುರಿತತತಿ ಭಂಗ । ಶೃತಮೂರ್ತಿ ಕೀರ್ತಿ ಪ್ರಸಂಗಾ । ವೃತಜಂಗಮ ರತ್ನ ಸುಸಂಘಾ ॥೩॥

### ೭ ಬಸವಾ ಎನಗೊಲಿಯೋ (ಎಂಬಂತೆ)

ಗುರುವೇ ಎನಗೊಲಿಯೋ। ಗುರುಮಲ್ಲೇಶನೆ ಎನಗೊಲಿಯೋ॥ಪ ॥

ಗುರುವೆ ಎನಲು ಪರತರಮೋಕ್ಷವು ತಾ । ದೊರಕುವುದೆನ್ನುತೆ । ಶ್ರುತಿ ಸಾರುವುದೈ ॥೧॥

ಅತುಳಿತ ಘನಲಿಂಗ ಸಂಗ । ಶ್ರುತಿಭರಿತ ಕೃಪಾಂಗ । ಜಿತಯುತಿಮದಮಾತಂಗಮೃಗಾಧಿಪ । ನತಮಂದಾರ ತ್ರಿಕೂಟನಿಜಾಂಗ ॥೨॥

ಧಾರುಣಿ ಮಾರುಚಿರಯಮಾಂಗ । ಪೂರಣ ಮಾತ್ಮಸುಖ । ಧೀರಣ ಸತಪದ । ವಾರುಣ ಮುಖಸ್ತುತ । ಕಾರುಣಮಂಬುದುರೀಷನಿವಾರಣ ॥೩॥

ಶಂಬರಾರಿವಿಲಯ । ದೇವನ । ಸಂಭ್ರಮ ಪುರನಿಲಯ । ನಂಬಿ ಭಜಿಪರಂ ಭುಜ ವಿಶ್ವಂಭರ । ಕುಂಭಿನೀಂದ್ರ ಚಿದಾಲಂಬಯತಿವರ ॥೪॥

---

ಗಳನ್ನು ಬಸವೇಶ್ವರನು ಕಂಡು ಹರ್ಷಯುಕ್ತನಾಗಿ ಇಲ್ಲಿ ನುಡಿದಿದ್ದಾನೆ. ಒಬ್ಬ ಶೂರ ಸೇನಾಪತಿಯು ಬಾಯೊಳಗಿಂದ ಹೊರಡತಕ್ಕ ಮಾತುಗಳು ಇವಾಗಿವೆ.

ಅಂಕ ಕಂಡಾ ಕೋಲಿನಾಸೆ ಮತ್ತೇಕಯ್ಯ ಲೆಂಕ ಕಂಡಾ ಪ್ರಾಣದಾಸೆ ಮತ್ತೇಕಯ್ಯ ಭಕ್ತ ಕಂಡಾ ತನುಮನದಾಸೆ ಮತ್ತೇಕಯ್ಯ. (೪೪೮)

ಶೂರನು ಪ್ರಾಣದಾಸೆಯನ್ನು ಹಿಡಿಯಕೂಡದೆಂದು ಬಸವೇಶ್ವರನು ಇಲ್ಲಿ ಹೇಳುತ್ತಾನೆ.

ಅಟ್ಟಾಟಿಕೆಯ ಮಾತನಾಡಲ್ಲದೇಕೋ? ಮುಟ್ಟಿಬಂದುದಕ್ಕಂಜಲೇಕೋ? ಕಾದಿದಲ್ಲದೆ ಮಾಣೆನು ಓಡಿದರೆ ಭಂಗ ಹಿಂಗದಾಗಿ. (೪೪೯)

ಇಲ್ಲಿ ಬಸವೇಶ್ವರನು ಯುದ್ಧದಲ್ಲಿ ಕಾದಾಡಬೇಕು ಅಂಜಬಾರದು ಓಡಬಾರದು ಎಂದು ಹೇಳುತ್ತಾನೆ.

ಬಲ್ಲದರೊಡನೆ ಬವರವಾದೊಡೆ ಗೆಲ್ಲಲುಂಟೆ? ಸೋಲಲುಂಟು. (೪೫೦)

ಇದಾದರೂ ಯುದ್ಧಕಾರ್ಯಕ್ಕೆ ಸಂಬಂಧಿಸಿದ ವಚನವು.

ವೇದದಂತುಟಲ್ಲ ಶಾಸ್ತ್ರದಂತುಟಲ್ಲ. ಗೀತಮಾತಿನಂತುಟಲ್ಲ. ಕೇಳಯ್ಯ ಮಾತಿನ ಮಾತಿನ ಕೌಳುಗೋಲ ಶ್ರವದಲ್ಲಿ ಸತ್ತವರೊಳರೇ? ಅಯ್ಯಾ ದಿಟದಲಗಿನ ಕಾಳಗವಿತ್ತದಲಿದ್ದುದೇ ಕೂಡಲ ಸಂಗನ ಶರಣರು ಬಂದಲ್ಲಿ (೪೫೧)

ಇದರಲ್ಲಿ ಕೇವಲ ಶಸ್ತ್ರಾಭ್ಯಾಸ ಮತ್ತು ನಿಜವಾದ ಕಾಳಗ ಇವುಗಳಲ್ಲಿದ್ದ ಭೇದವನ್ನು ತೋರಿಸಿ ಬರೀ ಮಾತಿನಿಂದ ಪ್ರಯೋಜನವಿಲ್ಲೆಂದು ಹೇಳುತ್ತಾನೆ.

ಬಾಲಭ್ಯಾಸವ ಮಾಡಹೋದರೆ ಎನ್ನ ಸುರಿಗಿ ಎನ್ನನಿಟ್ಟಿತ್ತು. ಎಂತಯ್ಯ? ಕಲಿಯೊಡನೆ ಶ್ರವವ ಮಾಡುವೆನು. (೪೫೨)

ಇದರಲ್ಲಿ ಗರುಡಿಮನೆಯಲ್ಲಿ ಅಭ್ಯಾಸ ಮಾಡಹೋದರೆ ನನ್ನ ಕತ್ತಿಯು ನನಗೆ ನಟ್ಟಿತು ಇದು ಎಂತಹದು, ಎಂದು ಪ್ರಶ್ನೆ ಮಾಡಿ ಕೇವಲ ಬಾಹ್ಯಾಡಂಬರದ ಕ್ರಿಯೆಗಳಿಂದ ಯಾವ ಪರಿಣಾಮಗಳಾಗುತ್ತವೆಂಬುದನ್ನು ಹೇಳುತ್ತಾನೆ.

ಇವುಗಳ ಮೇಲಿಂದ ಬಸವೇಶ್ವರನಿಗೆ ಶಸ್ತ್ರಾಭ್ಯಾಸದ ಮತ್ತು ಯುದ್ಧಕಲೆಯ ಜ್ಞಾನವಿದ್ದಿತೆಂಬುವು ಕಂಡುಬರುತ್ತದೆ. ಈ ರೀತಿಯಾಗಿ ಅವನ ವಚನಗಳಲ್ಲಿ ಬರುವ ಉಲ್ಲೇಖಗಳು ಕೇವಲ ಆಕಸ್ಮಿಕವಾದವು ಗಳಲ್ಲೆಂದು ನಮಗೆ ತೋರುತ್ತದೆ. ಅವನು ಸೈನಿಕರಲ್ಲಿ ಓಡಾಡುತ್ತಿದ್ದುದರಿಂದಲೇ ಅವನಿಗೆ ಈ ರೀತಿ ಬೋಧೆಮಾಡುತ್ತ ಮಹತ್ವದ ಧಾರ್ಮಿಕ ವಿಚಾರಗಳನ್ನು ತನ್ನ ವಚನಗಳಲ್ಲಿ ಹೊರಗೆಡಹಿದ್ದಾನೆ. ಅವನು ಒಂದೆಡೆಯಲ್ಲಿ ಏಕಾಂತವಾಗಿ ಕುಳಿತುಕೊಳ್ಳದೆ ಅನೇಕ ತರದ ಜನರಲ್ಲಿ ಸಂಚರಿಸುತ್ತ ತನ್ನ ಧರ್ಮಬೋಧೆಯನ್ನು ಮಾಡುತ್ತಾ ಹೋಗಿದ್ದಾನೆಂದು ನಮಗೆ ತೋರುತ್ತದೆ ಮೇಲಿನ ಪ್ರತಿಯೊಂದು ವಚನದಲ್ಲಿ ಕೆಲವೊಂದು ಉಚ್ಚ ಧಾರ್ಮಿಕ ತತ್ವಗಳು ಅಡಕವಾಗಿರುತ್ತವೆ. ಲೇಖವಿಸ್ತಾರದ ಭಯಕ್ಕಾಗಿ ನಾವು ಅವುಗಳನ್ನೆಲ್ಲ ಈ ಲೇಖದಲ್ಲಿ ಚರ್ಚಿಸಿಲ್ಲ. ವಾಚಕರು ಮೂಲ ವಚನಗಳನ್ನು ಪರಿಶೀಲಿಸಿದಲ್ಲಿ ನಾವು ಹೇಳಿದ್ದರ ನಿಜತ್ವವು ಅವರಿಗೆ ಕಂಡುಬರದಿರಲಾರದು. ಇದೇ ವಿಷಯವಾಗಿ ಇನ್ನೂ ಅನೇಕ ವಚನಗಳಿದ್ದು ಅವುಗಳನ್ನು ಮುಂದಿನ ಲೇಖದಲ್ಲಿ ಕೊಡುವೆವು.

(ಮುಂದೆ ಸಾಗುವದು)

---

## ನೀತಿಯ ಮಾತುಗಳು.

(ಲೇಖಕ:— ಜಿ. ಎಸ್. ಕನ್ನೂರ ಮು. ವಿಜಾಪುರ.)

ನಿಂದಿಸಿದರೆಂದರೆ ಯಾರನ್ನು ನಿಂದಿಸಿದರು? ಯಾವದೋ ಒಂದು ನಾಮ ಮಾತ್ರವನ್ನು! ಇಲ್ಲದವನಿಗೆ ಅಂದದ್ದನ್ನು ನಾನೇಕೆ ಹಚ್ಚಿಕೊಂಡು ಕೊರಗಲಿ?

ನಿಂದೆಯೆಂದರೆ ಹೆಚ್ಚಿಗೆ ಏನು ಮಾಡಿದರು? ಅನೇಕ ನಿಂದ್ಯ ಪದಾರ್ಥಗಳಿಂದ ಕೂಡಿದ ದೇಹವನ್ನೇ ಅವರು ನಿಂದಿಸಿದರು. ಅಲಿಪ್ತನಾದ ನನ್ನನ್ನಂತೂ ಅವರು ನಿಂದಿಸಲಾರರಷ್ಟೇ ?

ನಾನು ಬಚ್ಚಿ ಇಡುವ (ಅವ) ಗುಣಗಳನ್ನೇ ಅವರು ಬಿಚ್ಚಿ ಆಡಿದರು! ಅದರಲ್ಲಿ ಸುಳ್ಳು ಏನಿದೆ?

ಕೀರ್ತಿಯಿಂದ ಗುಣಗಳ ಪ್ರತಿಫಲವು ದೊರಕುವಂತೆ ಸರ್ವತ್ರ ನಿಂದಾರೂಪ ಅಪಕೀರ್ತಿಯಿಂದ ದೋಷಗಳಿಗೆ ಪ್ರಾಯಶ್ಚಿತ್ತ ದೊರೆ ತಂತಾಗಿ ದೋಷದ ಹೊರೆಯು ಹಗುರಾಗುತ್ತದೆ

ನಿಂದೆಯಾಡಿ ಆ ಪುಣ್ಯಾತ್ಮರು ನನ್ನ ದೋಷಗಳನ್ನು ತೊಳೆಯು ತ್ತಾರೆ. ಬೆಲೆ ತಕ್ಕೊಳ್ಳದೆ ನನ್ನಲ್ಲಿಯ ಕಿಲ್ಮಿಷವನ್ನು ಸ್ವಂತದ ನಾಲಿಗೆ ಯಿಂದ ಬಳಿದು ಸ್ವಚ್ಛ ಮಾಡುವವರ ಉಪಕಾರ ತೀರಿಸುವ ಬಗೆಯೇನು?

ನಿಂದಕರ ಮನೆಯು ನೆರೆಯಲ್ಲಿಯೇ ಇರಬೇಕು. ಯಾಕಂದರೆ 'ಎರಡನೆಯವರ ಕಣ್ಣೊಳಗಿನ ಸೂಕ್ಷ್ಮ ಎಸಳು ಕಾಣಿಸುತ್ತದೆ. ಆದರೆ ತನ್ನ ಕಣ್ಣೊಳಗಿನ ಬಾಸಳವು ಕಾಣುವದಿಲ್ಲ'ವೆಂಬ ನಾಣ್ಣುಡಿಯಂತೆ ನನ್ನ ದೋಷಗಳು ನನಗೇ ತಿಳಿಯುತ್ತಿರುವದಿಲ್ಲ. ಆ ಕಪ್ಪು ದೋಷಗ ಳನ್ನು ಬೈಲಿಗೆಳೆದು ನಿಂದಕ ಮಹಾಶಯರು ನನ್ನ ಮೇಲೆ ಉಪಕಾರ ಮಾಡುತ್ತಿರುವರು ಅವರಾಡುವ ಮಾತುಗಳಲ್ಲಿಯ ಸತ್ಯಾಂಶವನ್ನು ನಿರ್ವಿ ಕಾರತೆಯಿಂದ ಕಂಡುಕೊಳ್ಳುವ ಧೀರತೆಯು ನನಗೆ ಎಂದಿಗೆ ಪ್ರಾಪ್ತ ವಾದೀತು!

ಆದರೆ ಅನ್ಯರು ಆರೋಪಿಸಿದ ವೃಥಾ ದೋಷಗಳನ್ನು ಮೈಮೇಲೆ ಹಾಕಿಕೊಂಡು ಸಿಟ್ಟಿಗೇಳಲೇಕೆ? ಅದು ನನ್ನ ಪರೀಕ್ಷೆಯ ವೇಳೆಯಿರು ತ್ತದೆ. ಅನ್ಯರು ಹಠಾತ್ತಾಗಿ ಅಂಟಿಸಿದರೂ ನನಗೆ ದೋಷಗಳು ತಗ ಲದಿದ್ದರೆ ನನ್ನ ವಿಜಯವಾಯಿತು.

ನನ್ನ ನಿಂದೆಯಿಂದ ಪರಸ್ಪರ ಸಂತೋಷಬಟ್ಟರೆ ನನಗೂ ಸಂತೋ ಷವೇ! ಯಾಕಂದರೆ ಸರ್ವತೋಪರಿ ಯತ್ನದಿಂದ ಅವರನ್ನು ಸಂತುಷ್ಟ ಮಾಡಬೇಕೆನ್ನುವ ನನ್ನ ಇಚ್ಛೆಯನ್ನು ಅವರು ನನಗೆ ಆಯಾಸ ಕೊಡದೆ ಪೂರೈಸುವರು. ನನ್ನಿಂದ ಸ್ವಪರ ಸಾಧಾರಣವು ಯತ್ಕಿಂಚಿತವೂ ಶ್ರಮವನ್ನು ಅಪೇಕ್ಷಿಸದೆ ನನ್ನ ಧ್ಯೇಯವನ್ನು ಅವರು ತಮ್ಮ ಪುಣ್ಯ ಖರ್ಚುಹಾಕಿ ಪೂರೈಸಿಕೊಟ್ಟರೆ ನನ್ನ ಭಾಗ್ಯಕ್ಕೆ ಎಣೆಯಿರುವದೆ?

'ಪ್ರಭೋ! ಅವರು ನಿಂದೆಯಾಡಬೇಕಾದರೆ ಅವರಿಗೆ ನನ್ನ ದ್ವೇಷ ಕ್ಕಿಂತಲೂ ಧನ, ಮಾನ, ವಿದ್ಯೆ ಮುಂತಾದವುಗಳಿಂದ ಅವರ ಪರಿ ಸ್ಥಿತಿಯು ನನ್ನಕಿಂತ ಹೀನವಿರುವದೇ ಮುಖ್ಯ ಕಾರಣವಿರುತ್ತದೆ. ಅದನ್ನು ಹಿಂಗಿಸಿ ಅವರನ್ನು ಸುಖಿಗಳಾಗಿ ಮಾಡಲಾರಿಯಾ?

# ಶಿವಶರಣರ ಶಿವಾನುಭವ ಮಂಟಪ.

(ಲೇಖಕ:— ಶಿವಮೂರ್ತಿ.)

---

ಕ್ರಿ. ಶ. ೧೨ನೆಯ ಶತಮಾನದಲ್ಲಿ ಇಡೀ ಜಗತ್ತನ್ನೇ ನಿಬ್ಬೆರಗುಗೊಳಿಸುವ 'ಶಿವಾನುಭವ ಮಂಟಪ'ವೆಂಬ ತೇಜೋಮಯವಾದ ಸಂಸ್ಥೆಯೊಂದು ಪ್ರಾದುರ್ಭವಿಸಿತು. ಅದು ತತ್ವಜ್ಞಾನಿಗಳ ಚಕ್ರಗೋಷ್ಠಿಯೋ, ದಿವ್ಯಜ್ಞಾನಿಗಳ ಜ್ಯೋತಿರ್ಮಂಡಲವೋ, ಸಮಾಜ ಸುಧಾರಕರ ಉಗಮಸ್ಥಾನವೋ. ಧರ್ಮಜಾಗ್ರತಿಯ ಉತ್ಕ್ರಾಂತಿ ಸದನವೋ, ಪತಿತೋದ್ಧಾರದ ಪಾವನಮಂದಿರವೋ, ಎಂಬಂತೆ ಕಂಗೊಳಿಸುತ್ತಿತ್ತು. ಆ ಶಿವಾನುಭವಮಂಟಪವೆಂಬ ವಿಶಾಲಗಗನದಲ್ಲಿ ಮಿನುಗುವ ಅಸಂಖ್ಯಾತ ಶಿವಶರಣರೆಂಬ ನಕ್ಷತ್ರಮಂಡಲದ ಮಧ್ಯದಲ್ಲಿ ಬಸವ, ಚೆನ್ನಬಸವ, ಅಲ್ಲಮಪ್ರಭು, ಅಕ್ಕಮಹಾದೇವಿ, ಸಿದ್ಧರಾಮ ಮೊದಲಾದ ಜೀವಜ್ಯೋತಿಗಳು ದೇದೀಪ್ಯಮಾನವಾಗಿ ವಿರಾಜಿಸುತ್ತಿದ್ದವು. ಈ ನಿರಾಕಾರದ ವಿಶ್ವಸಾಗರದ ಆಳದಲ್ಲಿ ಒಳಹೊಕ್ಕು ಶಿವಶರಣರು ಶೋಧಿಸಿ ತೆಗೆದ ಉಜ್ವಲ ತತ್ವಗಳೆಂಬ ರತ್ನರಾಶಿಗಳು ತ್ರಿಕಾಲಾಬಾಧಿತವಾಗಿ ರಂಜಿಸುತ್ತಿರುವವು.

ಆ ಶಿವಾನುಭವ ಮಂಟಪದಲ್ಲಿ ಎಂಥ ಅಘಟಿತ ಘಟನಾಕಾರ್ಯಗಳು ಜರಗಿದವೆಂಬುದನ್ನು ಬಲ್ಲಿರಾ? ಅದರಲ್ಲಿ ಶಿವಶರಣರು ಮಥಿಸಿ ತೆಗೆದ ಎಂಡೆಂಭತ್ತುಕೋಟಿ ವಚನಗಳು ಜಗತ್ತಿನ ಯಾವ ದೇಶದ ಇತಿಹಾಸದಲ್ಲಿ ಕಂಡುಬರುತ್ತಿವೆ? ಯಾವ ದೇಶದ ಇತಿಹಾಸದಲ್ಲಿ ಅಸಂಖ್ಯಾತ ದಿವ್ಯಜ್ಞಾನಿಗಳು ಏಕಕಾಲಕ್ಕೆ ಉದಿಸಿದ್ದಾರೆ? ಯಾವ ದೇಶದ ಸಾಮಾಜಿಕ ಧಾರ್ಮಿಕ ಸುಧಾರಣೆಗಳು ಶಿವಶರಣರು ಗೈದ ಸುಧಾರಣೆಗಳನ್ನು ಮೀರಿಹೋಗಿವೆ? ಶಿವಶರಣರು ಸಮಾಜಸುಧಾರಕರೂ ಧಾರ್ಮಿಕ ಸುಧಾರಕರೂ ಆಗಿದ್ದರಿಷ್ಟೇ ಅಲ್ಲ. ಒಳ್ಳೆ ಯೋಧರೂ ಆಗಿದ್ದರು. ಇಂಥ ವೈಚಿತ್ರ್ಯವು ಯಾವ ದೇಶದ ಇತಿಹಾಸದಲ್ಲುಂಟು? ಕ್ರಿಸ್ತನು ಗುರುವಾಗಿದ್ದರೆ ಆತನಿಗೆ ಅನೇಕರು ಶಿಷ್ಯರಾಗಿರಬಹುದು. ಮಹಮ್ಮದಪೈಗಂಬರರು ಗುರುಗಳಾಗಿದ್ದರೆ ಅವರ ಅನುಯಾಯಿಗಳು ಅನೇಕರಾಗಿರಬಹುದು. ಬುದ್ಧನು ಗುರುವಾಗಿದ್ದರೆ ಆತನ ಧರ್ಮಪ್ರಸಾರಕರನೇಕರಿರಬಹುದು. ಸಾಕ್ರಟೀಸನ ತತ್ವಗಳನ್ನು ಪ್ರಸಾರ ಮಾ

ಕಡೆಗೆ ಕಳುಹಿಸಿ ಅವನಿಗೆ--- ನಿನ್ನ ಮಗಳನ್ನು ನನಗೆ ಕೊಟ್ಟು ಲಗ್ನ ಮಾಡಬೇಕೆಂದು ತಿಳಿಸಿದನು. ಇದಕ್ಕೆ ಭೀಮಯ್ಯನು ಒಪ್ಪಿಕೊಳ್ಳಲಿಲ್ಲ. ಅವನು ತಾನು ಶಿವಭಕ್ತನಾಗಿದ್ದು ತನ್ನ ಮಗಳನ್ನು ಭಕ್ತ ಶಿರೋಮಣಿಯಾದ ವೀರ ಸಂಗಯ್ಯನಿಗೆ ಕೊಡಬೇಕೆಂದು ನಿಶ್ಚಯ ಮಾಡಿದ್ದೇನೆ, ನನ್ನ ಮಗಳನ್ನು ನಿನಗೆ ಕೊಡುವದಿಲ್ಲೆಂದು ಹೇಳಿಕಳುಹಿಸಿದನು. ಅದನ್ನು ಭಾಸ್ಕರನು ಕೇಳಿ ಖತಿಗೊಂಡು ಲಗ್ನವನ್ನು ಹೇಗಾದರೂ ಮಾಡಿ ತಡೆಯಬೇಕೆಂದು ನಿಶ್ಚಯಿಸಿದನು.

ಲಗ್ನದ ದಿವಸವನ್ನು ಗೊತ್ತುಮಾಡಿದ ಬಳಿಕ ವೀರಸಂಗಯ್ಯನು ತನ್ನ ಭಕ್ತ ಸಮೂಹದೊಡನೆ ಲಗ್ನಕ್ಕಾಗಿ ಕೋವೂರು ಪಟ್ಟಣಕ್ಕೆ ಬಂದನು. ಅಲ್ಲಿ ಲಗ್ನಸಮಾರಂಭವೂ ಜರಿಗಿತು. ಅರಸನ ಕುಮಾರನು ಲಗ್ನವಾಗಬಾರದೆಂದು ಎಷ್ಟು ಪ್ರಯತ್ನಿಸಿದರೂ ಅದು ಸಫಲವಾಗಲಿಲ್ಲ. ಇದರಿಂದ ಭಾಸ್ಕರನು ಮತ್ತಿಷ್ಟು ಕೆರಳಿದವನಾಗಿ ವೀರಸಂಗಯ್ಯನು ತನ್ನ ಹೆಂಡತಿಯನ್ನು ಕರೆದುಕೊಂಡು ಹೋಗುವ ಕಾಲದಲ್ಲಿ ಮಾರ್ಗದಲ್ಲಿ ಅವನ ಮೇಲೆ ಬಿದ್ದು ಬಲಾತ್ಕಾರದಿಂದ ಅವಳನ್ನು ಅಪಹರಿಸಿಕೊಂಡು ಹೋಗಬೇಕೆಂದು ನಿಶ್ಚಯಿಸಿದನು. ಬಿದಿರಿಕೊಟ್ಟೆಯ ಶಿವಭಕ್ತರು ಲಗ್ನ ತೀರಿಸಿಕೊಂಡು ತಮ್ಮ ಗ್ರಾಮಕ್ಕೆ ತಿರುಗಿ ಹೋಗುತ್ತಿರುವಾಗ ಭಾಸ್ಕರನು ತನ್ನ ಸೈನ್ಯದೊಂದಿಗೆ ಬಂದು ಅವರ ಮೇಲೆ ಮಾರ್ಗದಲ್ಲಿ ಬಂದೆರಗಿದನು. ಆಗ ಉಭಯ ತಂಡಗಳಲ್ಲಿ ತುಮುಲ ಯುದ್ಧವೆಸಗಿತು. ವೀರಸಂಗಯ್ಯನೂ ವೀರ ಶಿವಭಕ್ತರೂ ಅತ್ಯಂತ ಶೂರತನದಿಂದ ಕಾದಾಡಿ ಭಾಸ್ಕರನ ಸೈನ್ಯವನ್ನು ಸೋಲಿಸಿ ಹಿಂದಕ್ಕಟ್ಟಿದರು. ಭಾಸ್ಕರನು ರಣಭೂಮಿಯಿಂದ ಓಡಿ ಹೋದನು. ಶಿವಭಕ್ತರು ಅವನನ್ನು ಬೆನ್ನಟ್ಟಿ ಬರಲು ಅವನು ಅಲ್ಲಿಯೇ ಅರಣ್ಯದಲ್ಲಿ ಒಂದು ಕಡೆಗೆ ಅಡಗಿಕೊಂಡು ನಿಂತನು.

ವೀರಸಂಗಯ್ಯನು ಈ ಪ್ರಕಾರ ಕೋವೂರು ದಂಡಾಳುಗಳನ್ನು ಚದುರಿಸಿದ ಬಳಿಕ ಅವನು ರಣಭೂಮಿಯನ್ನು ನೋಡಬೇಕೆಂದು ಹೊರಟನು. ಅಲ್ಲಿ ಭಕ್ತರ ಹೊಡೆತದಿಂದ ಸತ್ತು ಹೋಗಿದ್ದ ಹೆಣದ ರಾಶಿಗಳು ಬಿದ್ದಿದ್ದವು. ಅವುಗಳನ್ನು ಅವನು ನೋಡುತ್ತ ಹೋಗುವಷ್ಟರಲ್ಲಿ ಅಲ್ಲಿ ಒಂದು ಮೃತದೇಹವು ಅವನ ದೃಷ್ಟಿಗೆ ಬಿದ್ದಿತು. ಅದರ ಹಣೆಯ

ಮೇಲೆ ಭಸಿತ, ಅಂಗದಲ್ಲಿ ಲಿಂಗವಿದ್ದದ್ದನ್ನು ಕಂಡನು. ಹೀಗೆ ಯುದ್ಧ ಕಾಲದಲ್ಲಿ ತನ್ನಮೂಲಕ ಒಬ್ಬ ಶಿವಭಕ್ತನು ಮಡಿದು ಹೋದನೆಂಬುದನ್ನು ನೋಡಿ ಅವನಿಗೆ ಬಹಳ ಪಶ್ಚಾತ್ತಾಪವಾಯಿತು. ಈ ಶಿವಭಕ್ತನ ಪ್ರಾಣವನ್ನು ಮರಳಿ ಪಡೆಯಬೇಕೆಂಬ ಇಚ್ಛೆಯು ಅವನಲ್ಲಿ ಉತ್ಪನ್ನವಾಯಿತು. ಆಗ ಅವನು ಪರಮಾತ್ಮನನ್ನು ಸ್ಮರಿಸುತ್ತ, ಆ ಭಕ್ತನಿಗೆ ಪ್ರಾಣದಾನ ಮಾಡಬೇಕೆಂದು ಬೇಡಿಕೊಳ್ಳಲು ಆ ಮೃತದೇಹದಲ್ಲಿ ಪ್ರಾಣವು ಬಂದಿತು ಮತ್ತು ಸತ್ತು ಹೋಗಿದ್ದ ಆ ಭಕ್ತನು ಎದ್ದು ಕುಳಿತನು. ಆಗ ವೀರಸಂಗಯ್ಯನು ಅವನನ್ನು ನಮಸ್ಕರಿಸಿ ಸನ್ಮಾನಿಸಿದನು.

ಈ ಎಲ್ಲ ಸಂಗತಿಗಳನ್ನು ಭಾಸ್ಕರನು ಸಮೀಪದಲ್ಲಿಯೇ ಮರೆಯಲ್ಲಿ ನಿಂತುಕೊಂಡು ನೋಡುತ್ತಾ ಇದ್ದನು. ಅವನು ಅದನ್ನುನೋಡಿ, ಒಂದು ಕಪಟೋಪಾಯವನ್ನು ನೆನೆದು ಒಬ್ಬ ಜಂಗಮನ ವೇಷವನ್ನು ಧಾರಣ ಮಾಡಿಕೊಂಡು, ವೀರಸಂಗಯ್ಯನ ಇದಿರಿಗೆ ಬರಲಾಗಿ ಅವನಾರೆಂಬುದನ್ನು ತಿಳಿಯದೆ ವೀರಸಂಗಯ್ಯನು ಅವನನ್ನು ನಮಸ್ಕರಿಸಿದನು. ಆಗ ಭಾಸ್ಕರನು ತನ್ನ ಕೈಯಲ್ಲಿದ್ದ ಕಠಾರಿಯಿಂದ ವೀರಸಂಗಯ್ಯನನ್ನು ಬೆನ್ನ ಮೇಲೆ ತಿವಿದು ಗಾಯಗೊಳಿಸಿದನು. ಆದರೆ ವೀರಸಂಗಯ್ಯನು ಇದಕ್ಕೋಸ್ಕರ ಎಷ್ಟುಮಾತ್ರವೂ ಅವನಮೇಲೆ ಕೋಪಗೊಳ್ಳಲಿಲ್ಲ. ಇಷ್ಟೇ ಅಲ್ಲ, ಅವನ ಜಂಗಮ ರೂಪನ್ನು ನೋಡಿ ತನ್ನ ಕೈಯ್ಯಲ್ಲಿದ್ದ ಶಸ್ತ್ರವನ್ನು ಚಲ್ಲಿಕೊಟ್ಟು ಅವನಿಗೆ—ನೀನು ನನ್ನ ಭವರೋಗ ವೈದ್ಯನು, ನನ್ನನ್ನು ರಕ್ಷಿಸು ಎಂದು ಅವನ ಪಾದಕ್ಕೆರಗಿದನು. ವೀರಸಂಗಯ್ಯನ ಈ ಅತುಲವಾದ ಭಕ್ತಿಯನ್ನು ನೋಡಿ ಶಿವನು ಮೆಚ್ಚಿ ಅವನಿಗೆ ಜಂಗಮ ರೂಪಿನಿಂದ ಪ್ರತ್ಯಕ್ಷನಾಗಿ ಅವನಿಗೆ— ನೀನು ನಿನ್ನ ವೀರಭಕ್ತಿಯನ್ನು ಜಗತ್ತಿನಲ್ಲಿ ಚನ್ನಾಗಿ ಮೆರೆಯಿಸಿದೆ. ನಿನಗೇನು ಬೇಕು ಬೇಡು ಎನಲು, ಅವನು—ಈ ಭಾಸ್ಕರನ ತಪ್ಪನ್ನು ಮೊದಲು ಕ್ಷಮಿಸಬೇಕು ಎಂದು ಬೇಡಿಕೊಂಡನು. ಭಾಸ್ಕರನು ಈ ವರೆಗೆ ತನ್ನ ಸಮ್ಮುಖದಲ್ಲಿ ನಡೆದ ಸಂಗತಿಗಳನ್ನು ನೋಡಿ ಪಶ್ಚಾತ್ತಾಪವನ್ನು ಹೊಂದಿ ತನ್ನ ತಪ್ಪನ್ನು ಕ್ಷಮಿಸಬೇಕೆಂದು ಆ ಜಂಗಮನಿಗೆ ಬೇಡಿಕೊಂಡನು. ಆಗ ಆ ಜಂಗಮನು ಅವನಿಗೂ ಅವನ ಮಿತ್ರ ಕಳತ್ರ, ಸೇವಕರೆಲ್ಲರಿಗೂ ಶಿವದೀಕ್ಷೆಯನ್ನು ಕೊಟ್ಟು ಅಂತರ್ಧಾನನಾದನು. ಆ ಮೇಲೆ ವೀರಸಂಗಯ್ಯನು ತನ್ನ ಹೆಂಡತಿಯಾದ ಚಂದ್ರಾಣಿ ದೇವಿಯನ್ನು ಕರೆದುಕೊಂಡು ತನ್ನ ಬಿದಿರುಕೊಟ್ಟೆ ಪಟ್ಟಣಕ್ಕೆ ಹೋಗಿ

ಶಿವಾನುಭವದಲ್ಲಿ ಸುಖವಾಗಿದ್ದನು. ಇತ್ತ ಕೋವೂರಲ್ಲಿ ಭಾಸ್ಕರನೂ ಅವನ ಮಿತ್ರರೂ, ಬಂಧುಬಳಗದವರೂ ಶಿವದೀಕ್ಷಾ ಸಂಪನ್ನರಾಗಿ ಶಿವನಲ್ಲಿ ಭಕ್ತಿಭಾವವುಳ್ಳವರಾಗಿ ವಾಸಿಸುವವರಾದರು. ಈ ಪ್ರಕಾರ ವೀರ ಸಂಗಯ್ಯನು ತನ್ನ ವೀರಭಕ್ತಿಯಿಂದ ಶಿವಶರಣರಲ್ಲಿ ಪ್ರಖ್ಯಾತನಾಗಿದ್ದಾನೆ.

ನಾವು ಹಿಂದೆ ಕೋವೂರು ಬ್ರಹ್ಮಯ್ಯನ ಚರಿತ್ರೆಯಲ್ಲಿ ಉಲ್ಲೇಖಿಸಿದ ಕೋವೂರೇ ಮಾಧವ ಭಾಸ್ಕರರ- ಗ್ರಾಮವಾಗಿರಬಹುದೆಂದು ತೋರುತ್ತದೆ. ಇದು ಚಾಲುಕ್ಯರ ವಂಶವು. ಈ ಕಥೆಯಲ್ಲಿ ಹೇಳಿದಂತೆ ಅವರು ವಿಷ್ಣುಭಕ್ತರಾಗಿರಬಹುದು. ಚಾಲುಕ್ಯರು ಕೆಲವು ಕಾಲ ವಿಷ್ಣುಭಕ್ತರು, ಕೆಲವು ಕಾಲ ಜೈನರು, ಇದ್ದ ಹಾಗೆ ಇತಿಹಾಸದಿಂದ ತಿಳಿದು ಬರುತ್ತದೆ. ಆದರೆ ಮಾಧವ ಭಾಸ್ಕರ ಈ ಶಬ್ದಗಳ ಮೇಲಿಂದ ಈ ಕಾಲದಲ್ಲಿ ಅವರು ವಿಷ್ಣು ಭಕ್ತರಿರಬಹುದು. ಅವರು ಹೇಗೆ ವೀರಸಂಗಯ್ಯನು ಶಿವಭಕ್ತರಾದರೆಂಬುದು ಈಗಿನ ಕಥೆಯಲ್ಲಿ ಹೇಳಲ್ಪಟ್ಟಿದೆ. ಈ ಮೇರೆಗೆ ವೀರಶೈವರಾಗುವಾಗ್ಗೆ ಅವನ ಆಪ್ತರಿಷ್ಟರಲ್ಲಿ ಬಂಧುಬಳಗದವರಲ್ಲಿ ಹಿಂದೆ ಕೋವೂರು ಬ್ರಹ್ಮಯ್ಯನ ಕಥೆಯಲ್ಲಿ ಹೇಳಿದಂತೆ ಸುಮಾರು ೩೦೦ ಮನೆತನಗಳ ಜನರು ಅವರೊಡನೆ ವೀರಶೈವ ದೀಕ್ಷೆಯನ್ನು ಹೊಂದಿರಬಹುದು. ಇವರ ವಂಶದಲ್ಲಿ ಮುಂದೆ ಬ್ರಹ್ಮಯ್ಯನು ಉತ್ಪನ್ನನಾಗಿ ವೀರಶೈವ ಧರ್ಮದಂತೆ ನಡೆಯುತ್ತಿರಲು ಅವನು ಕೋವೂರಲ್ಲಿಯ ಜೈನರಿಂದ ಹೇಗೆ ಹಿಂಸಿಸಲ್ಪಟ್ಟನೆಂಬುದು ಅವನ ಚರಿತ್ರೆಯಲ್ಲಿ ಹೇಳಲ್ಪಟ್ಟಿದೆ.

ಕೋವೂರು ಈ ಹೆಸರಿನ ಗ್ರಾಮವು ಬೀದರದ ಸಮೀಪದಲ್ಲಿ ಇದ್ದದ್ದು ನಮಗೆ ಈವರೆಗೂ ಕಂಡುಬಂದಿಲ್ಲ. ಆದ್ದರಿಂದ ಮಂಗಳವಾಡ ಅಥವಾ ತದ್ದೇವಾಡಿ ನಾಡಿನಲ್ಲಿದ್ದ ಈಗಿನ ಕೋಹಳ್ಳಿಯೇ ಈ ಕೋವೂರಾಗಿರಬೇಕು. ಮಂಗಳವಾಡ ನಾಡೂ ಕಲ್ಯಾಣದ ಸೀಮೆಯೂ ಸಮಿಸಮೀಪವಾಗಿರುತ್ತವೆ. ಆದ್ದರಿಂದ ಈ ಚರಿತ್ರೆಯಲ್ಲಿ ಹೇಳಿದಂತೆ ಕೋವೂರು ಮತ್ತು ಬೀದರ ಇಲ್ಲಿಯ ಮುಖ್ಯ ಮನೆತನಗಳಲ್ಲಿ ಶರೀರ ಸಂಬಂಧಗಳು ಹಿಂದಿನ ಕಾಲದಲ್ಲಿ ಆಗುತ್ತಿರಬಹುದು.

ವೀರಶೈವರು ಈಗ್ಗೆಯೂ ತಮ್ಮ ಮಕ್ಕಳಿಗೆ ವೀರಸಂಗಯ್ಯನೆಂದು ಹೆಸರಿಡುವದು ಬಹಳ ಪ್ರಚಾರದಲ್ಲಿದೆ. ಇದರಿಂದ ವೀರಸಂಗಯ್ಯನು

ಬಹು ಪ್ರಸಿದ್ಧ ಶಿವಶರಣನಿದ್ದ ಹಾಗೆ ತೋರುತ್ತದೆ. ಆದರೆ ಆತನ ಚರಿ ತ್ರೆಯು ಈಗ ಬಹುತರ ಯಾರಿಗೂ ಗೊತ್ತಿರುವದಿಲ್ಲ. ಮಾಧವ ಭಾಸ್ಕ ರರು ಚಾಲುಕ್ಯರ ಒಂದು ಮನೆತನದವರಿದ್ದು ಇಂಥವರನ್ನು ವೀರಸಂಗ ಯ್ಯನು ವೀರಶೈವ ಮತಾವಲಂಬಿಗಳನ್ನಾಗಿ ಮಾಡಿದ್ದರಿಂದ ಅವನು ಇಷ್ಟು ಖ್ಯಾತಿಯನ್ನು ಪಡೆದಿರಬಹುದು. ಅವನು ಭಾಸ್ಕರನನ್ನು ಕಾಳ ಗದಲ್ಲಿ ಸೋಲಿಸಿ ಅವನನ್ನು ವೀರಶೈವನನ್ನು ಮಾಡಿದ್ದು ಆಗಿನ ಜನ ರಿಗೆ ಬಹಳ ಮಹತ್ವದ್ದೆಂದು ತೋರಿರಬಹುದು.

ವೀರಸಂಗಯ್ಯನ ಚರಿತ್ರೆಯನ್ನು ವಿವರಿಸುವ ಚೌಪದಗಳೂ ಸಾಂಗತ್ಯಗಳೂ ವೀರಶೈವ ವಾಙ್ಮಯದಲ್ಲಿ ಅನೇಕ ಇರುತ್ತವೆ. ಬೀದರ, ಬೇದರ, ಬಿದರೂರು, ಬಿದಿರಿ, ಬಿದುರುಕೋಟಿ, ಬಿದುರ-ಕೊಟ್ಟೆ ಇವೆ ಲ್ಲವೂ ಪರ್ಯಾಯ ಶಬ್ದಗಳಿರುತ್ತವೆ.

ವೀರಸಂಗಯ್ಯನು ಕೋವೂರು ಬ್ರಹ್ಮಯ್ಯನಕಿಂತಲು ಸ್ವಲ್ಪಕಾಲ ಮೊದಲಿನವನಾಗಿರಬೇಕು. ಆದರೆ ಬಸವೇಶ್ವರನಕಿಂತಲೂ ಈಚಿನವ ನೆಂದು ಅವನ ಚರಿತ್ರೆಯಿಂದ ತೋರುತ್ತದೆ. ಅವನ ಹೆಸರು ಗಣಸಹ ಸ್ರದಲ್ಲಿ ಬಂದಿದೆ.

---

## ಮುಸುಡಿಯ ಚೌಡಯ್ಯ.

ಉತ್ತರ ಕರ್ನಾಟಕದಲ್ಲಿ 'ಮುಸುಡಿ' ಎಂಬ ಗ್ರಾಮವಿರುತ್ತದೆ. ಅಲ್ಲಿ ಚೌಡಯ್ಯನೆಂಬ ಶಿವಶರಣನು ವಾಸಮಾಡುತ್ತಿದ್ದನು. ಅವನು ಸ್ಥಿರಬುದ್ಧಿಯುಳ್ಳವನು, ಗ್ರಾಮದ ಅಧಿಪತಿಯು, ಗಣಾಚಾರವುಳ್ಳವನು. ಅವನು ಶಿವಾನುಭವದ ನಿತ್ಯನೇಮಗಳನ್ನು ತಪ್ಪದೆ ಪಾಲಿಸುವನು. ಅವುಗಳಲ್ಲಿ ಅವನು 'ಶಿವಶರಣು' 'ಶರಣುಶರಣಾರ್ಥಿ' ಎಂಬ ನುಡಿಗ ಳನ್ನು ನುಡಿಯುತ್ತ ಜನರನ್ನು ವಂದಿಸುವದನ್ನೇ ತನ್ನ ಮುಖ್ಯ ನೇಮ ವನ್ನಾಗಿಟ್ಟುಕೊಂಡಿದ್ದನು. ಇದೇ ಅವನ ಶಿವಾನುಭವದ ನಡೆಯಾಗಿತ್ತು.

ಮಹಾಕವಿಯಾದ ಹರಿಹರದೇವನು ಅವನ ಈ ಆಚರಣೆಯನ್ನು ವರ್ಣಿಸಿರುವದು ಹೇಗೆಂದರೆ:-- ಚೌಡಯ್ಯನು ಕನಸಿನಲ್ಲಿ ಮನಸಿನಲ್ಲಿ

ಯಾವಾಗಲೂ ಶರಣಾರ್ಥಿ ಎಂದೆನ್ನುವನು. ನೆನಹಿನಲ್ಲಿ ನಿಷ್ಠೆಯಲ್ಲಿ ಶರಣಾರ್ಥಿ, ನಡೆಯಲ್ಲಿ ನುಡಿವಲ್ಲಿ ಶರಣಾರ್ಥಿ, ಕೊಡುವಲ್ಲಿ ಕೊಂಬಲ್ಲಿ ಶರಣಾರ್ಥಿ, ಕಂಡರೆ ಶರಣು, ಕಾಣದಿದ್ದರೆ ಶರಣು, ಸುಖವೆನಿಸಿದರೆ ಶರಣು, ದುಃಖವೆನಿಸಿದರೆ ಶರಣು, ಹೀಗೆ ಶರಣು ಶರಣಾರ್ಥಿ ಎಂದೆನ್ನುವನು. ಹೀಗೆ ಅವನು ಜನರಿಗೋಸ್ಕರ ಪ್ರೇಮಭಾವ, ಕೃತಜ್ಞತಾಭಾವವನ್ನು ವಹಿಸಿ ಎಲ್ಲರೊಡನೆ ಕಿಂಕರತ್ವದಿಂದ ನಡೆಯುವನು.

ಹೀಗೆ ಶರಣುಭಾವದಿಂದ ಎಲ್ಲರೊಡನೆ ವರ್ತಿಸುವದು ಹಗುರಾದುದಲ್ಲ. ಅದು ಶಿವಶರಣರ ಉಚ್ಚನಡೆಯಾಗಿರುತ್ತದೆ. ಇದು ಶ್ರೇಷ್ಠ ಶಿವಾನುಭವಿಗೆ ಸಾಧ್ಯವು. ಯಾವನು ಪೂರ್ಣವಾಗಿ ಅಹಂಕಾರವನ್ನು ಅಳಿದಿರುವನೋ ಅವನು ಮಾತ್ರ ಶರಣುಭಾವದಿಂದ ಶರಣೆಂದೆನ್ನುವನು. ಅವನು ಎಲ್ಲರನ್ನು ತನ್ನಂತೆ ಭಾವಿಸುತ್ತಾನೆ. ದಯಾಧರ್ಮವುಳ್ಳವನಾಗಿರುತ್ತಾನೆ. ಪ್ರಾಣಿಗಳೆಲ್ಲವನ್ನು ತನ್ನಂತೆ ನೋಡುತ್ತಾನೆ. ಶುದ್ಧ ಮನಸ್ಸುಳ್ಳವನು ಅವನು ಯಾರನ್ನೂ ದ್ವೇಷಿಸನು. ಎಲ್ಲರ ಕೂಡ ಕಿಂಕರತ್ವದಿಂದ ನಡೆದು, ಯಾವಾಗಲೂ 'ಶರಣು' 'ಶರಣು' ಎಂದು ನಮಸ್ಕರಿಸುತ್ತಾನೆ. ಈ ಬಗೆಯ ಗುಣವುಳ್ಳವನೇ ನಿಜವಾದ ಶರಣನು. ಇವನಲ್ಲಿ ಅಲೌಕಿಕ ಶಕ್ತಿಯು ತಲೆದೋರುತ್ತದೆ. ಇಂಥ ಶಕ್ತಿಯು ಚೌಡಯ್ಯನಲ್ಲಿ ಉತ್ಪನ್ನವಾಗಿತ್ತು.

ಮುಸುಡಿಯ ಚೌಡಯ್ಯನು ನಡೆದ ಈ ಆಚರಣೆಯು ಬಸವೇಶ್ವರನದಾಗಿದೆ. ಬಸವನು ಅಹಂಕಾರವನ್ನು ನೀಗಿದವನು. ಎಲ್ಲರೊಡನೆ ಸೇವಕನಾಗಿ ಆಚರಿಸುವವನು. ಆದ್ದರಿಂದ ಪಂಚಪರುಷಗಳು ಅವನಿಗೆ ದೊರೆಕೊಂಡಿದ್ದವು. ಹಾಗೆಯೇ ಚೌಡಯ್ಯನಿಗೂ ಅವು ದೊರೆಕೊಂಡಿದ್ದವು.

ಹೀಗೆ ಆಚರಿಸುವವನು ಉಚ್ಚರಿಸುವ ಪಂಚಾಕ್ಷರೀ ಮಂತ್ರದಲ್ಲಿ ಒಂದು ಅದ್ಭುತಶಕ್ತಿಯು ನೆಲೆಗೊಂಡಿರುತ್ತದೆ. ಈ ಶಕ್ತಿಯು ಅವನ ಕರ್ಮೇಂದ್ರಿಯ ಜ್ಞಾನೇಂದ್ರಿಯಗಳಲ್ಲಿಯೂ ಮನೋವಾಕ್ಕಾಯ ಕರ್ಮಗಳಲ್ಲಿಯೂ ತುಂಬಿಕೊಂಡಿರುತ್ತದೆ. ಆದ್ದರಿಂದ ಅವನು ಮಂತ್ರಶರೀರಿಯಾಗಿರುತ್ತಾನೆ. ಆದರೆ ನಡೆ ಇಲ್ಲದೆ ಉಚ್ಚರಿಸಿದ ಮಂತ್ರದಲ್ಲಿ ಯಾವ ಶಕ್ತಿಯೂ ಇರಲಾರದು. ಅದು ಕೇವಲ ಶಬ್ದ ಮಾತ್ರ. ಅದು 'ಅರಳೆಯ ಮರದ ಉಲುಹು' ಎಂದು ಶಿವಶರಣರು ನುಡಿದಿದ್ದಾರೆ.

ಅನೇಕರು ಯೋಗಾಭ್ಯಾಸದಿಂದ ಪ್ರಬಲಸಾಮರ್ಥ್ಯವು ದೊರೆ ಕೊಳ್ಳುವದೆಂದು ಭಾವಿಸುತ್ತಾರೆ. ಇದು ನಿಜವಿರಬಹುದು. ಆದರೆ ಶಿವಾನುಭವದ ಪ್ರಕಾರ ಇಂಥ ಸಾಮರ್ಥ್ಯವನ್ನು ಷಟ್‌ಸ್ಥಲಾಚರಣೆ ಮತ್ತು ಅಷ್ಟಾವರಣಗಳ ಮೂಲಕ ಭಕ್ತನು ತನ್ನಲ್ಲಿ ಉಂಟುಮಾಡಿ ಕೊಳ್ಳಬಹುದು.

ಹೀಗೆ ಚೌಡಯ್ಯನು ತನ್ನ ಗ್ರಾಮದಲ್ಲಿರುವಾಗ ಕಲ್ಯಾಣಪಟ್ಟಣ ದಲ್ಲಿ ಬಸವೇಶ್ವರ ಮೊದಲಾದ ಪ್ರಮಥರು ಬಂದಿದ್ದಾರೆಂಬುವನ್ನು ಕೇಳಿ ಅವರನ್ನು ಕಾಣಬೇಕೆಂದು ಕೆಲವು ಜತೆಗಾರರನ್ನು ಕೂಡಿ ಕೊಂಡು ಅಲ್ಲಿಗೆ ಹೊರಟನು. ಅವರು ಮಾರ್ಗಕ್ರಮಣ ಮಾಡುತ್ತಿರು ವಲ್ಲಿ, ಅವರಲ್ಲೊಬ್ಬನು ದಾರಿಯಲ್ಲಿ ಒಂದು ಇಟ್ಟೆಯ ಗಿಡದಲ್ಲಿ ಸುಂದರವಾದ ಹಣ್ಣುಗಳಿರುವದನ್ನು ಕಂಡು ಅವುಗಳನ್ನು ತಿನ್ನಬೇ ಕೆಂದು ಬಯಸಿದನು. ಆ ಹಣ್ಣುಗಳು ಅತ್ಯಂತ ಕಹಿಯಾದವುಗಳು. ವಿಷವಾಗಿಯೂ ಅವು ಪರಿಣಮಿಸುತ್ತವೆ. ಆದರೆ ಜನರನ್ನು ಸಂತೋ ಷಪಡಿಸುವದೇ ಬ್ರಹ್ಮಯ್ಯನ ನಡೆಯಾಗಿತ್ತು. ಆದ್ದರಿಂದ ಅವನು ಶಿವ ಭಾವದಿಂದ ಆ ಹಣ್ಣುಗಳನ್ನು ನೋಡಲು, ಅವು ಮಧುರ ಫಲಗಳಾ ದವು. ಅವುಗಳನ್ನು ಎಲ್ಲರೂ ತಿಂದು ರುಚಿಸಿ ಆನಂದಪಟ್ಟು ಮುಂದೆ ತೆರಳಿದರು.

ಅವರು ಕಲ್ಯಾಣಕ್ಕೆ ಹೋದ ಬಳಿಕ ಚೌಡಯ್ಯನು ಬಸವೇಶ್ವರ ನನ್ನು ಕಾಣುವವನಾದನು. ಬಸವೇಶ್ವರನು ಈ ಮೊದಲೆ ಆತನ ಕೀರ್ತಿ ವಾರ್ತೆಯನ್ನು ಕೇಳಿದವನಾಗಿದ್ದನು. ಆದ್ದರಿಂದ ಅವನು ಅವನನ್ನು ಬಹಳ ಆದರಿಸುವವನಾದನು-

ಮುಸುಡಿಯ ಚೌಡಯ್ಯನು ಕಲ್ಯಾಣ ಪಟ್ಟಣದಲ್ಲಿರುವಾಗ ದಿನಾಲು ಸರೋವರಕ್ಕೆ ಹೋಗಿ ಅಲ್ಲಿ ತನ್ನ ಇಷ್ಟಲಿಂಗದ ಪೂಜಾದಿಕಾರ್ಯಗ ಳನ್ನು ನೆರವೇರಿಸಿ ತನ್ನ ಮನೆಗೆ ಬಂದು ಎಲ್ಲರಲ್ಲಿ ಶಿವಭಾವವನ್ನು ತಳೆ ದವನಾಗಿ ಎಲ್ಲರಿಗೂ 'ಶರಣು' 'ಶರಣು' ಎಂದೆನ್ನುತ್ತ ಶರಣರ ಸೇವೆಯೇ ತನ್ನ ಕಾಯಕವನ್ನಾಗಿಟ್ಟುಕೊಂಡು ಕಾಲಕಳೆಯಹತ್ತಿದನು.

ಹೀಗಿರುವಲ್ಲಿ ಒಂದು ದಿವಸ ಚೌಡಯ್ಯನು ಸರೋವರದಲಿ ಸ್ನಾನವನ್ನು ಮಾಡಿ ಅಗ್ಗವಣಿಯನ್ನೂ ಹೂವಿನ ಕರಂಡಿಗೆಯನ್ನೂ

ಕೈಯಲ್ಲಿ ತೆಗೆದುಕೊಂಡು ಪಟ್ಟಣದ ಬೀದಿಯಿಂದ ಬರುತ್ತ ಇರುವಲ್ಲಿ ತನ್ನ ಇದಿರಿಗೆ ಭಕ್ತರು ಒಂದು ಮೃತದೇಹವನ್ನು ವಿಮಾನದಲ್ಲಿರಿಸಿ ಕೊಂಡು ರುದ್ರಭೂಮಿಗೆ ಹೊರಟಿರುವದನ್ನು ಕಂಡನು. ಆ ಮೃತದೇ ಹದ ಹಣೆಯಲ್ಲಿ ವಿಭೂತಿ, ಕೊರಳಲ್ಲಿ ರುದ್ರಾಕ್ಷಿ, ಲಿಂಗದ ಕರಡಿಗೆ ಇರು ವದನ್ನು ಕಂಡು, ಇವನೊಬ್ಬ ಶ್ರೇಷ್ಠಭಕ್ತನು, ಇವನನ್ನು ಭಕ್ತ ಜನರು ಅಟ್ಟಹಾಸದಿಂದ ಎಲ್ಲಿಯೋ ಕರೆದುಕೊಂಡು ಹೋಗುತ್ತಿದ್ದಾರೆ, ಎಂದು ಮುಗ್ಧಭಾವದಿಂದ ತಿಳಿದುಕೊಂಡು ಆ ದೇಹಕ್ಕೋಸ್ಕರ ಭಕ್ತಿಭಾವವು ಳ್ಳವನಾಗಿ ಆದಕ್ಕೆ ಕೈಮುಗಿದು— ಶರಣಾರ್ಥಿ ಶರಣಾರ್ಥಿ, ದೇವ ಶರಣು ಶರಣು, ಗಿರಿಜಾವರನೇ ಶರಣು ಶರಣು, ನನಗೆ ಕರುಣಿಸು, ಎಂದು ಅತಿ ವಿನಮ್ರಭಾವದಿಂದ ಹೇಳಿಕೊಳ್ಳಹತ್ತಿದನು. ನೆರೆದ ಭಕ್ತರು ಅವ ನಿಗೆ—ನೀನು ಇಲ್ಲಿರಬೇಡ, ನಿನ್ನ ಪೂಜಾಕಾರ್ಯಕ್ಕೆ ಹೋಗಿಬಿಡು, ಎಂದು ಎಷ್ಟು ಹೇಳಿದರೂ ಅವನು ಕೇಳದೆ—ಈ ಶಿವಭಕ್ತನು ವಿಮಾನ ದಿಂದ ಕೆಳಗಿಳಿಯಲಿ, ಅವನಿಗೆ ನನ್ನ ನಮಸ್ಕಾರವನ್ನು ಮಾಡುತ್ತೇನೆ, ಅವನಿಗೆ ನಮಸ್ಕರಿಸದ ಹೊರ್ತು ನಾನು ಇಲ್ಲಿಂದ ಅಲುಗಾಡುವದಿಲ್ಲ, ಎಂದು ನುಡಿದು ವಿಮಾನದ ಇದಿರಿಗೆ ನಿಂತುಬಿಟ್ಟನು. ಅದನ್ನು ಅಲ್ಲಿ ನೆರೆದ ಭಕ್ತರು ನೋಡಿ ಬೆರಗಾದರು. ಭಕ್ತರಿಗೋಸ್ಕರ ಅವನಲ್ಲಿ ನೆಲೆ ಗೊಂಡಿದ್ದ ಇಂಥ ಭಕ್ತಿಯನ್ನು ನೋಡಿ ವಿಸ್ಮಿತರಾದರು. ಆಗ ಅವನ ದೃಢ ಭಾವವನ್ನು ಪರಮಾತ್ಮನು ತಿಳಿದವನಾದ್ದರಿಂದ ಅವನ ಇಚ್ಛೆಯನ್ನು ನಾನು ಪೂರೈಸಬೇಕು, ಇಲ್ಲದಿದ್ದರೆ ಅನಾಹುತವಾಗಬಹುದು, ಎಂದು ತಿಳಿದು ಆ ಮೃತದೇಹದಲ್ಲಿ ಜೀವಕಳೆಯನ್ನು ಅವನು ತುಂಬಿದನು. ಆಗ ಆ ದೇಹದಲ್ಲಿ ಪ್ರಾಣವು ಬಂದು ಆ ದೇಹವು ಕೆಳಗಿಳಿಯಲು ಚೌಡ ಯ್ಯನು ಅದರ ಪಾದಕ್ಕೆರಗಿದನು. ಆಗ ಜನರು ಚೌಡಯ್ಯನ ನೇಮವೇ ಜಗತ್ತಿನಲ್ಲಿ ನಿಜವಾದುದು, ಅದು ಶ್ರೇಷ್ಠವಾದುದು ಎಂದು ಅವನನ್ನು ಹೊಗಳಹತ್ತಿದರು. ಆ ಮೇಲೆ ಚೌಡಯ್ಯನು ಮುಂದೆ ಹೊರಟುಹೋ ಗಲು ಆ ಮೃತದೇಹವು ಮೊದಲಿನಂತಾಗಲು ಭಕ್ತಜನರು ಮೆರವಣಿಗೆ ಯೊಂದಿಗೆ ಮುಂದಕ್ಕೆ ಹೋಗುವವರಾದರು.

ಮತ್ತೊಂದು ದಿನ ಚೌಡಯ್ಯನು ಅಗ್ಗವಣಿಯನ್ನು ಮತ್ತು ಹೂಗಳನ್ನು ತೆಗೆದುಕೊಂಡು ಮಾರ್ಗದಲ್ಲಿ ಬರುತ್ತಿರಲು ಇದಿರಿಗೆ ಒಂದು ವೃಷಭವು ಸತ್ತು ಬಿದ್ದಿದ್ದನ್ನು ಕಂಡನು. ಆಗ ಇದು ಬಸವನೆಂಬ

ಭಾವನೆಯು ಅವನಲ್ಲಿ ಉಂಟಾಗಿ ಅತ್ಯಂತ ಭಕ್ತಿಯಿಂದ ಅದಕ್ಕೆ-ಬಸವನ ಶರೀರಕ್ಕೆ ಎಂದಾದರೂ ನೋವುಂಟೇ, ಏಳೇಳೆಂದು ನುಡಿಯಲು ಆ ವೃಷಭವು ಎದ್ದು ನಿಂತಿತು. ಶರಣುಭಾವವುಳ್ಳವನು ದಯಾರ್ದ್ರ ಹೃದಯನು. ಇಂಥವನಲ್ಲಿ ಒಂದು ಅಲೌಕಿಕ ಶಕ್ತಿಯು ತಾನಾಗಿಯೇ ಉಂಟಾಗುತ್ತ ಜನರು ಅವನನ್ನು ಹೊಗಳಹತ್ತಿದರು.

ಹೀಗೆ ಚೌಡಯ್ಯನು ಕೆಲವು ದಿನ ಕಲ್ಯಾಣದಲ್ಲಿರುತ್ತಿರಲು, ಅವನ ಆರಾಧ್ಯ ಸಂತತಿಯವರು ಪಾರಗಾವಿ ಎಂಬ ಪುರದಲ್ಲಿದ್ದು, ಅವರು ತಮ್ಮ ಲಗ್ನಕ್ಕೆ ಚೌಡಯ್ಯನನ್ನು ಕರೆಯಲಿಕ್ಕೆ ಕಲ್ಯಾಣಕ್ಕೆ ಬಂದರು. ಆಗ ಚೌಡಯ್ಯನು ಬಸವೇಶ್ವರನ ಅಪ್ಪಣೆಯನ್ನು ಪಡೆದ ಕೊಂಡು ಅವರೊಡನೆ ಆ ಊರಿಗೆ ಹೊರಟನು ದಾರಿಯಲ್ಲಿ ಭೀಮರಥಿ (ಭೀಮಾ) ನದಿಯು ಹತ್ತಿತು. ಆಗ ಅದು ಉಕ್ಕಿ ಹರಿಯುತ್ತಿತ್ತು. ಆದರೆ ಅಲ್ಲಿಯೇ ತಡೆದು ನಿಂತರೆ ಲಗ್ನದ ವೇಳೆಯು ತಪ್ಪುವದೆಂದು ಚೌಡಯ್ಯನಿಗೆ ತೋರಿಬರಲು, ಅವನು ಹಿಂದಿನ ಶಿವಶರಣರನ್ನು ನೆನೆಯುತ್ತ ಭೀಮೆಗೆ-ನೀನು ಗಜೇಶ ಮಸಣಯ್ಯ ಮೊದಲಾದವರಿಗೆ ದಾರಿಯನ್ನು ಕೊಟ್ಟೆ. ನನಗೂ ಈಗ ದಾರಿಯನ್ನು ಕೊಡು, ಎಂದು ನುಡಿಯುತ್ತ ನದಿಯನ್ನು ಪ್ರವೇಶಿಸಿದನು. ಆಗ ಅದು ಇಬ್ಭಾಗವಾಗಿ ಅವನಿಗೆ ದಾರಿಯನ್ನು ಕೊಟ್ಟಿತು. ಆ ಮೇಲೆ ಅವನು ಪಾರಗಾವಿಗೆ ಹೋಗಿ ತನ್ನ ಆಪ್ತರಾದ ಆರಾಧ್ಯರಲ್ಲಿ ಮದುವೆಯನ್ನು ತೀರಿಸಿಕೊಂಡು, ಮರಳಿ ಕಲ್ಯಾಣಕ್ಕೆ ಬಂದು ಅಲ್ಲಿಯೇ ಇರಹತ್ತಿದನು.

ಹೀಗಿರಲು ಕೆಲವೊಂದು ದಿನ ಒಬ್ಬ ಶೂದ್ರನ ಮಗಳು ಚೌಡಯ್ಯನ ಕೀರ್ತಿಯನ್ನು ಕೇಳಿ ಅವನನ್ನು ಕಂಡು ಅವನಿಂದ ಹರಿಕೆಯನ್ನು ಇಸಿದುಕೊಂಡು ಮನೆಯಲ್ಲಿರಲು ಮರುದಿನವೇ ಅವಳು ಆವುದೋ ಒಂದು ಕಾರಣದಿಂದ ಮೃತಪಟ್ಟಳು. ಆಗ ಅವಳ ತಾಯಿತಂದೆಗಳು ಅವಳ ಮೃತದೇಹವನ್ನು ಚೌಡಯ್ಯನಲ್ಲಿಗೆ ತಂದು ಅತ್ಯಂತ ದುಃಖದಿಂದ ಅವನಲ್ಲಿ ಮೊರೆಯಿಟ್ಟರು. ಅವರನ್ನು ನೋಡಿ ಅವನಲ್ಲಿ ದಯಾಭಾವವು ಉಂಟಾಗಿ ಅವಳನ್ನು ದಿಟ್ಟಿಸುತ್ತ—ಮಗಳೇ ಏಳೇಳೆಂದು ನುಡಿಯಲು, ಅವಳು ಎದ್ದು ಕುಳಿತಳು. ಆಗ ಅವಳು ತನಗೆ ವೀರಶೈವ ದೀಕ್ಷೆಯನ್ನು ಕೊಡಲು ಅವನಿಗೆ ಕೇಳಿಕೊಳ್ಳಲು, ಚೌಡಯ್ಯನು ಅವಳಿಗೆ ಲಿಂಗಧಾರಣವನ್ನು ಮಾಡಿದನು.

ಚೌಡಯ್ಯನು ತನ್ನಲ್ಲಿ ಉಂಟಾದ ಈ ಶರಣಾಭಾವದ ಆಚರಣೆಯ ಮೂಲಕ ಆವನಿಂದ ಅಗಾಧವಾದ ಮಹತ್ವಗಳು ಆಗಿಂದಾಗ್ಗೆ ಆಗಹತ್ತಿದವು. ಇದರಿಂದ ಕಲ್ಯಾಣ ಪಟ್ಟಣದಲ್ಲಿ ಅವನ ಕೀರ್ತಿಯು ಜನರಲ್ಲೆಲ್ಲ ಬಹಳ ಹಬ್ಬಿತು. ಇದನ್ನು ಪರವಾದಿಗಳು ಕೇಳಿ ಸೈರಿಸಲಾರದಾದರು. ಅವರು ಅವನ ವಿಷಯವಾಗಿ ಮತ್ಸರ ಬುದ್ಧಿಯನ್ನು ತಾಳಿ ಒಂದು ಕುಹಕವನ್ನು ನೆನೆದು ಗೋಣಿಯಲ್ಲಿ ಪುರುಷರೂಪದ ಒಂದು ಕೃತ್ರಿಮ ಪ್ರತಿಮೆಯನ್ನು ಸಿದ್ಧಪಡಿಸಿ, ಮಿನುಗುವ ರುದ್ರಾಕ್ಷಿ ವಿಭೂತಿಗಳನ್ನು ಅದರ ಹಸ್ತಕಂಠ ಮೊದಲಾದ ಸ್ಥಾನಗಳಲ್ಲಿಟ್ಟು, ಅದಕ್ಕೆ ಲಿಂಗವನ್ನೊಂದು ಅಳವಡಿಸಿ ಆ ಗೋಣಿಯನ್ನು ಮನುಷ್ಯನಂತೆ ಹೊಲಿದು ಊರ ಹೊರಗೆ ಇದ್ದ ಒಂದು ಹಾಳು ದೇಗುಲದಲ್ಲಿ ಇಟ್ಟರು. ಆಮೇಲೆ ಅವರು ಚೌಡಯ್ಯನಿದ್ದ ಕೇರಿಯಲ್ಲಿ ಬಂದು— ಆವನೋ ಒಬ್ಬ ಭಕ್ತನು ಊರ ಹೊರಗೆ ಸತ್ತುಬಿದ್ದಿದ್ದಾನೆ. ಅವನ ಹೆಣವು ಕೊಳೆತು ನಾರುತ್ತಿದೆ. ಶರೀರದ ಗುರುತು ಸಹ ಸಿಕ್ಕದಂತಾಗಿದೆ. ಅದನ್ನು ಎತಿಕೊಂಡು ಸಮಾಧಿಯಲ್ಲಿರಿಸಿರಿ ಎಂದು ಕೂಗುತ್ತ ಬರಲು ಚೌಡಯ್ಯರಾಯನು ಅದನ್ನು ಕೇಳಿ ದೇವಾಲಯಕ್ಕೆ ಹೋಗಿ ನೋಡಲು ಅಲ್ಲಿ ಒಂದು ವಿದ್ರೂಪವಾದ ಶರೀರವು ಬಿದ್ದುದನ್ನು ಕಂಡನು. ಆಗ ಅದಕ್ಕೋಸ್ಕರ ಅವನು ಕನಿಕರ ಪಟ್ಟು ಶಿವಭಾವದಿಂದ ಶಿವನ ಹೆಸರನ್ನು ತೆಗೆದುಕೊಂಡು ಅದಕ್ಕೆ ಏಳೇಳೆಂದು ಕರೆಯಲು ಒಳಗಿದ್ದ ಪುರುಷಾಕಾರದಲ್ಲಿ ಪ್ರಾಣವು ತುಂಬಿ ಬಂದು ಅದು ಜಂಗಮರೂಪದಿಂದ ಎದ್ದು ನಿಂತಿತು. ಪರವಾದಿಗಳು ಅದನ್ನು ನೋಡಿ ಅಂಜಿ ಓಡಿಹೋಗಹತ್ತಿದರು. ಆದರೆ ಚೌಡಯ್ಯನು ಅವರಿಗೆ ಅಭಯವನ್ನಿತ್ತು ಅವರನ್ನು ಸಮಾಧಾನಪಡಿಸಿದನು.

ಹೀಗೆ ಮುಸುಡಿಯ ಚೌಡಯ್ಯನು ತನ್ನ 'ಶರಣು ಶರಣಾರ್ಥಿ' ಎಂಬ ನಡೆಯಿಂದ ಅದ್ಭುತ ಸಾಮರ್ಥ್ಯವನ್ನು ಹೊಂದಿದವನಾಗಿ ಬಸವಾದಿ ಪ್ರಮಥರ ನೆರೆಯಲ್ಲಿ ಕಲ್ಯಾಣದಲ್ಲಿ ವಾಸಿಸುತ್ತ ಅಲ್ಲಿಯೇ ಸಮಾಧಿಯನ್ನು ಹೊಂದಿದನು.

ಮುಸುಡಿಯ ಚೌಡಯ್ಯನು ಬಸವೇಶ್ವರನ ಸಮಕಾಲೀನನಾಗಿದ್ದಾನೆ. ಅವನ ಹೆಸರು ಗಣಸಹಸ್ರದಲ್ಲಿ ಬಂದಿದೆ. ಅವನು ಆರಾಧ್ಯ

ಕುಲದವನೆಂಬುದು ಅವನ ಚರಿತ್ರೆಯಿಂದ ತಿಳಿದುಬರುತ್ತದೆ. ಆದರೆ ಅವನು ಇದ್ದ ಮುಸುಡಿ ಗ್ರಾಮವು ಎಲ್ಲಿದೆ ಎಂಬುದು ನಮಗೆ ಗೊತ್ತಾಗುವದಿಲ್ಲ. ಹರಿಹರ ಕವಿಯು ಅವನು ಉತ್ತರ ದೇಶದವನೆಂದು ಹೇಳಿದ್ದಾನೆ. ಅವನು ಕಲ್ಯಾಣದಲ್ಲಿ ಬಸವೇಶ್ವರನ ಸನ್ನಿಧಿಯಲ್ಲಿದ್ದು ಲಗ್ನ ಕಾರ್ಯಕ್ಕೋಸ್ಕರ ಭೀಮಾನದಿಯನ್ನು ದಾಟಿ ಹೋದದ್ದರಿಂದ ಅವನೂ ಅವನ ಆಪ್ತರೂ ಭೀಮಾ ಕೃಷ್ಣಾ ನದಿಗಳ ಮಧ್ಯ ಪ್ರದೇಶದಲ್ಲಿಯ ಒಂದು ಗ್ರಾಮದವರಾಗಿರಬಹುದು. ಇದರ ಪಶ್ಚಿಮ ಭಾಗವು ಮಂಗಳವಾಡ ಅಥವಾ ತರ್ದವಾಡಿ ನಾಡು ಮತ್ತು ಪೂರ್ವ ಭಾಗವು ಈಗಿನ ಸುರಪುರವಿದ್ದ ಪ್ರದೇಶವು. ಇಲ್ಲಿ ಪಾರಗಾವಿ ಮತ್ತು ಮುಸುಡಿ ಎಂಬ ಹೆಸರಿನ ಗ್ರಾಮಗಳು ಕಂಡುಬರುವದಿಲ್ಲ. ಆದರೆ ಮಸೂತಿ ಎಂಬ ಹೆಸರಿನ ಗ್ರಾಮವು ಬಾಗೇವಾಡಿಯಿಂದ ಪಶ್ಚಿಮಕ್ಕೆ ೧೬ ಮೈಲುಗಳ ಮೇಲೆ ಮತ್ತು ಇದೇ ಹೆಸರಿನ ಇನ್ನೊಂದು ಗ್ರಾಮವು ಮುದ್ದೇಬಿಹಾಳದಿಂದ ನೈಋತ್ಯಕ್ಕೆ ೧೨ ಮೈಲುಗಳ ಮೇಲೆ ಇವೆ. ಇವುಗಳಲ್ಲಿ ಮುದ್ದೇಬಿಹಾಳ ತಾಲೂಕಿನಲ್ಲಿಯ ಗ್ರಾಮದಲ್ಲಿ ಪುರಾತನ ಅವಶೇಷಗಳಿವೆ. ಆದರೆ ಇವು ಮುಸುಡಿ ಗ್ರಾಮವೋ ಹೇಗೆಂಬುದು ಇನ್ನೂ ಸಂಶೋಧಿಸತಕ್ಕ ವಿಷಯವಾಗಿದೆ.

ಈ ಚರಿತ್ರೆಯಲ್ಲಿ ಚೌಡಯ್ಯನ ಅಗಾಧವಾದ ಮಹಿಮೆಗಳು ವರ್ಣಿಸಲ್ಪಟ್ಟಿದ್ದರೂ ಅದನ್ನು ಉಂಟುಮಾಡಲಿಕ್ಕೆ ಕಾರಣವಾದ ಅವನ ವೃತ್ತಿಯು ನಿಸ್ಸಂಶಯವಾಗಿ ಶ್ರೇಷ್ಠತರದ್ದಾಗಿದೆ. ವೀರಶೈವರು ಪತ್ರಗಳನ್ನು ಬರೆಯುವಲ್ಲಿ ಮತ್ತು ಅವರು ಪರಸ್ಪರ ಭೆಟ್ಟಿಯಾದಲ್ಲಿ 'ಶರಣು ಶರಣಾರ್ಥಿ' ಎಂಬ ಶಬ್ದಗಳನ್ನು ಉಚ್ಚರಿಸುವದುಂಟು. ಇದು ಅವರಲ್ಲಿ ಬಹಳ ವಾಡಿಕೆಯಾದದ್ದು. ಅದರ ಅರ್ಥವಾವುದು ಮತ್ತು ಅದರ ಮಹತ್ವವೆಷ್ಟಿದೆ ಎಂಬುದು ಮುಸುಡಿಯ ಚೌಡಯ್ಯನ ಚರಿತ್ರೆಯಿಂದ ತಿಳಿದುಬರುತ್ತದೆ. ವೀರಶೈವರು ಪುರಾತನ ಶಿವಶರಣರ ಈ ರೂಢಿಯನ್ನು ತಪ್ಪಿಸದೆ ಅವರು ಅದನ್ನು ಅನುಸರಿಸುವದಲ್ಲದೆ ಚೌಡಯ್ಯನ ಮನೋವೃತ್ತಿಯುಳ್ಳವರಾದಲ್ಲಿ ಅದು ಶಿವಾನುಭವದ ಶ್ರೇಷ್ಠ ನಡೆ ಎಂಬುದರಲ್ಲಿ ಏನೂ ಸಂದೇಹವಿರಲಾರದು.

---

# ಬಿಬ್ಬಿ ಬಾಚಯ್ಯ.

ವಿಜಾಪುರ ಜಿಲ್ಲೆಯ ಸಿಂದಿಗಿ ತಾಲೂಕಿನ ಮೇರೆಯಿಂದ ಪೂರ್ವಕ್ಕೆ ೧೮ ಮೈಲುಗಳ ಮೇಲೆ ಗೊಬ್ಬೂರೆಂಬ ಗ್ರಾಮವಿರುತ್ತಿದೆ. ಅದು ಈಗ ಕಲಬುರ್ಗಿ ಜಿಲ್ಲೆಯಲ್ಲಿರುತ್ತದೆ. ಮೊದಲಿನ ಕಾಲದಲ್ಲಿ ಇದು ಬ್ರಾಹ್ಮಣರ ಒಂದು ಪ್ರಸಿದ್ಧ ಅಗ್ರಹಾರವಾಗಿತ್ತು. ಅಲ್ಲಿ ಅನೇಕ ವೇದಶಾಸ್ತ್ರ ಸಂಪನ್ನರೂ ವಿದ್ವಾಂಸರೂ ಆದ ಬ್ರಾಹ್ಮಣರು ವಾಸವಾಡುತ್ತಿದ್ದರು. ಅವರಲ್ಲಿ ಆದಿತ್ಯದೇವನೆಂಬ ಭೂಸುರನು ಅಗ್ರಗಣ್ಯನಾಗಿದ್ದನು. ಹಾಗೆಯೇ ಅಲ್ಲಿ ಬಹುಜನ ಶಿವಾನುಭವಿಗಳೂ ವಾಸವಾಗಿದ್ದರು. ಅವರಲ್ಲಿ ಯಾವಾಗಲೂ ಶಿವಾನುಭವ ಗೋಷ್ಠಿಗಳು ನಡೆಯುತ್ತಿದ್ದವು. ಇದರಿಂದ ಪರಸ್ಥಳಗಳಿಂದ ಬರುವ ಜನಸ್ತೋಮವು ಅಲ್ಲಿ ಹೆಚ್ಚಾಗಿರುತ್ತಿತ್ತು.

ಆದಿತ್ಯದೇವನಿಗೆ ಬಿಬ್ಬಿಬಾಚಯ್ಯನೆಂಬ ಮಗನು ಹುಟ್ಟಿದನು. ಅವನು ಹುಟ್ಟಿದ ಬಳಿಕ ಅವನ ತಂದೆಯು ಅವನಿಗೆ ಬ್ರಾಹ್ಮಣ ಧರ್ಮದ ಪ್ರಕಾರ ಜಾತಕರ್ಮಗಳನ್ನು ಮಾಡಿಸಿದನು. ಸಕಾಲದಲ್ಲಿ ಯಜ್ಞೋಪವೀತವನ್ನು ಧಾರಣಮಾಡಿಸಿ ವಿಪ್ರರಿಗೆ ಉಚಿತವಾದ ವೇದ ಶಾಸ್ತ್ರ ಪುರಾಣೋಪನಿಷತ್ತುಗಳ ಜ್ಞಾನವನ್ನು ಅವನಿಗೆ ಮಾಡಿಕೊಟ್ಟನು.

ಬಿಬ್ಬಿಬಾಚಯ್ಯನು ಕುಶಾಗ್ರಬುದ್ಧಿಯುಳ್ಳವನು. ಅವನ ಅಧ್ಯಯನವು ನಡಿದ ಕಾಲದಲ್ಲಿ ಅವನು ಅನೇಕ ಶಿವಾನುಭವ ಶಾಸ್ತ್ರಗಳನ್ನು ಸಹ ಅವಲೋಕಿಸಿದನು. ಶಿವಪುರಾಣ ಶಿವಾಗಮಗಳನ್ನು ಅಭ್ಯಾಸ ಮಾಡಿದನು. ಆಗ ಅವನಿಗೆ ವಿಪ್ರಾಚಾರಕ್ಕಿಂತಲೂ ಶಿವಾಚಾರವೇ ಉತ್ತಮವಾದ ನಡೆ ಎಂದು ತೋರಿಬಂದಿತು. ಆಗ ಅವನು ಶಿವಭಕ್ತಿ ಸಾಧಕರ ಮೊರೆಹೊಕ್ಕು ಒಬ್ಬ ದೇಶಿಕನ ಕಯ್ಯಿಂದ ವೀರಶೈವೋಪದೇಶವನ್ನು ಹೊಂದಿದನು. ಈ ದೇಶಿಕನು ಅವನಿಗೆ ಲಿಂಗಾಂಗೋಪದೇಶವನ್ನೂ ಕರ್ಣಮಂತ್ರವನ್ನೂ ಹೇಳಿ ಅವನಿಗೆ ಇಷ್ಟಲಿಂಗವನ್ನು ಅಳವಡಿಸಿದನು.

ಶಿವಾನುಭವದಲ್ಲಿ ಅನೇಕ ಬಗೆಯ ಆಚಾರಗಳುಂಟು ಮತ್ತು ರೀತಿಗಳುಂಟು. ಸ್ಥಲಗಳು, ಸ್ಥಲಗಳಿಗನುಸರಿಸಿ ನೆಲೆಕಲೆಗಳು, ಕಾರ್ಯಕ್ರಮಗಳು, ದಾಸೋಹಗಳು, ಸಕೀಲಗಳು, ಶಿವಯೋಗ ಸಾಧನೆಗಳು

ಹೀಗೆ ಅದರಲ್ಲಿ ಅನೇಕ ವಿಧವಾಗಿವೆ. ಹಿಂದಿನ ಕಾಲದಲ್ಲಿ ಶಿವಶರಣರು ಇವುಗಳಲ್ಲಿ ಕೆಲವೊಂದನ್ನು ಕೈಕೊಂಡು, ನಿಷ್ಠಾಪೂರ್ಣರಾಗಿ ಅದನ್ನು ನಡಿಸುತ್ತ ಕೃತಾರ್ಥರಾದರು. ಇಷ್ಟೇ ಅಲ್ಲ, ಅವರು ಇತರರಿಗೂ ತಮ್ಮ ನೀತಿಯನ್ನು ಬೋಧಿಸಿ ಅವರನ್ನು ಸಹ ಶಿವಾನುಭವಿಗಳನ್ನಾಗಿ ಮಾಡಿದ್ದಾರೆ. ಆದ್ದರಿಂದ ಬಸವೇಶ್ವರನ ಕಾಲದಲ್ಲಿ ಎಲ್ಲಕಡೆಗೂ ವೀರಶೈವ ಧರ್ಮವು ಪ್ರಸಾರವಾಯಿತು.

ಶಿವಾನುಭವದ ಈ ಆಚಾರಗಳಲ್ಲಿ ಅರ್ಪಣ ಮತ್ತು ಪ್ರಸಾದ ಇವುಗಳು ಬಿಬ್ಬಿ ಬಾಚಯ್ಯನ ಮನವನ್ನು ಬಹಳ ಆಕರ್ಷಿಸಿದವು. ಅವನು ಬ್ರಾಹ್ಮಣರ ಮಾರ್ಗವನ್ನು ಬಿಡಲಿಕ್ಕೆ ಇವುಗಳೇ ಅವನಿಗೆ ಕಾರಣವಾದವು. ಅವನಿಗೆ ಶಿವಶರಣರ ಪ್ರಸಾದ ಸೇವನೆಯೇ ಮಹತ್ವದ್ದೆಂದು ತೋರಿತು. ಆದ್ದರಿಂದ ಅವನು ಇದರ ಆಚರಣೆಯನ್ನು ತನ್ನ ಕಾಯಕವನ್ನಾಗಿ ಇಟ್ಟುಕೊಂಡನು.

ಈ ಕಾಯಕಕ್ಕೋಸ್ಕರ ಅವನು ಒಂದು ಬಂಡಿಯನ್ನು ಸಿದ್ಧಪಡಿಸಿ ಅದನ್ನು ಚನ್ನಾಗಿ ಶೃಂಗರಿಸಿ ಎರಡು ಬಲವಾದ ಎತ್ತುಗಳನ್ನು ಅಣಿಮಾಡಿ, ಅವುಗಳ ಕೊಂಬಿಗೆ ಚೌರಗಳನ್ನು ಕಟ್ಟಿ, ವೃಷಭಧ್ವಜವನ್ನು ಎತ್ತಿ ಹಿಡಿದು ತನ್ನ ಮತ್ತು ತನ್ನ ಸುತ್ತಲಿನ ಗ್ರಾಮಗಳಲ್ಲಿದ್ದ ಶಿವಶರಣರ ಮನೆಗಳಿಗೆ ಹೋಗಿ, ಅವರು ಕೊಟ್ಟ ಅರ್ಪಿತವನ್ನು ಬಂಡಿಯಲ್ಲಿ ತುಂಬಿಕೊಂಡು ತನ್ನ ಮನೆಗೆ ಬರುವನು. ತಿರುಗಿ ಬಂದ ಬಳಿಕ ಗುರುಸೇವೆ, ಜಂಗಮಾರ್ಚನೆಗಳನ್ನು ಮಾಡುತ್ತ ತಾನು ತಂದಿದ್ದರಲ್ಲಿ ಪ್ರಸಾದದ ರೀತಿಯಿಂದ ಸೇವನೆಮಾಡಿ ಉಳಿದದ್ದನ್ನು ದಾಸೋಹ ಕಾರ್ಯಕ್ಕರ್ಪಿಸುವನು. ಹೀಗೆ ಮಾಡುವದನ್ನೇ ಅವನು ತನ್ನ ಕಾಯಕವನ್ನಾಗಿ ಇಟ್ಟುಕೊಂಡಿದ್ದನು.

ಈಗಿನ ಕಾಲದಲ್ಲಿ ವೀರಶೈವರಲ್ಲಿ ಇಲ್ಲಿ ಹೇಳಿದ ಅರ್ಪಣ, ಪ್ರಸಾದ, ಕಾಯಕ, ದಾಸೋಹ ಇವುಗಳಿಗೆ ವಿಪರೀತಾರ್ಥಗಳುಂಟಾಗಿರುತ್ತವೆ. ಶಿವಶರಣರ ಕಾಲದಲ್ಲಿ ಇವುಗಳಿಗೆ ವಿಶೇಷಾರ್ಥಗಳಿದ್ದವು. ಆದರೆ ಆ ವಿಚಾರಗಳು ಈಗ ತಪ್ಪಿ ಹೋಗಿವೆ.

ಶಿವಾನುಭವದ ಪ್ರಕಾರ ಗುರು ಅಥವಾ ಜಂಗಮನ ಕಾಲ ತೊಳೆದ ನೀರು, ಇಷ್ಟು ಮಾತ್ರಕ್ಕೆ ಪಾದೋದಕವಾಗಲಾರದು. ಅಟ್ಟ ಅಡಿಗೆಯನ್ನು ದೇವರ ಮುಂದಿಟ್ಟು ಅದನ್ನು ದೇವರಿಗೆ ತೋರಿಸಿದ ಮಾತ್ರಕ್ಕೆ ಅದು ಪ್ರಸಾದವಾಗಲಾರದು. ವೀರಶೈವರಲ್ಲಿ ಪಾದೋದಕ ಮತ್ತು ಪ್ರಸಾದ ಇವುಗಳ ವಿಚಾರಗಳು ಬಹಳ ಭಿನ್ನವಾಗಿರುತ್ತವೆ.

ಪ್ರಸಾದವನ್ನು ಹೊಂದುವವನು ಮೊದಲು ತನ್ನ ಇಷ್ಟಲಿಂಗವನ್ನು ಪೂಜಿಸಿ ತನ್ನಲ್ಲಿ ಲಿಂಗಚೈತನ್ಯವನ್ನು ಉಂಟು ಮಾಡಿಕೊಳ್ಳಬೇಕು. ಇಷ್ಟಲಿಂಗ ಪ್ರಾಣಲಿಂಗ ಮತ್ತು ಭಾವಲಿಂಗಗಳೆಂದು ತ್ರಿವಿಧಲಿಂಗಗಳಿದ್ದು ಅವುಗಳನ್ನು ಅನುಕ್ರಮವಾಗಿ ತನ್ನ ಸ್ಥೂಲ, ಸೂಕ್ಷ್ಮ, ಕಾರಣ ಶರೀರಗಳಲ್ಲಿ ಈ ಲಿಂಗಪೂಜೆಯ ದ್ವಾರಾ ಅವನು ಸಂಬಂಧಿಸಿಕೊಳ್ಳಬೇಕು.

ಈ ತ್ರಿಲಿಂಗಗಳು ಅವನಲ್ಲಿ ಸಂಬಂಧಿಸಿದ ಬಳಿಕ ಅವು ಅಲ್ಲಿ ಸ್ಥಿರವಾಗಿ ಉಳಿಯಬೇಕು. ಇದು ಗುರು ಲಿಂಗ ಜಂಗಮಗಳಿಂದ ಸಾಧ್ಯವು. ವೀರಶೈವರು ಜಂಗಮನನ್ನು ಆರಾಧಿಸಿ, ಪಡೆದುಕೊಳ್ಳುವದರ ಉದ್ದೇಶವು ಇದೇ ಇರುತ್ತದೆ. ಹೀಗೆ ಪಡೆದುಕೊಂಡಲ್ಲಿ ಗುರು ಲಿಂಗ ಜಂಗಮಗಳು ಉಂಟಾಗಿ ಅವನಿಗೆ ಸಾಮರಸ್ಯ ಸ್ಥಿತಿಯು ಪ್ರಾಪ್ತವಾಗುತ್ತದೆ.

ಈ ಎಲ್ಲ ಸಂಬಂಧಗಳು ಓಂಕಾರಯುಕ್ತ ಪಂಚಾಕ್ಷರೀ ಮಂತ್ರದ ಧ್ಯಾನದ ಮೂಲಕವೇ ಆಗುತ್ತವೆ.

ಜಂಗಮನನ್ನು ಈ ಪ್ರಕಾರ ಅರ್ಚಿಸಿ ಇಷ್ಟ ಪ್ರಾಣ ಭಾವಲಿಂಗಗಳನ್ನು ಹೀಗೆ ತನ್ನಲ್ಲಿ ಅಳವಡಿಸಿಕೊಂಡು ಲಿಂಗದಲ್ಲಿ ಬೆರೆಯಬೇಕು.. ಇದು ಮಂತ್ರಯುಕ್ತ ಪಾದೋದಕದ ಮೂಲಕವೇ ಆಗುತ್ತದೆ.

ಇಂಥ ಪಾದೋದಕದ ಸೇವನೆಯಿಂದ ಶರೀರವು ಮಂತ್ರಮಯವಾಗುತ್ತದೆ.

ಹೀಗೆ ಪಾದೋದಕದಿಂದ ತನ್ನಲ್ಲಿ ತ್ರಿಲಿಂಗಗಳನ್ನು ಒಳಕೊಂಡು ಪ್ರಸಾದ ಗ್ರಹಣಮಾಡಬೇಕು. ಪ್ರಸಾದದ ಉದ್ದೇಶವು ತ್ರಿಲಿಂಗಗಳನ್ನು ತನ್ನಲ್ಲಿ ಮತ್ತಿಷ್ಟು ಬಲಪಡಿಸಿಕೊಳ್ಳುವದು ಇರುತ್ತದೆ.

ಪ್ರಸಾದದಲ್ಲಿ ಮಂತ್ರ ಮೂಲಕ ಆಹಾರ ಪದಾರ್ಥಗಳನ್ನು ತನ್ನಲ್ಲಿರುವ ಲಿಂಗಗಳಿಗೆ ಸಮರ್ಪಿಸಿ ಅವುಗಳನ್ನು ಗ್ರಹಿಸುವದು ಇರುತ್ತದೆ.

ಹೀಗೆ ಸಮರ್ಪಿಸಲ್ಪಟ್ಟ ಆಹಾರ ಪದಾರ್ಥಗಳು ಶರೀರದಲ್ಲಿ ಹೋದ ಬಳಿಕ ಅವನಲ್ಲಿ ಅವು ರಸರೂಪವಾಗಿ ಶರೀರವನ್ನು ವ್ಯಾಪಿಸಲು ಪಾದೋದಕದ ಮೂಲಕ ಆ ಮೊದಲು ಶರೀರದಲ್ಲಿದ್ದ ಮಂತ್ರ ಶಕ್ತಿಯು ಮತ್ತಿಷ್ಟು ದೃಢಪಡುತ್ತದೆ.

ಆದುದರಿಂದ ಪ್ರಸಾದವು ಪಾದೋದಕವಕಿಂತಲೂ ಸೂಕ್ಷ್ಮವಾದುದು ಮತ್ತು ಪರಿಣಾಮಕಾರಿಯು ಎಂದು ತಿಳಿಯಲ್ಪಟ್ಟಿದೆ.

ಈ ಕಾರಣಗಳಿಂದ ಪ್ರಸಾದದಲ್ಲಿ ಉಚ್ಛಿಷ್ಟ ಅಥವಾ ಎಂಜಲೆಂಬುದು ಇಲ್ಲ. ಅದು ಪವಿತ್ರವಾದುದು, ಶುದ್ಧವಾದುದು, ಅದು ತ್ರಿಲಿಂಗಗಳಿಗೆ ಅರ್ಪಿತವಾದುದು ಮತ್ತು ಮಂತ್ರಮಯವಾದುದು ಎಂಬ ವಿಚಾರಗಳು ಇದರಲ್ಲಿವೆ.

ಇಂಥ ಪ್ರಸಾದವನ್ನು ಸ್ವೀಕರಿಸುವಲ್ಲಿ ಜಾತಿಭೇದವಿರಲಾರದು. ಯಾವ ಜಾತಿಯವನಿದ್ದರೂ ಕೂಡ ಸಮಾನ ಭಾವದಿಂದ ಅವನೊಡನೆ ಇಂಥ ಪ್ರಸಾದವನ್ನು ಎಲ್ಲರೂ ಸ್ವೀಕರಿಸಬೇಕು. ಇಂಥ ಪ್ರಸಾದವನ್ನು ಸ್ವೀಕರಿಸುವಲ್ಲಿ ಉಚ್ಚ ನೀಚವೆಂಬ ಭಾವವಿಲ್ಲ. ಅದನ್ನು ತಳೆದಿದ್ದಾದರೆ ಅದು ಶ್ರೇಷ್ಠ ವಸ್ತುವಾದ ಮಂತ್ರದ ಅವಹೇಲನೆಯು. ಇಂಥ ವರ್ತನೆಯು ಮಂತ್ರ ಶರೀರಿಯಾದ ಲಿಂಗಾಂಗಿಯ ಆಚರಣೆಗೆ ಬಾಧಕವಾದದ್ದು.

ಪ್ರಸಾದದ ಈ ವಿಚಾರಗಳು ಬಿಬ್ಬಿ ಬಾಚಯ್ಯನನ್ನು ಪ್ರಸಾದಿಯ ಆಚರಣೆಗಳನ್ನು ಕೈಕೊಳ್ಳಲು ಪ್ರೇರೇಪಿಸಿದವು. ಅದರಂತೆ ಅವನು ತನ್ನ ಗ್ರಾಮದಲ್ಲಿ ಆಚರಿಸುತ್ತ ಬಂದನು.

ಹೀಗೆ ಕೆಲವು ದಿನಗಳಾದ ಬಳಿಕ ನೆರೆಯೂರಲ್ಲಿದ್ದ ಒಬ್ಬ ಹಿರಿಯ ಕುಲದ ಭಕ್ತನು ( ಎಂದರೆ ಒಬ್ಬ ಹೊಲೆಯನು ) ತನ್ನ ಮನೆಯಲ್ಲಿ ಒಂದು ಮಹತ್ತಾದ ಪರ್ವವನ್ನು ಮಾಡಿಸಿದನು. ಇದನ್ನು ಬಾಚಯ್ಯನು ಕೇಳಿ ಕೆಲವು ಜನ ಭಕ್ತ ಮಾಹೇಶ್ವರರನ್ನು ಕೂಡಿಕೊಂಡು ಆ ಗ್ರಾಮಕ್ಕೆ ಬಹು ಸಂಭ್ರಮದಿಂದ ಹೋದನು. ಅಲ್ಲಿಯ ಆ ಹೊಲೆಯ ಭಕ್ತನು ಅತ್ಯಂತ ಪ್ರಸಿದ್ಧನಾದ ಬಾಚಯ್ಯನು ತನ್ನ ಮನೆಗೆ ಬರುತ್ತಿರುವನೆಂಬುದನ್ನು ಕೇಳಿ ಆನಂದದಿಂದ ಅವನನ್ನು ಇದಿರ್ಗೊಂಡು ವೈಭವದಿಂದ ತನ್ನ ಮನೆಗೆ ಕರೆದುಕೊಂಡು ಬಂದನು. ಅಲ್ಲಿ ಗಣ ಪರ್ವವು ಬಹು ವಿಜೃಂಭಣೆಯಿಂದ ನಡೆದಿತ್ತು. ಅಲ್ಲಿ ಎಲ್ಲರೊಡನೆ

ಈ ಕಾಲದ ಕರ್ನಾಟಕದಲ್ಲಿ ಅನೇಕ ಶಿವಶರಣರು ಉದಯವಾಗಿ ಅವರಲ್ಲಿ ಅತ್ಯಂತ ಪ್ರಸಿದ್ಧಿಹೊಂದಿದ ಸಿದ್ಧರಾಮೇಶ್ವರ, ಅಲ್ಲಮಪ್ರಭು, ಸಕಳೇಶ ಮಾದರಸ, ಗೋರಕ್ಷ, ಮಹಾದೇವಿಯಕ್ಕ, ವೈದು ನರಾಮ ಇವರೇ ಮೊದಲಾದವರು ಶ್ರೀಶೈಲ ಮಲ್ಲಿಕಾರ್ಜುನನ ಕೇವಲ ಭಕ್ತರಾಗಿದ್ದರು. ಅಲ್ಲದೆ ಕರ್ನಾಟಕದಿಂದ ಭಕ್ತ ಜಂಗಮರ ಪರಿಸೆಗಳು ಅಸಂಖ್ಯಾತವಾಗಿ ಶ್ರೀಶೈಲಕ್ಕೆ ಯಾವಾಗಲೂ ಹೋಗುತ್ತಿದ್ದುದು ಶಿವಶರಣರ ಚರಿತ್ರೆಗಳಿಂದ ತಿಳಿದು ಬರುತ್ತದೆ. ಹೀಗೆ ಕ್ಷೇತ್ರಸ್ಥಾನಗಳಿಗೆ ದೂರದೂರದ ದೇಶಗಳಿಂದ ಧಾರ್ಮಿಕ ಪುರುಷರು ಬರುತ್ತಿರುವದರಿಂದ ಅವರಲ್ಲಿ ಪರಸ್ಪರ ವಿಚಾರವಿನಿಮಯಗಳಾಗಲು ಸಂಧಿಯು ದೊರೆಯುತ್ತದೆ. ಆದ್ದರಿಂದ ಇಂಥ ಸ್ಥಾನಗಳು ಧರ್ಮಪ್ರಸಾರ ಕಾರ್ಯಕ್ಕೆ ಬಹಳ ಅನುಕೂಲವಾದವುಗಳು. ಈ ಕಾಲದಲ್ಲಿ ಕರ್ನಾಟಕದಲ್ಲಿ ಶಿವಶರಣರ ಮತತತ್ವಗಳ ಪ್ರಚಾರವು ಬಹು ಬಲವಾಗಿ ನಡೆದಿದ್ದರಿಂದ ನೆರೆ ಪ್ರಾಂತವಾದ ಆಂಧ್ರ ದೇಶದಲ್ಲಿಯೂ ಕೂಡ ಅವು ಪ್ರಸಾರವಾಗುತ್ತಾ ನಡೆದಿದ್ದವು. ಆದ್ದರಿಂದಲೇ ಈ ದೇಶದಲ್ಲಿಯೂ ಅನೇಕ ಆಂಧ್ರ ಶಿವಶರಣರು ಉತ್ಪನ್ನರಾದರು. ಹಾಗೆಯೇ ಶ್ರೀಪತಿ ಪಂಡಿತನು ಶಿವಶರಣರ ಶಿವಾನುಭವದ ಉದಾರ ತತ್ವಗಳನ್ನು ತಿಳಿದುಕೊಂಡವನಾಗಿ ಅವುಗಳಂತೆ ಅವನು ಆಚರಿಸುತ್ತಿದ್ದನೆಂಬುದು ಅವನ ಚರಿತ್ರೆಯಿಂದ ಗೊತ್ತಾಗುತ್ತದೆ.

ಶ್ರೀಪತಿಯು ತನ್ನ ಶಿವಾನುಭವದ ಆಚರಣೆಯ ಮೂಲಕ "ಶಿವಾದ್ವಯ ಮಾರ್ಗಸ್ಥಾಪರ ಧುರಂಧರನೆಂ"ದು[೧] ಪ್ರಸಿದ್ಧನಾಗಿದ್ದನು. ಅವನು "ಶಿವಮಂತ್ರವೇ ಮಂತ್ರರಾಜವು, ಶಿವಪ್ರಸಾದವೇ ಭೋಗಶೇಖರವು" ಎಂದು ಶಪಥಪೂರ್ವವಾಗಿ ಜಯವಾಟೀ ಗ್ರಾಮದಲ್ಲಿ ಉದ್ಘೋಷಿಸುತ್ತಾ ಇರುವನು. ಇವನು ತನ್ನ ಈ ರೀತಿಯನ್ನು ಪ್ರದರ್ಶಿಸಲು ಒಂದು ವಿಜಯಧ್ವಜವನ್ನೆತ್ತಿ ಮೆರಿಸುವನು. ಹೀಗಿರುವಲ್ಲಿ ಒಂದು ದಿವಸ ಅವನು ಕೃಷ್ಣಾ ಸ್ನಾನವನ್ನು ಮಾಡಿಕೊಂಡು ಪಟ್ಟಣದ ಬೀದಿಯಿಂದ ಬರುತ್ತಿರುವಾಗ ಒಂದು ಮದ್ದಾನೆಯು ದಿಕ್ಕುಗೆಟ್ಟು ತನ್ನ ಇದಿರಿಗೆ

(೧) ವೀರಾರಾಧ್ಯನು ವಿರಚಿಸಿದ "ಧರ್ಮಗುಪ್ತಾಭ್ಯುದಯ"ವೆಂಬ ತೆಲುಗು ಕಾವ್ಯದಲ್ಲಿಯ ಉಲ್ಲೇಖ.

ಓಡಿ ಬರುವದನ್ನು ಕಂಡು ಅವನು ಅದರಿಂದ ತಪ್ಪಿಸಿಕೊಳ್ಳಲು ಗೊಡಗರಿ ಮಲ್ಲಯ್ಯನೆಂಬ ಶಿವಭಕ್ತನ ಮನೆಯ ಬಾಗಿಲಲ್ಲಿ ಬಂದು ನಿಂತನು. ಪ್ರತಿನಿತ್ಯ ಆರು ಜನ ಜಂಗಮರಿಗೆ ಶಿವಾರ್ಚನೆ ಮಾಡು ವದು ಈ ಮಲ್ಲಯ್ಯನ ಪದ್ಧತಿಯಾಗಿತ್ತು. ಆ ದಿವಸ ಅವನಿಗೆ ಐವರು ಮಾತ್ರ ಜಂಗಮರು ದೊರಕಿದ್ದರು. ಆಗ ಅಕಸ್ಮಾತ್ತಾಗಿ ಶ್ರೀಪತಿಯು ತನ್ನ ಬಾಗಿಲಲ್ಲಿ ಬಂದು ನಿಂತಿದ್ದನ್ನು ಕಂಡು ಇವನು ತನಗೆ ಬೇಕಾದ ಆರನೆಯ ಜಂಗಮನು ದೊರೆದನೆಂದು ಹರುಷಿತನಾಗಿ ಅವ ನನ್ನು ಒಳಿಯಕ್ಕೆ ಲಿಂಗಪೂಜೆಗೋಸ್ಕರ ಕರೆದುಕೊಂಡು ಹೋದನು. ಒಳಗೆ ಅನೇಕ ಭಕ್ತಜನರು ಭೋಜನಕ್ಕೆ ಕುಳಿತ್ತಿದ್ದರು. ಶ್ರೀಪತಿಯು ಅವರ ಭಕ್ತಿಗೆ ಮೆಚ್ಚಿ ಅವರೊಡನೆ ಊಟಕ್ಕೆ ಕುಳಿತುಕೊಂಡು ಭುಂಜಿಸಿ ತನ್ನ ಮನೆಗೆ ತಿರುಗಿ ಬಂದನು.

ಶ್ರೀಪತಿಯು ಜಾತಿಯಿಂದ ಬ್ರಾಹ್ಮಣನು. ಆದರೆ ಅವನು ಭೋಜನ ಮಾಡಿ ಬಂದ ಮಲ್ಲಯ್ಯನೂ ಅವನೊಡನೆ ಇದ್ದ ಭಕ್ತರೂ ಶೂದ್ರ ರೆಂದು ಬ್ರಾಹ್ಮಣರಿಂದ ಭಾವಿಸಲ್ಪಟ್ಟವರು. ಇಂಥವರೊಡನೆ ಅವನು ಭೋಜನ ಮಾಡಿದ್ದನ್ನು ಅವರು ಕೇಳಿ ಅವನಿದ್ದೆಡೆಗೆ ಬಂದು ಅವನಿಗೆ— ಪಂಡಿತರೇ, ನೀವು ವಿಪ್ರ ಜನ್ಮದಲ್ಲಿ ಹುಟ್ಟಿ ಹೀಗೆ ಕನಿಷ್ಟ ಜಾತಿಯವರಲ್ಲಿ ಉಣ್ಣಬಹುದೇ? ಎಂದು ಕೇಳಲು ಆ ಮಾತಿಗೆ ಅವನು— ಎಲೋ ಮರುಳುಗಳಿರಾ, ವೀರಶೈವರಲ್ಲಿ ಕುಲವನೆಣಿಸ ಬಹುದೇ? ಮಣ್ಣಿನಲ್ಲಿ ಚಿನ್ನ ಹುಟ್ಟಿದರೆ ಅದು ಮಣ್ಣೆನ್ನಬಹುದೇ? ಮಂತ್ರಪೂರ್ವಕವಾಗಿ ಪ್ರತಿಷ್ಠೆಯಾದ ಬಳಿಕ ಲಿಂಗವು ಶಿಲೆ ಎಂದೆನ್ನ ಬಹುದೇ? ಹಾಗೆಯೇ ಲಿಂಗಸನ್ನಿಹಿತನಾದ ಬಳಿಕ ಭಕ್ತನಲ್ಲಿ ಕುಲ, ಗೋತ್ರ, ವರ್ಣ, ಜಾತಿಗಳು ಉಳಿಯಲಾರವು, ಎಂದು ಅನೇಕ ಶಾಸ್ತ್ರ ಪ್ರಮಾಣಗಳಿಂದ ತನ್ನ ಮತವನ್ನು ಸಮರ್ಥಿಸಿದನು. ಆದರೆ ಬ್ರಾಹ್ಮ ಣರು ಅದಕ್ಕೆ ಒಪ್ಪದೆ ಅವರು ಶ್ರೀಪತಿ ಪಂಡಿತನಿಗೆ— ನಿನ್ನ ದೈವ ವಾವುದು ಎಂದು ಕೇಳಲು, ಅವನು— ನನಗೆ ಜಂಗಮವೇ ದೈವ ವೆಂದೆನ್ನಲು ಅವರು— ಅದು ಹೇಗೆನಲು, ಅದಕ್ಕೆ ಅವನು— ಲಿಂಗ ಮುಖ ಜಂಗಮವು. ಇದಕ್ಕೆ ಆಧಾರಗಳಿವೆ. ಆದ್ದರಿಂದ ಜಂಗಮಕ್ಕೆ ನೀಡಿದರೆ ಶಿವನು ತೃಪ್ತನಾಗುತ್ತಾನೆ. ಆದ್ದರಿಂದ ನನಗೆ ಜಂಗಮವೇ ದೈವವು ಎಂದು ಹೇಳಿದನು. ಅದಕ್ಕೆ ಆ ವಿಪ್ರರು— ಇದು ತಪ್ಪು

ಅಗ್ನಿಯೇ ದೈವವು. ಅಗ್ನಿಗೆ ಹವಿಸ್ಸ ನೀಡಿದರೆ ದೇವತೆಗಳು ತೃಪ್ತ ರಾಗುತ್ತಾರೆ. ಆದ್ದರಿಂದ ಅಗ್ನಿಯೇ ನಿಜವಾದ ದೈವವು ಎಂದೆನ್ನಲು ಅದಕ್ಕೆ ಶ್ರೀಪತಿಯು— ನೀವು ಅಗ್ನಿಯೇ ದೈವವೆನ್ನುತ್ತೀರಿ. ಆದರೆ ನಮ್ಮ ಆರಾಧ್ಯರು ಆ ಅಗ್ನಿಯ ನಾಲಿಗೆಯನ್ನು ಕೊಯ್ದುಬಿಡಲಿ ಲ್ಲವೇ? ಅಂದ ಬಳಿಕ ಆ ಅಗ್ನಿಯ ದೇವತ್ವವು ಎಲ್ಲಿ ಉಳಿಯಿತು? ಎಂದು ನುಡಿದನು. ಅದಕ್ಕೆ ಬ್ರಾಹ್ಮಣರು ಅವನಿಗೆ— ನೀನು ಅಗ್ನಿಗೆ ಹೀಗೆ ಅಪಹಾಸ್ಯ ಮಾಡಬೇಡ. ಅಗ್ನಿಯನ್ನು ನೀನಷ್ಟು ಮುಟ್ಟಿ ನೋಡು. ಅದು ನಿನ್ನನ್ನು ದಹಿಸಿ ಬಿಡುವದು. ಆದರೆ ಒಂದು ವೇಳೆ ನೀನು ಅದನ್ನು ನಿನ್ನ ಆಜ್ಞೆಯಲ್ಲಿಟ್ಟುಕೊಂಡು ಅದು ದಹಿಸದಂತೆ ಮಾಡಿದರೆ ಮಾತ್ರ ನಿನ್ನ ಮತವು ಸತ್ಯವು ಮತ್ತು ನಿನ್ನದು ಜಯವು ಎಂದು ಹೇಳಲು ಶ್ರೀಪತಿ ಪಂಡಿತನು— ಹಾಗೆಯೇ ಮಾಡುತ್ತೇನೆ, ಅಗ್ನಿಯನ್ನು ನನ್ನ ಅಂಕಿತದಲ್ಲಿಟ್ಟುಕೊಳ್ಳುತ್ತೇನೆ, ಇದನ್ನು ಈಗಲೇ ನಿಮಗೆ ಮಾಡಿ ತೋರಿಸುತ್ತೇನೆ ಎಂದು ನುಡಿದು ಅರಳಿಯ ಕೊರಡು ಗಳನ್ನು ತರಿಸಿ ಅವುಗಳಿಂದ ಕೆಂಡವನ್ನು ಮಾಡಿ, ಒಂದು ಮಹತ್ತಾದ ಜ್ವಾಲೆಯನ್ನು ಹುಟ್ಟಿಸಿ, ನೂತನರ ಮತ್ತು ಪುರಾತನರ ಅಡಿಗಳನ್ನು ನೆನೆದು ಒಂದು ಪಾವುಡವನ್ನು ನೆಲದ ಮೇಲೆ ಹಾಸಿ, ಅದರ ಮೇಲೆ ಉರಿ ಯುತ್ತಿದ್ದ ಆ ಬೆಂಕಿಯನ್ನು ಒಟ್ಟಿದನು. ಹೀಗೆ ಅದನ್ನು ಒಟ್ಟಿ ಪುರ ಜನರು ನೋಡುವಂತೆ ಆ ಜ್ವಾಲೆಯನ್ನು ಆ ಪಾವುಡದಲ್ಲಿ ಕಟ್ಟಿ ಒಂದು ಮೊಟ್ಟೆಯನ್ನು ಮಾಡಿ, ಅದನ್ನು ಬನ್ನಿಯ ಮರವ ಕೊಂಬೆಗೆ ತೂಗ ಹಾಕಿದನು. ಹೀಗೆ ಮಾಡಿದರೂ ಕೂಡ ಕಟ್ಟಿದ್ದ ಆ ಬಟ್ಟೆಗೆ ಎಷ್ಟು ಮಾತ್ರವೂ ಉರಿ ಹತ್ತಲಿಲ್ಲ. ಹೀಗೆ ಮೊಟ್ಟೆ ಮಾಡಿ ಕಟ್ಟಿದ್ದ ಆ ಬೆಂಕಿಯು ಏಳು ದಿನಗಳ ವರೆಗೂ ಅದರಲ್ಲಿಯೇ ಉರಿಯುತ್ತಿತ್ತು. ಆದರೆ ಅದರಿಂದ ಬಟ್ಟೆಗೂ ಸುತ್ತಲಿನ ಪದಾರ್ಥಗಳಿಗೂ ಎಷ್ಟು ಮಾತ್ರವೂ ಅಪಾಯ ಸಂಭವಿಸಿರಲಿಲ್ಲ.

ಶ್ರೀಪತಿಯು ಆ ಬೆಂಕಿಯ ಮೊಟ್ಟೆಯಲ್ಲಿ ಪಟ್ಟಣದಲ್ಲಿದ್ದ ಬ್ರಾಹ್ಮ ಣರ ಗೃಹಗಳಲ್ಲಿಯ ಬೆಂಕಿಯ ಅಂಶವೆಲ್ಲವುಗಳೂ ಆಕರ್ಷಿಸಲ್ಪಟ್ಟಿ ದ್ದವು. ಆದ್ದರಿಂದ ಅವರ ಮನೆಗಳಲ್ಲಿ ಬೆಂಕಿಯೇ ಇಲ್ಲದಾಯಿತು! ಅವರಲ್ಲಿರುವ ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯಗಳೆಂಬ ಮೂರ ಗ್ನಿಗಳು ನಂದಿಹೋದವು. ಅದರಿಂದ ವಿಪ್ರರು ಅನ್ನವಿಲ್ಲದೆ ಕಷ್ಟಪಡ

ಹತ್ತಿದರು. ಅವರ ಉದರಾಗ್ನಿಯೂ ಸಹ ಶಾಂತವಾಯಿತು. ಅವರಿಗೆ ಹಸಿವೆ ತೃಷೆಗಳಿಲ್ಲದಾದವು. ಆಗ ಅವರು ಅನ್ನವಿಲ್ಲದೆ ಕಷ್ಟಪಟ್ಟ ಕಡೆಗೆ ಆಲೋಚನೆಯನ್ನು ಮಾಡಿ ಶ್ರೀಪತಿ ಪಂಡಿತನ ಕಡೆಗೆ ಹೋಗಿ ಅವನನ್ನು ನಮಸ್ಕರಿಸಿ— ನಿಮ್ಮ ಕೂಡ ನಾವು ವ್ಯರ್ಥವಾಗಿ ವಾದಿಸಿದೆವು. ನಮ್ಮ ಅಪರಾಧವನ್ನು ಕ್ಷಮಿಸು, ಎಂದು ಬೇಡಿಕೊಳ್ಳಲು ಶ್ರೀಪತಿ ಪಂಡಿತನು ಕಟ್ಟಿದ್ದ ಆ ಬೆಂಕಿಯ ಮೊಟ್ಟೆಯನ್ನು ಗಿಡದಿಂದ ಕೆಳಗಿಳಿಸಿ ಅದರೊಳಗಿನ ಬೆಂಕಿಯನ್ನು ಹೊರಗೆ ಸುರುವಿದನು. ಹೀಗೆ ಸುರುವಿದ ಕೂಡಲೆ ವಿಪ್ರರ ಮನೆಯೊಳಗಿನ ಅಗ್ನಿಗಳು ಪುನಃ ಪುಟವಾಗಿ ಉರಿಯಹತ್ತಿದವು.

## ಶಿಲಾಶಾಸನದಲ್ಲಿ ಈ ಪೊವಾಡದ ಉಲ್ಲೇಖ.

ಬೆಜವಾಡದ ಮಲ್ಲೇಶ್ವರ ದೇವಾಲಯದಲ್ಲಿಯ ಶಿಲಾಶಾಸನದಲ್ಲಿ ಈ ಪೊವಾಡದ ಉಲ್ಲೇಖವಿದೆ. ಈ ಕಾಲದಲ್ಲಿ ಅನಂತರಾಜನೆಂಬ ರಾಜನು ಬೆಜವಾಡದಲ್ಲಿ ಆಳುತ್ತಿದ್ದನು. ಅವನು ಕಲ್ಯಾಣ ಪಟ್ಟಣದಲ್ಲಿ ಆಳುತ್ತಿದ್ದ ಪಶ್ಚಿಮ ಚಾಳುಕ್ಯ ರಾಜನಾದ ೬ನೇ ವಿಕ್ರಮಾದಿತ್ಯನ ದಂಡನಾಯಕನು. ಅವನು ಈ ಭಾಗದಲ್ಲಿಯ ಅನೇಕ ರಾಜ್ಯಗಳನ್ನು ಗೆದ್ದು ಬೆಜವಾಡವನ್ನು ತನ್ನ ಮುಖ್ಯ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನು. ಅವನು ೧೦೯೫ರಿಂದ ೧೧೧೮ರ ವರೆಗೆ ಆಳಿದನೆಂದು ತಿಳಿಯುತ್ತಿದೆ. ಅವನು ಬೆಜವಾಡದ ಸುತ್ತಲಿನ ನಾಡಾದ ಕೊಂಡು ಕೊಂಡಪಲ್ಲಿ ಎಂಬುವನ್ನು ಈ ಕಾಲದಲ್ಲಿ ಆಳುತ್ತಿದ್ದನೆಂದು ಶಿಲಾಶಾಸನಗಳಿಂದ ತಿಳಿದು ಬರುತ್ತದೆ. ಇವನ ಶಾಸನಗಳು ಗುಂಟೂರ ಜಿಲ್ಲೆಯಲ್ಲಿರುವ ಚಿಬ್ರೋಲ ಎಂಬಲ್ಲಿ ಇರುತ್ತವೆ. ಅವನ ಕಾಲದಲ್ಲಿಯೇ ಶ್ರೀಪತಿ ಪಂಡಿತನ ಪೊವಾಡವು ಜರಿಗಿದ್ದು. ಇದರಿಂದ ಶ್ರೀಪತಿಯ ಖ್ಯಾತಿಯು ನಾಡಿನಲ್ಲಿ ಹೆಚ್ಚಾಗಲು, ಅನಂತಭೂಪಾಲ ರಾಜನು ಅವನ ಶಿಷ್ಯತ್ವವನ್ನು ವಹಿಸಿದನೆಂದು ತಿಳಿಯುತ್ತಿದೆ.

ಶ್ರೀಪತಿ ಪಂಡಿತನ ಪೊವಾಡದ ವಿವರವು ಬೆಜವಾಡದಲ್ಲಿಯ ಇದೇ ಶಿಲಾಶಾಸನದಲ್ಲಿ ಬಂದಿದೆ. ಈ ಶಾಸನವನ್ನು ಅಲ್ಲಿಯ ಮಲ್ಲೇಶ್ವರ ದೇವಾಲಯದಲ್ಲಿ ಈಗಲೂ ನೋಡಬಹುದು. ಅದು ಅಚ್ಚಾಗಿದೆ. ಅದರಲ್ಲಿ ಶ್ರೀಪತಿ ಪಂಡಿತಾರಾಧ್ಯನು 'ಭಕ್ತೋತ್ತಮ' ನೆಂತಲೂ ಅವನು

ದೇವಋಷಿಗಳಿಗಿಂತಲೂ ಶಿವಭಕ್ತನೇ ಅಧಿಕನೆಂಬ ಸಿದ್ಧಾಂತವನ್ನು ಪ್ರತಿಜ್ಞಾಪೂರ್ವಕವಾಗಿ ಪ್ರತಿಪಾದಿಸಿದನೆಂತಲೂ ಅಗ್ನಿಯನ್ನು ವಸ್ತ್ರದಲ್ಲಿ ಕಟ್ಟಿ ಬನ್ನೀ ಗಿಡದ ಕೊಂಬೆಗೆ ಕಟ್ಟಿದನೆಂತಲೂ ವರ್ಣನೆ ಇದೆ. ಈ ದೇವಾಲಯಕ್ಕೆ ಪಲ್ಲವ ವಂಶೀಯನಾದ ಮತ್ತು ವೆಂಗಿಚಾಳುಕ್ಯನ ಸಾಮಂತನಾದ ಪಲ್ಲಕೇತು ಭೂಪಾಲನು ದಾನಕೊಟ್ಟಿದ್ದರ ಬಗ್ಗೆ ಇದೇ ಶಾಸನದಲ್ಲಿ ವರ್ಣನೆಯು ಬಂದಿರುತ್ತದೆ.

ಇದರಿಂದ ಶ್ರೀಪತಿ ಪಂಡಿತನು ಈ ಕಾಲದಲ್ಲಿ ಅತ್ಯಂತ ಪ್ರಸಿದ್ಧಿಗೆ ಬಂದಿದ್ದನೆಂತಲೂ ಅವನು ನಿಜವಾಗಿ ಆಗಿಹೋದ ಮಹಾಪುರುಷನೆಂತಲೂ ಗೊತ್ತಾಗುತ್ತದೆ. ಈ ಶಿಲಾಶಾಸನದಲ್ಲಿ ವರುಷವಿದ್ದ ಭಾಗವು ಸವೆದು ಹೋಗಿರುವದರಿಂದ ಇದು ಯಾವ ಕಾಲದ್ದೆಂಬುದು ನಿಶ್ಚಿತವಾಗಿ ಗೊತ್ತಾಗುವದಿಲ್ಲ.

ಈ ಪೊವಾಡವು ಜರಿಗಿದ ಸ್ಥಳವು 'ಬನ್ನೀ ದೊಡ್ಡಿ' ಎಂಬ ಹೆಸರಿನಿಂದ ಬಿಜವಾಡದಲ್ಲಿ ಈಗಲೂ ಪ್ರಸಿದ್ಧವಿದೆ. ಅಲ್ಲದೆ ಈ ಹೆಸರು ಅಲ್ಲಿಯ ಮುನಿಸಿಪಾಲಿಟಿ ಲೆಕ್ಕದಲ್ಲಿಯೂ ಕೂಡ ಇರುತ್ತದೆ.

## ಶಿಲಾಶಾಸನ ಮತ್ತು ಗ್ರಂಥಗಳಲ್ಲಿ ಶ್ರೀಪತಿ ಪಂಡಿತನ ಮತ್ತು ಅವನ ವಂಶಜರ ಉಲ್ಲೇಖಗಳು.

ಇದಲ್ಲದೆ ಶ್ರೀಪತಿ ಪಂಡಿತನು ಕೆಲವು ತೆಲುಗು ಗ್ರಂಥಗಳಲ್ಲಿಯೂ ಉಲ್ಲೇಖಿಸಲ್ಪಟ್ಟಿದ್ದಾನೆ. ಅವು ಕೆಳಗೆ ವಿವರಿಸಲ್ಪಟ್ಟಿವೆ.

(೧) ಮೋಚಿರಾಜು ವೀರಣಾಮಾತ್ಯನೆಂಬ ಗ್ರಂಥಕಾರನು ಮನುವಂಶ ಪುರಾಣ ಎಂಬ ಗ್ರಂಥವನ್ನು ಬರೆದಿದ್ದಾನೆ. ಅದರಲ್ಲಿ ಅವನು ಪಂಡಿತಾರಾಧ್ಯದೇಶಿಕನು ಬಿಜವಾಡದ ತೆಲ್ಲಿಗರ ಗುರುವಾಗಿದ್ದನೆಂತಲೂ ಅವರು ಅವನ ಕರುಣೆಗೆ ಪಾತ್ರರಾಗಿದ್ದರೆಂತಲೂ ವರ್ಣಿಸಿದ್ದಾನೆ. ಅಲ್ಲಿಯ ರಾಜನಾದ ಚಾಲುಕ್ಯ ವಂಶದ ಪ್ರತಾಪ ಚೋಳನು ಈ ತೆಲ್ಲಿಗರಿಗೆ ಅಂದರೆ ಗಾಣಿಗರಿಗೆ ವಿಜಯವಾಟಿಕಾ ಮೊದಲಾದ ೧೪ ಗ್ರಾಮಗಳನ್ನು ಉಂಬಳಿಯಾಗಿ ಹಾಕಿಕೊಟ್ಟದ್ದೂ ಅವರು ತಮ್ಮ 'ಗುರುವೂ ಮಹೇಶ್ವರ'ನೂ ಆದ ಶ್ರೀಪತಿಯ ಆಶೀರ್ವಾದದಿಂದ ಸುಖವಾಗಿದ್ದದ್ದೂ ಅದರಲ್ಲಿ ಹೇಳಿದೆ. ಮುಂದೆ ಈ ಶಿಲಾಶಾಸನದಲ್ಲಿ ಹೇಳಿರುವದೇ

ನೆಂದರೆ, ಈ ತೆಲ್ಲಿಗರು 'ಚಾಲುಕ್ಯ ವಿಷ್ಣುವರ್ಧನ ಮಹಾರಾಜ-ದೇವ ಭಲ್ಲಾಣ ವೀರಪೆರುಮಾಳ್ ಪ್ರತಾಪ ಚೋಳ' ಇವನ ರಾಜ್ಯದಲ್ಲಿರುವಾಗ್ಗೆ ಶಕೆ ೧೧೧೯ ಅಂದರೆ ಕ್ರಿ. ಶ. ೧೧೮೭ ರಲ್ಲಿ ಕೆಲವೊಂದು ಕಲಹದ ಮೂಲಕ ಇವರಲ್ಲಿ ಒಡಕುಗಳಾಗಿ ಒಂದು ಪಂಗಡದವರು ದಕ್ಷಿಣ ದೇಶವಾದ ನೆಲ್ಲೂರಿಗೆ ಬಿಜವಾಡವನ್ನು ಬಿಟ್ಟು ಹೋದರೆಂಬ ವರ್ಣನೆ ಇದೆ. ಈ ಭಲ್ಲನರೇಂದ್ರನ ಬೇರೆ ಎರಡು ಶಾಸನಗಳು ಕೃಷ್ಣಾ ಜಿಲ್ಲೆಯಲ್ಲಿ ಪೆದ್ದಕಲ್ಲೆಪಲ್ಲಿ ಎಂಬ ಗ್ರಾಮದಲ್ಲಿದ್ದು ಅವುಗಳಲ್ಲೊಂದರ ವರುಷ ೧೧೫೪ ಇರುತ್ತದೆ.

(೨) ವೀರಣಾಮಾತ್ಯನು 'ಭಿಲ್ಲಾಳ ಚರಿತ್ರೆ' ಎಂಬ ತೆಲುಗು ಕಾವ್ಯವನ್ನು ಬರೆದಿದ್ದಾನೆ. ಇದರಲ್ಲಿಯೂ ಅವನು ಶ್ರೀಪತಿಯನ್ನು ಉಲ್ಲೇಖಿಸಿದ್ದಾನೆ. ಈ ಚರಿತ್ರೆಯನ್ನು ಅವನು ದಾಮುಮೊಗ್ಗಣ ಎಂಬವನ ಆಶ್ರಯದಲ್ಲಿ ಬರೆದಿದ್ದು ಈ ಮೊಗ್ಗಣನ ಗುರುವು ಶಂಭುಲಿಂಗನೆಂಬವನೆಂತಲೂ ಈ ಶಂಭುಲಿಂಗನು ಶ್ರೀಪತಿ ಪಂಡಿತಾರಾಧ್ಯನ ವಂಶದವನೆಂತಲೂ ಇದರಲ್ಲಿ ಹೇಳಿದೆ.

(೩) ಈ ಶಂಭುಲಿಂಗನ ಮೊಮ್ಮಗನು ವೀರಣಾರಾಧ್ಯನೆಂಬವನು ಇದ್ದು ಈತನ ಮಗನು ನಾಗಲಿಂಗನೆಂಬುವನು 'ಪಟ್ಟಾಭಿರಾಮ ವಿಲಾಸಮು' ಎಂಬ ಆಂಧ್ರ ಕಾವ್ಯವನ್ನು ಬರೆದಿದ್ದಾನೆ. ಇದರಲ್ಲಿ ಈತನು ತಾನು 'ಪಂಡಿತಾರಾಧ್ಯವಂಶ ಸಂಭೂತ' ನೆಂದು ಹೇಳಿಕೊಂಡಿದ್ದಾನೆ.

(೪) 'ಗುರು ಸ್ತೋತ್ರ' ಎಂಬ ಹೆಸರಿನ ಇನ್ನೊಂದು ಆಂಧ್ರ ಕಾವ್ಯವಿದ್ದು ಇದರಲ್ಲಿ ಪರಮಾರಾಧ್ಯ ಎಂಬವನ ವಿಷಯವಾಗಿ ಸ್ತುತಿಪರ ಪದ್ಯಗಳು ಇವೆ. ಈ ಪರಮಾರಾಧ್ಯನು ಮಲ್ಲಿಕೇಶಲಿಂಗನ ಮಗನಿದ್ದು ಈ ಮಲ್ಲಿಕೇಶ್ವರನು ಶ್ರೀಪತಿ ಪಂಡಿತನ ವಂಶದವನೆಂದು ಇದರಲ್ಲಿ ಹೇಳಲ್ಪಟ್ಟಿದೆ.

ಈ ಗ್ರಂಥಗಳಲ್ಲಿರುವ ಈ ಎಲ್ಲ ಉಲ್ಲೇಖಗಳ ಮೇಲಿಂದ ಶ್ರೀಪತಿ ಪಂಡಿತನೂ ಅವನ ವಂಶಜರೂ ಆಂಧ್ರ ನಾಡಿನಲ್ಲಿ ಬಹು ಪ್ರಸಿದ್ಧರಾದದ್ದು ತಿಳಿದು ಬರುತ್ತದೆ. ಈ ಸಂಗತಿಗಳನ್ನು ಬೇರೆ ಕೆಲವು ಶಿಲಾಶಾಸನಗಳೂ ಕೂಡ ಸಮರ್ಥಿಸುತ್ತವೆ. ಅವುಗಳನ್ನು ಕೆಳಗೆ ಉಲ್ಲೇಖಿಸಿದ್ದೇವೆ.

(೫) ಕೊಂಡವೀಡು ಪಟ್ಟಣವು ೧೩೨೮ ರಿಂದ ಮುಂದೆ ಒಬ್ಬ ರಡ್ಡಿ ಅರಸುಮನೆತನದವರ ರಾಜಧಾನಿಯಾಗಿತ್ತು. ಅವರಲ್ಲಿ ದಾಮಂ ಪಾಟಿ ಚಿನ್ನಮನೇನಿಂಗಾರು ಎಂಬ ರಾಜನು ಅಲ್ಲಿಯ ವಿಶ್ವೇಶ್ವರ ದೇವಾಲಯದ ಗೋಪುರಕ್ಕಿದ್ದ ಕಲ್ಲಿನ ತೊಲೆಯನ್ನು ತನ್ನ ಗುರುವಾದ ಶ್ರೀಗಿರಿಯಯ್ಯಂಗಾರು ಇವನ ಸ್ಮರಣಾರ್ಥವಾಗಿ ಶಕೆ ೧೩೨೭ ಅಂದರೆ ೧೪೦೫ರಲ್ಲಿ ಕೊಟ್ಟಿದ್ದರ ಬರಹವು ಅದರ ಮೇಲಿದೆ. ಈ ಶ್ರೀಗಿರಿಯಯ್ಯಂಗಾರುವು ಪಂಡಿತಾರಾಧ್ಯನ ವಂಶದವನೆಂದು ಇದರಲ್ಲಿ ಹೇಳಿದೆ. ಇದೇ ದೇವಾಲಯದ ಒಂದು ಕಂಬದ ಮೇಲೆ ಪೆದ್ದಕೊಮಟಿ ವೇಮ ಎಂಬ ಹೆಸರಿನ ರಡ್ಡಿ ಕುಲದ ರಾಜನು ೧೪೦೮ ರಲ್ಲಿ ಅದೇ ಶ್ರೀಗಿರಿಗೆ ದಾನ ಕೊಟ್ಟಿದ್ದರ ಉಲ್ಲೇಖವಿದೆ. ಈ ರಾಜನು ಶೃಂಗಾರದೀಪಿಕಾ ಎಂಬ ತೆಲುಗು ಗ್ರಂಥವನ್ನು ಬರೆದಿದ್ದಾನೆ.

(೬) ಕರ್ನೂಲ ಜಿಲ್ಲೆಯಲ್ಲಿ ಪಾನೆಮ್ ಎಂಬ ಗ್ರಾಮವಿದ್ದು ಅಲ್ಲಿಯ ಪಾಣಿಕೇಶ್ವರ ಸ್ವಾಮಿಯ ದೇವಾಲಯದ ಮುಖಮಂಟಪದ ಕಂಬದ ಮೇಲೆ ಒಂದು ಶಾಸನವಿದೆ. ಅದರಲ್ಲಿ ವಿಭೂತಿ ಗೌರಯ್ಯನೆಂಬುವನು ತಾನು ವರಂಗಲ್ಲದ ಹತ್ತಿರವಿರುವ ಮಾಚಿರಾಜುಪಳ್ಳಿ ಎಂಬಲ್ಲಿಯವನಿದ್ದು ತಾನು ಶ್ರೀಶೈಲದಲ್ಲಿ ವಾಸಮಾಡುತ್ತಿರುವೆನೆಂತಲೂ ತಾನು ಪಂಡಿತಾರಾಧ್ಯನ ಸೇವಕನೆಂತಲೂ ಭಕ್ತಿಪೂರ್ವಕವಾಗಿ ಹೇಳಿಕೊಂಡಿದ್ದಾನೆ.

(೭) ಈ ಆಧಾರಗಳಲ್ಲದೆ ಪ್ರಸಿದ್ಧ ಗ್ರಂಥಕಾರನಾದ ಪಾಲ್ಕುರಿಕೆ ಸೋಮಾರಾಧ್ಯನು ತನ್ನ ಆಂಧ್ರಬಸವ ಪುರಾಣದಲ್ಲಿ ಶ್ರೀಪತಿಯನ್ನು ಸ್ಮರಿಸಿರುವದು ಕಂಡುಬರುತ್ತದೆ. ಈ ಕವಿಯು ಅವನನ್ನು ಶಿವಶರಣರ ಪಂಕ್ತಿಯಲ್ಲಿ ಸೇರಿಸಿ, 'ಶ್ರೀಪತಿ ಪಂಡಿತನು ಭಕ್ತಿಗೆ ಕಾರಣಪುರುಷ' ನೆಂತಲೂ 'ಹರಭಕ್ತಿ ಉತ್ಪತ್ತಿಗೆ ಅಧಿಪತಿ' ಎಂತಲೂ ವರ್ಣಿಸಿದ್ದಾನೆ. ಸೋಮಾರಾಧ್ಯನು ೧೨ನೇ ಶತಮಾನದ ಅಂತ್ಯ ಭಾಗದಲ್ಲಿ ಅನೇಕ ಉದ್ಗ್ರಂಥಗಳನ್ನು ಬರೆದು ಬಹು ಪ್ರಸಿದ್ಧನಾಗಿದ್ದಾನೆ.

(೮) ಪಂಡಿತತ್ರಯರಲ್ಲಿ ಅತ್ಯಂತ ಪ್ರಸಿದ್ಧನಾದ ಮಲ್ಲಿಕಾರ್ಜುನ ಪಂಡಿತಾರಾಧ್ಯನೂ ಕೂಡ ತನ್ನ 'ಶಿವತತ್ವಸಾರ' ಎಂಬ ಗ್ರಂಥದಲ್ಲಿ ಶ್ರೀಪತಿ ಪಂಡಿತನ ಮಹತ್ಕಾರ್ಯಗಳನ್ನು ಸ್ತುತಿಸಿದ್ದಾನೆ. ಶ್ರೀಪತಿಯು

ಶಿವನೊಬ್ಬನೇ ದೈವವೆಂದು ಸಿದ್ಧಾಂತಮಾಡಿದನೆಂತಲೂ ಅವನು ಅಗ್ನಿ ಯನ್ನು ವಿಜಯವಾಡದಲ್ಲಿ ಒಂದು ಶಮೀ ವೃಕ್ಷಕ್ಕೆ ಬಂಧಿಸಿದನೆಂತಲೂ ಹೇಳಿದ್ದಾನೆ. ಈ ಮಲ್ಲಿಕಾರ್ಜುನ ಪಂಡಿತನು ಬಸವೇಶ್ವರನಿಗೆ ಸಮಕಾಲೀನನಾಗಿದ್ದಾನೆ.

(೯) ಇದಲ್ಲದೆ ಪಾಲ್ಕುರಿಗೆ ಸೋಮಾರಾಧ್ಯನು ಬರೆದ ಗಣಸಹಸ್ರದಲ್ಲಿ ಶ್ರೀಪತಿ ಪಂಡಿತನ ಹೆಸರು ಬಂದಿರುತ್ತದೆ.

(೧೦) ನಾಗಲಿಂಗ ಕವಿಯು 'ಗುಪ್ತಾಭ್ಯುದಯ' ಎಂಬ ತೆಲುಗು ಗ್ರಂಥವನ್ನು ಬರೆದಿದ್ದಾನೆ. ಅದರಲ್ಲಿ ಅವನು ಶ್ರೀಪತಿಯ ಒಂದು ವಂಶಾವಳಿಯನ್ನು ಕೊಟ್ಟಿದ್ದು ಅದರಲ್ಲಿ ಶ್ರೀಪತಿಯ ಮಗನು ಗೋಕರ್ಣ, ಈತನ ಮಗನು ಮಲ್ಲಿಕಾರ್ಜುನ, ಈತನ ಮಗನು ಚಿಕ್ಕಮಲ್ಲಿಕಾರ್ಜುನ, ಮತ್ತು ಇವನಿಗೆ ಪಂಡಿತ ಎಂಬ ಹೆಸರಿನ ಮಗ ಹೀಗೆ ಅನುಕ್ರಮವಾಗಿ ಇದ್ದರೆಂದು ಹೇಳಿದೆ. ಶ್ರೀಪತಿಯ ಈ ವಂಶಾನುಕ್ರಮಣಿಕೆಯ ವಿಷಯವಾಗಿ ತೆಲುಗು ಗ್ರಂಥಕಾರರಲ್ಲಿ ಮತೈಕ್ಯವಿಲ್ಲೆಂದು ತಿಳಿಯುತ್ತಿದೆ. ಆದರೂ ಇವರಲ್ಲಿ ಶ್ರೀಪತಿಯ ಮಗನಾದ ಗೋಕರ್ಣನು ಒಬ್ಬ ಹೊಲೆಯನನ್ನು ದ್ವಿಜನನ್ನಾಗಿ ಮಾಡಿದನೆಂದು ಹೇಳಿದ್ದು ಲಕ್ಷಿಸತಕ್ಕ ಸಂಗತಿಯಾಗಿದೆ.

## ಶ್ರೀಪತಿ ಪಂಡಿತನ ವರ್ಚಸ್ಸು ಮತ್ತು ಅವನ ಕಾರ್ಯಗಳು.

ಈ ಎಲ್ಲ ಸಂಗತಿಗಳ ಮೇಲಿಂದ ಆಂಧ್ರದೇಶದಲ್ಲಿ ಶ್ರೀಪತಿ ಪಂಡಿತನು ಅತ್ಯಂತ ಪ್ರಸಿದ್ಧನಾಗಿದ್ದದ್ದು ಸ್ಪಷ್ಟವಿರುತ್ತದೆ. ಅವನಿದ್ದ ಬೆಜವಾಡ ಮತ್ತು ಅದರ ನೆರೆ ಪ್ರಾಂತದಲ್ಲಿ ತೆಲ್ಲಿಗರು ಈ ಕಾಲದಲ್ಲಿ ಬಹು ವರ್ಚಸ್ಸುಳ್ಳವರಾಗಿದ್ದು ಅವರು ಅವನಿಗೋಸ್ಕರ ಅತ್ಯಂತ ಭಕ್ತಿಭಾವವನ್ನು ತಾಳಿದವರಾಗಿದ್ದರೆಂದು ತಿಳಿಯುತ್ತಿದೆ. ಈ ಭಾಗವನ್ನು ಆಳುತ್ತಿದ್ದ ಮಾಂಡಲಿಕರೂ ಅನೇಕ ರಾಜರೂ, ಶ್ರೀಪತಿ ಪಂಡಿತನನ್ನು ಬಹಳ ಆದರಿಸುವವರಾಗಿದ್ದರು. ಅವನ ಮಹತ್ವವನ್ನು ಕುರಿತು ಮೇಲೆ ಹೇಳಿದ ಪ್ರಕಾರ ತೆಲುಗು ಭಾಷೆಯಲ್ಲಿ ಅನೇಕ ಗ್ರಂಥಗಳಲ್ಲಿ ಉಲ್ಲೇಖಗಳು ಬಂದಿರುತ್ತವೆ. ಅವುಗಳಲ್ಲಿ ಅವನ ಬಗ್ಗೆ ಅತ್ಯಂತ ಭಕ್ತಿಭಾವಪೂರಿತವಾದ ನುಡಿಗಳಿವೆ. ಅವನು ಶ್ರೇಷ್ಠ ಪಂಡಿತನಾದುದರಿಂದಲೇ ವಿದ್ವಾಂಸ

ರಿಂದ ವಿಶೇಷ ಮನ್ನಣೆಯನ್ನು ಹೊಂದಿ 'ಪಂಡಿತ'ನೆಂಬ ಹೆಸರನ್ನು ಪಡೆದು ವಿಖ್ಯಾತನಾಗಿದ್ದಾನೆ. ಅವನಲ್ಲಿ ಶಿವಶರಣರ ಉದಾರ ನಡೆಯು ಪೂರ್ಣವಾಗಿರುವದು ಅವನ ಚರಿತ್ರೆಯಿಂದಲೇ ಕಂಡುಬರುತ್ತದೆ. ಶಿವನೊಬ್ಬನೇ ದೈವವೆಂದು ಅವನು ಪ್ರತಿಪಾದಿಸಿದ್ದಾನೆ. ಅಗ್ನಿಯು ದೇವತೆ ಎಂಬುದನ್ನು ಅವನು ನಿರಾಕರಿಸಿ ಯಜ್ಞಾದಿಕರ್ಮಗಳನ್ನು ಬಸವೇಶ್ವರನಂತೆ ಒಪ್ಪಿರುವದಿಲ್ಲ. ವೀರಶೈವರಲ್ಲಿ ಜಾತಿವರ್ಣಗಳಿರು ವದಿಲ್ಲೆಂಬುದನ್ನು ಅವನು ಶಮಿವೃಕ್ಷದ ಪೊವಾಡವನ್ನು ಮಾಡಿದ್ದಾನೆ. ತೈಲಿಕರಂಥ ಸಮಾಜದವರಿಗೆ ಗುರುವಾಗಿದ್ದಾನೆ. ಅವನ ವಂಶಜರೂ ಕೂಡ ಅವನಂತೆಯೇ ಉದಾರ ವರ್ತನೆಯುಳ್ಳವರಾಗಿದ್ದಾರೆ. ಅವನ ಮಗನು ಅವನಂತೆಯೇ ಒಬ್ಬ ಅಂತ್ಯಜನನ್ನು ಬ್ರಾಹ್ಮಣನನ್ನಾಗಿ ಮಾಡಿ ದ್ದಾನೆ. ಈ ಉಭಯತರು ಕೇವಲ ನುಡಿಯಲ್ಲಿ ಇದನ್ನು ವ್ಯಕ್ತಮಾಡದೆ ಅಂತ್ಯಜ ಮತ್ತು ಶೂದ್ರರೊಡನೆ ಊಟವನ್ನು ಮಾಡಿ ಕೃತಿಯಲ್ಲಿ ತಂದಿದ್ದಾರೆ. ಇದಕ್ಕೋಸ್ಕರ ಆದ ವಾಗ್ವಾದಗಳಲ್ಲಿ ಲಿಂಗಿಗಳಲ್ಲಿ ಜಾತಿಭೇದವಿಲ್ಲೆಂಬುದನ್ನು ಶ್ರೀಪತಿಯು ಅನೇಕ ಶಾಸ್ತ್ರಾಧಾರಗಳಿಂದ ಸಿದ್ಧಪಡಿಸಿದ್ದಾನೆ. ಹೀಗೆ ಶ್ರೀಪತಿ ಪಂಡಿತನು ಶಿವಶರಣರ ಮತವನ್ನು ಆಂಧ್ರದೇಶದಲ್ಲಿ ಪ್ರಸಾರಪಡಿಸಿರುವದು ಕಂಡುಬರುತ್ತದೆ.

ಆಂಧ್ರದೇಶದಲ್ಲಿ ಕರ್ನಾಟಕಕ್ಕಿಂತಲೂ ಹೆಚ್ಚಾಗಿ ಬ್ರಾಹ್ಮಣ ಅಥವಾ ವೈದಿಕ ಪದ್ಧತಿಗಳನ್ನು ಅನುಸರಿಸುವದರ ಕಡೆಗೆ ಒಲವು ಇರುವದು ಕಂಡುಬರುತ್ತದೆ. ಆದುದರಿಂದ ಅವರಲ್ಲಿ ಬ್ರಾಹ್ಮಣ ಪದ್ಧತಿಗಳು ಹೆಚ್ಚಾಗಿ ಕಂಡುಬರುತ್ತವೆ. ಆದರೆ ಅಲ್ಲಿಯ ವೈದಿಕಾನುಯಾಯಿಗಳು ಮುಂದೆ ಶಿವಶರಣರ ಉದಾರ ತತ್ವಗಳಿಗೆ ಮನಸೋತು ವೀರಶೈವ ದೀಕ್ಷೆಯನ್ನು ಹೊಂದಿ ಅದರ ತತ್ವಗಳನ್ನು ಪ್ರಸಾರ ಮಾಡಿದ್ದು ತಿಳಿದುಬರುತ್ತದೆ. ಹೀಗೆ ಪ್ರಸಾರ ಮಾಡುವಲ್ಲಿ ಅವರು ಶ್ರುತ್ಯಾಗಮ ಪ್ರಮಾಣಗಳನ್ನು ಕಂಡುಹಿಡಿದು ಅವುಗಳ ಮೂಲಕ ವೀರಶೈವವನ್ನು ಅವರು ಪ್ರಸ್ಥಾಪಿ ಸಿದ್ದಾರೆ. ಇದು ಶ್ಲಾಘನೀಯವಾದ ಪ್ರಯತ್ನವು. ಉದಾಹರಣಾರ್ಥ ವಾಗಿ ಉರಿಲಿಂಗಪೆದ್ದಿಯು ಮೊದಲು ಆಂಧ್ರದೇಶದವನು. ಅವನು ಮುಂದೆ ವೀರಶೈವ ಧರ್ಮವನ್ನು ಸ್ವೀಕರಿಸಿ ವಚನಕಾರನಾದನು. ಅವನು ತನ್ನ ವಚನಗಳಲ್ಲಿ ಶ್ರುತಿ, ಪುರಾಣ, ವೇದಾಗಮ, ಉಪ ನಿಷತ್ತು ಇವುಗಳಲ್ಲಿಯ ಅನೇಕ ಆಧಾರಗಳಿಂದ ವೀರಶೈವಸಿದ್ಧಾಂತ

ಪನ್ನು ಸ್ಥಿರಪಡಿಸಿದ್ದಾನೆ. ಹಾಗೆಯೇ ಶ್ರೀಪತಿ ಪಂಡಿತನು ವೀರಶೈವ ರಲ್ಲಿ ಜಾತಿಭೇದವಿಲ್ಲೆಂಬುದನ್ನು ಜಾಬಾಲ, ಶತರುದ್ರೀಯ ಮೊದ ಲಾದ ಪ್ರಮಾಣಗಳಿಂದ ಸಿದ್ಧಾಂತಗೊಳಿಸಿದ್ದಾನೆ. ಹೀಗೆ ಈತನು ತನ್ನ ಪಾಂಡಿತ್ಯದಿಂದ ಶಿವಶರಣರ ಪಂಕ್ತಿಯಲ್ಲಿ ಅತ್ಯುಚ್ಚ ಸ್ಥಾನವನ್ನು ಹೊಂದಿದ್ದಾನೆ. ಬಸವ, ಅಲ್ಲಮಪ್ರಭು, ಚನ್ನಬಸವ ಮೊದಲಾದ ಶಿವಶರಣರು ಯಾವ ಕಾರ್ಯವನ್ನು ಕರ್ನಾಟಕದಲ್ಲಿ ಮುಂದುವರಿಸಿ ದರೋ ಅದೇ ಕಾರ್ಯವನ್ನು ಶ್ರೀಪತಿ ಪಂಡಿತನು ಆಂಧ್ರದೇಶದಲ್ಲಿ ಮುಂದುವರಿಸಿ ಅಲ್ಲಿಯ ವೀರಶೈವರ ಇತಿಹಾಸದಲ್ಲಿ ಅಜರಾಮರ ಕೀರ್ತಿಯನ್ನು ಹೊಂದಿದ್ದಾನೆ. ಅವನು ಆಂಧ್ರದೇಶದಲ್ಲಿರುವ ಆರಾ ಧ್ಯರಲ್ಲಿ ಬಹು ಪ್ರಸಿದ್ಧನಾಗಿ ಅಲ್ಲಿ ದಿಗ್ವಿಜಯ ಮಾಡಿ ಬ್ರಾಹ್ಮಣ ಧರ್ಮೀಯರನ್ನು ವಾದದಲ್ಲಿ ಜಯಿಸಿ ಜಾತಿ, ಕುಲ, ವರ್ಣಭೇದ ಗಳನ್ನು ಖಂಡಿಸಿ ಅನೇಕರನ್ನು ವೀರಶೈವ ಧರ್ಮದಲ್ಲಿ ಸೇರ್ಪಡೆ ಮಾಡಿದ್ದಾನೆ. ಅವನು ಮಾಡಿದ ಮಹತ್ಕಾರ್ಯಕ್ಕೋಸ್ಕರ ಆರಾಧ್ಯ ಬ್ರಾಹ್ಮಣರು ಅವನನ್ನು ತಮ್ಮ ಲಿಂಗಪೂಜಾಕಾಲದಲ್ಲಿ ಪ್ರತ್ಯಕ್ಷ ಶಂಕರ ನಂತೆ ಕಂಡು ಅವನನ್ನು ಭಕ್ತಿಭಾವದಿಂದ ಈಗಲೂ ಭಜಿಸುತ್ತಾರೆ.

## ಶ್ರೀಪತಿ ಪಂಡಿತನ ಕಾಲ.

ಶ್ರೀಪತಿ ಪಂಡಿತನು ಬಸವೇಶ್ವರನಕಿಂತಲೂ ಕೆಲವು ಕಾಲ ಮೊದ ಲಿಗನೆಂದು ತೋರುತ್ತದೆ. ಅನಂತರಾಜ ಮತ್ತು ಭಲ್ಲಾಣ ವೀರ ಪೆರು ಮಾಳ್ ಇವರ ಶಿಲಾಶಾಸನಗಳು ಈ ಸಂಗತಿಯನ್ನು ದೃಢಪಡಿಸು ತ್ತವೆ. ಆದರೂ ಶ್ರೀಪತಿಯು ಬಹುಶಃ ಬಸವೇಶ್ವರನ ಆರಂಭ ಕಾಲ ದಲ್ಲಿಯೂ ಅಸ್ತಿತ್ವದಲ್ಲಿರಬಹುದು. ಬಸವೇಶ್ವರನ ಸಮಕಾಲೀನನಾದ ಮಲ್ಲಿಕಾರ್ಜುನ ಪಂಡಿತಾರಾಧ್ಯನು ತನ್ನ ಗ್ರಂಥದಲ್ಲಿ ಅವನನ್ನು ಸ್ಮರಿ ಸಿರುವದರಿಂದ ಶ್ರೀಪತಿಯು ಬಸವೇಶ್ವರನಕಿಂತ ಸ್ವಲ್ಪ ಮೊದಲು ಇರಬ ಹುದು. ಆದರೆ ಭಲ್ಲಾಣನ ಶಿಲಾಶಾಸನದಿಂದ ಅವನು ಬಸವೇಶ್ವ ರನ ಕಾಲದಲ್ಲಿಯೂ ಇರಬಹುದೆಂದು ಊಹಿಸಲು ಆಸ್ಪದವಿದೆ.

ಶ್ರೀಪತಿ ಪಂಡಿತ, ಮಲ್ಲಿಕಾರ್ಜುನ ಪಂಡಿತ ಮತ್ತು ಮಂಚಣ್ಣ ಪಂಡಿತ ಈ ಮೂವರಲ್ಲಿ ಶ್ರೀಪತಿ ಪಂಡಿತನು ಎಲ್ಲರಿಗೂ ಮೊದಲಿಗನು,

# ಶಿವಾನುಭವ ಪತ್ರಿಕೆಗೆ ಸಹಾಯ.

ತಾ. ೮-೬-೧೯೪೬ ರಲ್ಲಿ ಬೆಂಗಳೂರ ಶ್ರೀ. K ಬಸವಪ್ಪನವರ ಪುತ್ರಿ ಚಿ॥ ಸೌ. ಶಾರದಾಂಬ ಮತ್ತು ಕಾನಕಾನಹಳ್ಳಿ ಶ್ರೀ ಕರಿಬಸಪ್ಪನವರ ಪುತ್ರ ಚಿ॥ ರಾ. K ನಂಜುಂಡಯ್ಯ ಇವರ ವಿವಾಹ ಮಹೋತ್ಸವ ಕಾಲದಲ್ಲಿ ಶಿವಾನುಭವ ಪತ್ರಿಕೆಗಾಗಿ ಒಂದು ರೂಪಾಯಿಯನ್ನು ಕಾಣಿಕೆಯಾಗಿ ಕೊಟ್ಟಿದ್ದಾರೆ. ಇದಕ್ಕೆ ನಾವು ಅವರಿಗೆ ಆಭಾರಿಯಾಗಿದ್ದೇವೆ.

## ಪಾಂಡೋಮಟ್ಟಿ.

ಸನ್ ೧೯೪೬ ಇಸ್ವಿ ಮೇ ಮಾಹೆ ತಾರೀಖು ೨೫ ರಲ್ಲಿ ಚನ್ನಗಿರಿ ತಾಲೂಕ ಪಾಂಡೋಮಟ್ಟಿ ಗ್ರಾಮದಲ್ಲಿ ಹರಪನಹಳ್ಳಿ ತಾಲೂಕ ಪುಣಬಗಟ್ಟೆ ವೇ. ಮೂ. ಮಠದ ಬಸಪ್ಪ ಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ಶಿವಾನುಭವ ಸಂಘ ನಡಸಿದ ಕಾಲದಲ್ಲಿ ಸೇರಿದ ಮಹಾಜನಗಳು ಶಿವಾನುಭವ ಪತ್ರಿಕೆಗೆ ಸಹಾಯ ಮಾಡಿದ ವಿವರ.

ಶ್ರೀಯುತರಾದ ಪುಣಬಗಟ್ಟೆ ಮಠದ ಬಸಪ್ಪಯ್ಯನವರು ೧ ರೂ , ಮಠದ ಶಿದ್ದಯ್ಯನವರು ೧ ರೂ., ತುಪ್ಪದ ಹಳ್ಳಿ ರುದ್ರಪ್ಪ ೩ ರೂ., ಮಾಳೇನಳ್ಳಿ ವೀರಭದ್ರಪ್ಪ ೨ ರೂ., ಸೋರೆಕಾಯಿ ಶಿವಲಿಂಗಪ್ಪ ೧ ರೂ.. ಮಾಸ್ಟರ್ ಶಾಂತಮ್ಮ ೧ ರೂ , ರಾಗಿ ನಂಜಪ್ಪ ೨ ರೂ., ಕಮ್ಮಾರ ಕೊಟಾಚಾರ್ರ್ರು ೧ ರೂ., ಕಾಯಕದ ಮಹದೇವಪ್ಪ ೧ ರೂ., ಮಠದ ಶಿದ್ದಲಿಂಗಯ್ಯ ೧ ರೂ., ಸೋರೆಕಾಯಿ ಚಂದಪ್ಪ ೧ ರೂ., ಜೀರನಳ್ಳಿ ನೀಲಮ್ಮ ೧ ರೂ., ಮೂಗಿನವ ಈಶ್ವರಪ್ಪ ಪಾರ್ವತಮ್ಮ ಇವರ ಕಲ್ಯಾಣದಲ್ಲಿ ೨ ರೂ., ಸೋರೆಕಾಯಿ ಲಕ್ಕಮ್ಮ ೧ ರೂ., ಊರ ಮುಂದಲಿ ರುದ್ರಮ್ಮ ೧ ರೂ., ಮಾಸ್ಟರ್ ಶಿವಲಿಂಗಪ್ಪ ೧ ರೂ., ಮಾಸ್ಟರ್ ನಾಗಪ್ಪ ೧ ರೂ., ಸೋರೆಕಾಯಿ ಮಹದೇವಪ್ಪ ೧ ರೂ , ತುಪ್ಪದಳ್ಳಿ ಮರುಳಶಿದ್ದಪ್ಪ ೧ ರೂ., ಮಠದ ಮಲ್ಲಯ್ಯನವರು ೧ ರೂ., ನಂದ್ಯಪ್ಪನವರು ೧ ರೂ., ಆಸಂದಿ ಅಂಕಳಪ್ಪನವರು ೧ ರೂ., ಡಿ. ನಿಂಗಪ್ಪನವರು ೧ ರೂ., ಮಠದ ಬಸವಯ್ಯನವರು ೨ ರೂ., ರಾಗಿ ವೀರಪ್ಪನವರು ೧ ರೂ., ಅರಬಿಳಚಿ ಮಹದೇವಪ್ಪ ೧ ರೂ., ಚಿರಡೋಣಿ ರಂಗಪ್ಪ ೧ ರೂ., ಮಲ್ಲಿಗೆರೆ ದ್ಯಾಮಪ್ಪ ೧ ರೂ., ಮುದ್ದಪ್ಪಳ ಶಿದ್ದಪ್ಪ ೧ ರೂ., ಕರಪ್ಪಳ ಬಮ್ಮಪ್ಪ ಡಿ. ೧ ರೂ., ಮಾಸ್ಟರ್ ವೀರಪ್ಪ ಪುರವಂಜಿ ೧ ರೂ., ಮುದ್ದಳ್ಳ ರೇವಪ್ಪ ಬನ್ನಿಹಟ್ಟಿ ೧ ರೂ., ಪರ್ವತಪ್ಪಳ ಬಸಪ್ಪ ಒಡ್ಡನಹಾಳ್ ೧ ರೂ.

ಇವರೆಲ್ಲರಿಗೂ ನಾವು ಕೃತಜ್ಞರಾಗಿದ್ದೇವೆ —ಸಂಪಾದಕ.

---

# ಶಿವಾನುಭವ

ವರ್ಷ ೨೦ | ಅಗಸ್ಟ ೧೯೪೬ | ಸಂಚಿಕೆ ೧೧

## ವೀರಶೈವರ ಶಿವಯೋಗ.

ಹಿಂದೂ ಧರ್ಮದಲ್ಲಿ ಅನೇಕ ಮತಗಳು ಉತ್ಪನ್ನವಾಗಿರುತ್ತವೆ. ಅವುಗಳಲ್ಲಿ ಅನೇಕ ಧರ್ಮಗ್ರಂಥಗಳೂ ಸಿದ್ಧಾಂತಗಳೂ ತತ್ವಾರ್ಥಗಳೂ ಉಂಟಾಗಿವೆ. ಈ ಸ್ಥಿತಿಯುಂಟಾಗಿರುವದರಿಂದ ಅನೇಕ ಸಮಾಜಗಳೂ ಪಂಥಗಳೂ ಸಂಗಡಗಳೂ ಅದರಲ್ಲಿ ಉತ್ಪನ್ನವಾಗಿ ಅವು ಅನೇಕ ಬಗೆಯಾಗಿ ಹೋರಾಡುತ್ತಿರುವದನ್ನೂ ನಾವು ನೋಡುತ್ತೇವೆ. ಇವುಗಳಲ್ಲಿರುವ ಈ ವ್ಯತ್ಯಾಸಗಳನ್ನು ಸರಿಪಡಿಸುವ ಬಗ್ಗೆ ವ್ಯವಸ್ಥಿತ ಪ್ರಯತ್ನಗಳು ಯಾವ ಸಮಾಜದಲ್ಲಿಯೂ ಯಾವಾಗಲೂ ಆಗಿರುವದಿಲ್ಲ. ಆದರೆ ವೀರಶೈವ ಧರ್ಮವು ಮಾತ್ರ ಇದಕ್ಕೆ ಅಪವಾದವಾಗಿದೆಂದು ಹೇಳಬಹುದು. ಅದು ಈ ಎಲ್ಲ ಧರ್ಮಗಳಲ್ಲಿರುವ ಅತ್ಯುಚ್ಚ ತತ್ವಗಳನ್ನು ಒತ್ತಟ್ಟಿಗೆ ಸಂಗ್ರಹಿಸಿ ಅವುಗಳನ್ನು ತನ್ನ ಸಾಮಾಜಿಕ ಮತ್ತು ಧಾರ್ಮಿಕ ವ್ಯವಸ್ಥೆಯಲ್ಲಿ ಹೆಣೆದಿರುವದು. ಅದರ ಷಟ್‌ಸ್ಥಲಶಾಸ್ತ್ರ, ಅಷ್ಟಾವರಣ ಪಂಚಾಚಾರಗಳು, ಸಪ್ತಾಚಾರಗಳು, ಏಕೋತ್ತರಗಳು, ಅದರಂತೆ ಶಿವಯೋಗದ ಆಚರಣೆಗಳು, ಇವುಗಳಲ್ಲೆಲ್ಲ ಈ ಸಂಗತಿಯು ಕಂಡು ಬರುತ್ತದೆ. ಇವುಗಳಲ್ಲಿ ಆಯಾ ಧರ್ಮಗಳಲ್ಲಿರುವ ಉಚ್ಚ ತತ್ವಗಳನ್ನು ನಾವು ಸ್ಪಷ್ಟವಾಗಿ ಗುರುತಿಸಬಹುದಾಗಿದೆ. ಆದ್ದರಿಂದ ವೀರಶೈವವು ಶಿವಮತದ ಸಾರವೆಂದು ಅದರಲ್ಲಿಯ ಅನೇಕ ಗ್ರಂಥಕಾರರು ಹೇಳುತ್ತಬಂದಿದ್ದು ಯಥಾರ್ಥವಾಗಿದೆ. ಪ್ರಸ್ತುತ ಲೇಖದಲ್ಲಿ ಈ ಎಲ್ಲ ಸಂಗತಿಯನ್ನು ನಾವು ವಿಸ್ತೃತವಾಗಿ ವಿವೇಚಿಸದೆ ಹಿಂದೂಧರ್ಮ

ದಲ್ಲಿರುವ ಯೋಗದ ಮುಖ್ಯ ತತ್ವಗಳು ವೀರಶೈವರ ಶಿವಯೋಗದಲ್ಲಿ ಹೇಗೆ ಹೆಣೆದಿರಲ್ಪಟ್ಟಿರುತ್ತವೆಂಬುದನ್ನು ಮಾತ್ರ ಇಲ್ಲಿ ದಿಗ್ದರ್ಶನೆ ಮಾಡುತ್ತೇವೆ.

ಯೋಗವು ಮಂತ್ರಯೋಗ, ಲಯಯೋಗ, ಹಠಯೋಗ ಮತ್ತು ರಾಜಯೋಗ ಹೀಗೆ ನಾಲ್ಕು ವಿಧವಾದುದೆಂದು ಸಾಮಾನ್ಯವಾಗಿ ಹೇಳಲ್ಪಡುವದುಂಟು. ಇವುಗಳಲ್ಲಿ ಮಂತ್ರಯೋಗದ ವಿಚಾರಗಳು ಅಷ್ಟಾವರಣಗಳಲ್ಲಿ ಒಂದು ಆವರಣವಾದ 'ಮಂತ್ರ' ಇದರಲ್ಲಿ ಬಹು ವಿಸ್ತೃತವಾಗಿ ಹೇಳಲ್ಪಟ್ಟಿರುತ್ತವೆ. ಮಂತ್ರವನ್ನು ಕುರಿತು ವೀರಶೈವರು ಬಹು ಆಳವಾದ ವಿಚಾರಗಳನ್ನು ಮಾಡಿದ್ದಾರೆ. ಇದು ಅವರ ಪಂಚಾಕ್ಷರೀ 'ಮಂತ್ರ'ದ ವಿವೇಚನೆಯಲ್ಲಿ ಕಂಡುಬರುತ್ತದೆ. ಲಯಯೋಗವು ವೀರಶೈವರು ದಿನಾಲು ಆಚರಿಸುವ ಶಿವಪೂಜಾಕ್ರಮದಲ್ಲಿ ಸೇರಿಸಲ್ಪಟ್ಟಿರುತ್ತದೆ. ಈ ಆಚರಣೆಯ ಪ್ರಕಾರ ಲಿಂಗಪೂಜೆ ಮಾಡುವವನು ಲಿಂಗದ ಧ್ಯಾನದಲ್ಲಿ ಮಗ್ನನಾಗಿ ಇಷ್ಟ ಪ್ರಾಣ ಭಾವಗಳಲ್ಲಿ ಲೀನನಾಗಿರುವದೇ ಅವನ ಕಾರ್ಯವಾಗಿರುತ್ತದೆ. ಇದು ಷಟ್‌ಸ್ಥಲದಲ್ಲಿ ವಿಸ್ತಾರವಾಗಿ ವಿವೇಚಿಸಲ್ಪಟ್ಟಿದೆ. ಹಠಯೋಗದ ತತ್ವಗಳೂ ಕೂಡ ಈ ಲಿಂಗಧ್ಯಾನದಲ್ಲಿ ಬರುತ್ತವೆ. ಅನೇಕ ತರದ ಆಸನಗಳನ್ನು ಹಾಕಿ ಲಿಂಗವನ್ನು ಧ್ಯಾನಿಸುತ್ತ ಷಟ್‌ಚಕ್ರಗಳನ್ನು ಪ್ರೇರೇಪಿಸುವದು ಹಠಯೋಗದ ಮುಖ್ಯ ಉದ್ದೇಶವಾಗಿದೆ. ಇದೇ ಕಾರ್ಯವನ್ನು ವೀರಶೈವರು ತಮ್ಮ ಲಿಂಗಪೂಜೆಯ ಕಾರ್ಯಗಳಲ್ಲಿ ಮಾಡುತ್ತಾರೆ. ಆದರೆ ಈ ಕಾರ್ಯಗಳನ್ನು ಅವರು ಮಾಡುವಲ್ಲಿ ಅವರು ತಮ್ಮ ಶಕ್ತಿಗಳನ್ನು ಲಿಂಗಮುಖ ಮಾಡಬೇಕೆಂಬುದೊಂದು ಮಹತ್ವದ ತತ್ವವನ್ನು ಇಟ್ಟುಕೊಂಡಿದ್ದಾರೆ. ಇದು ಇತರ ಯೋಗಗಳಲ್ಲಿ ಇರುವದಿಲ್ಲ. ರಾಜಯೋಗದ ತತ್ವಗಳು ಶಿವಯೋಗದ ತತ್ವಗಳಿಂದ ಭಿನ್ನವಾಗಿರುವದಿಲ್ಲ. ಆದರೆ ರಾಜಯೋಗದಲ್ಲಿ ಲಿಂಗಸಂಬಂಧದ ಆಚರಣೆಗಳಿರುವದಿಲ್ಲ. ಹೀಗೆ ಹಿಂದೂ ಜನರ ಯೋಗಾಭ್ಯಾಸದ ತತ್ವಗಳನ್ನು ವೀರಶೈವ ಷಟ್‌ಸ್ಥಲವಿದರು ಅಷ್ಟಾವರಣ ಏಕೋತ್ತರ ಮೊದಲಾದವುಗಳಲ್ಲಿರುವ ವಿಶಿಷ್ಟ ಆಚರಣೆಗಳಲ್ಲಿ ಸೇರಿಸಿದ್ದಾರೆ.

ಯೋಗಕ್ಕೆ ಎಂಟು ಅಂಗಗಳಿದ್ದು ಅವು ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ ಎಂಬಿವು

ಇರುತ್ತವೆ. ಇವೇ ಯೋಗಕ್ಕೆ ತಳಹದಿಯಾಗಿರುತ್ತವೆ. ಆದ್ದರಿಂದ ಹಿಂದೂ ಧರ್ಮಶಾಸ್ತ್ರಜ್ಞರು ಯೋಗಕ್ಕೆ ಅಷ್ಟಾಂಗಯೋಗ ಎಂಬ ಹೆಸರನ್ನು ಕೊಟ್ಟಿದ್ದಾರೆ. ಯೋಗಾಭ್ಯಾಸ ಮಾಡುವವರೆಲ್ಲರೂ ಇವುಗಳನ್ನು ಪಾಲಿಸಬೇಕೆಂಬ ನಿರ್ಬಂಧವಿದೆ. ಆದರೆ ವೀರಶೈವ ತತ್ವಜ್ಞಾನಿಗಳು ಇವೆಲ್ಲವುಗಳನ್ನು ತಮ್ಮ ಷಟ್‌ಸ್ಥಲದಲ್ಲಿ ಸೇರ್ಪಡೆಮಾಡಿದ್ದಾರೆ. ಷಟ್‌ಸ್ಥಲದಲ್ಲಿ ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂದು ಆರು ವಿಭಾಗಗಳಿವೆ. ಈ ಪ್ರತಿಯೊಂದು ಸ್ಥಲಕ್ಕೆ ಕೆಲವು ವಿಶಿಷ್ಟ ಆಚರಣೆಗಳಿರುತ್ತವೆ. ಈ ಆಚರಣೆಗಳಲ್ಲಿ ಮೇಲೆ ಕಾಣಿಸಿದ ಯೋಗದ ಎಂಟೂ ಅಂಗಗಳು ಸಮಾವೇಶವಾಗಿರುವದು ಕಂಡುಬರುತ್ತದೆ. ಆದ್ದರಿಂದ ಷಟ್‌ಸ್ಥಲಾಚರಣೆಯುಳ್ಳವನು ಒಬ್ಬ ಯೋಗಿಯು ಅಥವಾ ಶಿವಯೋಗಿಯು ಎಂದು ವೀರಶೈವ ಗ್ರಂಥಗಳಲ್ಲಿ ಕರೆಯಲ್ಪಟ್ಟಿದ್ದು ಕಂಡುಬರುತ್ತದೆ.

ಷಟ್‌ಸ್ಥಲಗಳಲ್ಲಿ ಭಕ್ತ ಮತ್ತು ಮಾಹೇಶ್ವರಸ್ಥಲಗಳಲ್ಲಿ ನೈತಿಕ ವಿಷಯಗಳು ಮುಖ್ಯವಾಗಿ ಸೇರ್ಪಡೆಯಾಗಿರುತ್ತವೆ. ನೈತಿಕಾಚಾರವು ಷಟ್‌ಸ್ಥಲಕ್ಕೆ ತಳಹದಿಯಾಗಿದೆ. ಆದ್ದರಿಂದ ಭಕ್ತ ಮಾಹೇಶ್ವರಸ್ಥಲಗಳಲ್ಲಿ ನೈತಿಕ ವಿಷಯಗಳು ಯಾವಾಗಲೂ ವಿಸ್ತಾರವಾಗಿ ವಿವೇಚಿಸಲ್ಪಡುತ್ತವೆ. ಯೋಗದ ಎಂಟು ಅಂಗಗಳಲ್ಲಿ ಮೊದಲಿನ ಎರಡು ಅಂಗಗಳು ಯಮ ನಿಯಮ ಎಂಬಿವು ಇದ್ದು ಇವು ನೈತಿಕ ವರ್ತನೆಗೆ ಸಂಬಂಧಿಸಿರುತ್ತವೆ. ಸರಿಯಾದ ವರ್ತನೆಯೇ 'ಯಮ' ಎಂದು ಹೇಳಲ್ಪಡುತ್ತಿದೆ. ಈ ವರ್ತನೆಯು ದೃಢವಾಗಿ ಉಳಿದಲ್ಲಿ ಇದು 'ನಿಯಮ'ವೆಂದು ಕರೆಯಲ್ಪಡುತ್ತಿದೆ. ಷಟ್‌ಸ್ಥಲಗಳಲ್ಲಿ ನೈತಿಕ ವರ್ತನೆಯು ಭಕ್ತನಿಗೆ ಮುಖ್ಯವಾದುದು. ಈ ವರ್ತನೆಯು ಅವನಲ್ಲಿ ದೃಢವಾಗಿ ಉಳಿದರೆ ಅದು ಮಹೇಶ್ವರಸ್ಥಲದ ಆಚರಣೆಯಾಗುತ್ತದೆ. ಇವೆರಡೂ ಸ್ಥೂಲ ಶರೀರಕ್ಕೆ ಸಂಬಂಧಿಸಿರುತ್ತವೆ.

ಪ್ರಸಾದಿ ಪ್ರಾಣಲಿಂಗಿ ಸ್ಥಲಗಳು ಸೂಕ್ಷ್ಮ ಶರೀರಕ್ಕೆ ಸಂಬಂಧಿಸಿರುತ್ತವೆ. ಈ ಸ್ಥಲಗಳಲ್ಲಿ ಅಂತರಂಗ ಶರೀರವೂ ಅದಕ್ಕೆ ಸಂಬಂಧಿಸಿದ ಅನೇಕ ಇಂದ್ರಿಯಗಳೂ ಅವುಗಳ ವ್ಯಾಪಾರಗಳೂ ಉಚ್ಚತಮ ಸ್ಥಿತಿಯನ್ನು ಹೊಂದುತ್ತವೆ. ಈ ಸ್ಥಿತಿಗೆ ಮನಸ್ಸಿನ ಏಕಾಗ್ರತೆಯು

ಅತ್ಯಾವಶ್ಯಕವು. ಇದರಲ್ಲಿ ಮನಸ್ಸು ತನ್ನ ಚಾಂಚಲ್ಯವನ್ನು ಹೋಗ ಲಾಡಿಸಬೇಕಾಗುತ್ತದೆ. ಯೋಗ ಶಾಸ್ತ್ರಜ್ಞರು ಈ ಸ್ಥಿತಿಯನ್ನು ಉಂಟು ಮಾಡಲು ಆಸನ, ಪ್ರಾಣಾಯಾಮ ಪ್ರತ್ಯಾಹಾರಗಳನ್ನು ಯೋಜಿಸಿ ದ್ದಾರೆ. ಯೋಗಿಯು ಇವುಗಳಂತೆ ಆಚರಿಸಿದಲ್ಲಿ ಅವನ ಮಾನಸಿಕ ಬಲವು ಬೆಳೆಯುತ್ತ ಹೋಗುತ್ತದೆ. ಇದು ಬೆಳೆದ ಹಾಗೆ ಅವನಲ್ಲಿ ರುವ ಷಟ್‌ಚಕ್ರಗಳಲ್ಲಿ ಒಂದು ಮಹತ್ತಾದ ಶಕ್ತಿಯು ಉಂಟಾಗ ಹತ್ತುತ್ತದೆ. ಇದರಿಂದ ಅವನು ಸಿದ್ಧಿಗಳನ್ನು ಸಹ ಮಾಡಲು ಶಕ್ತನಾಗುತ್ತಾನೆ.

ಷಟ್‌ಸ್ಥಲಗಳಲ್ಲಿ ಈ ಪರಿಣಾಮಗಳು ಪ್ರಸಾದಿ ಮತ್ತು ಪ್ರಾಣ ಲಿಂಗಿ ಈ ಸ್ಥಲಗಳಲ್ಲಿ ಉಂಟಾಗುತ್ತವೆ. ಆಗ ಅವನು ಲಿಂಗಧ್ಯಾನ ದಲ್ಲಿದ್ದುಕೊಂಡು ತನ್ನ ಮನಸ್ಸಿನ ಮೇಲೆ ತನ್ನ ಸ್ವಾಮಿತ್ವವನ್ನು ಸ್ಥಾಪಿಸಿಕೊಂಡಿರುತ್ತಾನೆ. ಯೋಗಾಭ್ಯಾಸಿಗಳು ೮೪ ಆಸನಗಳನ್ನು ಕಲ್ಪಿಸಿಕೊಂಡಿದ್ದಾರೆ. ಆದರೆ ಶಿವಯೋಗಿಗಳು ಅವುಗಳಲ್ಲಿ ಕಠಿಣ ವಾದ ಆಸನಗಳನ್ನು ಬಿಟ್ಟುಕೊಟ್ಟು ಸಿದ್ಧಾಸನ, ಪದ್ಮಾಸನ. ಸ್ವಸ್ತಿ ಕಾಸನ, ಅರ್ಧಚಂದ್ರಾಸನ, ಪರ್ಯಂಕಾಸನ ಎಂಬ ಐದು ಆಸನಗಳನ್ನು ಮಾತ್ರ ಅನುಸರಿಸಬೇಕೆಂದು ಬೋಧಿಸಿದ್ದಾರೆ. ಅವರು ಪ್ರಾಣಾಯಾ ಮದ ವ್ಯಾಖ್ಯೆಯನ್ನು ಮಾಡಿರುವದು ಹೇಗೆಂದರೆ— "ರೇಚಕಪೂರಕ ದಿಂದ ಮಾರುತ ಸೂಸುತ್ತಿರಲು ಸಮಸ್ತ ಪ್ರಾಣಿಗಳ ಆಯುಷ್ಯವು ದಿನದಿನಕ್ಕೆ ಕುಂದುತ್ತಿಹುದು. ಹೀಗೆ ಈಡಾಪಿಂಗಳದಲ್ಲಿ ಚರಿಸುವ ರೇಚಕ ಪೂರಕಂಗಳ ಭೇದವನರಿದು ಮನಪವನಂಗಳ ಮೇಲೆ ಲಿಂಗ ಸಂಬಂಧಿಸಿ ಮನ ಪವನ ಪ್ರಾಣಂಗಳು ಲಿಂಗದೊಡನೆ ಕೂಡಿ ಲಿಂಗ ಸ್ವರೂಪವ ಮಾಡಿ ವಾಯು ಪ್ರಾಣತ್ವವ ಕಳೆದು ಲಿಂಗಪ್ರಾಣಿಯನು ಮಾಡಿ ಹೃದಯ ಕಮಲದ ಮಧ್ಯದಲ್ಲಿ ಪ್ರಣವಮನನುಚ್ಚರಿಸುತ್ತ ಪರ ಶಿವನ ಧ್ಯಾನದಲ್ಲಿ ತರಹರವಾಗಿರ್ಪುದೀಗ ಪ್ರಾಣಾಯಾಮ" ಹೀಗೆ ಅವರು ಪ್ರಾಣಾಯಾಮದ ತತ್ವಗಳನ್ನು ನಿರೂಪಿಸಿದ್ದಾರೆ.

ಪ್ರತ್ಯಾಹಾರದ ಬಗ್ಗೆ ವೀರಶೈವ ಷಟ್‌ಸ್ಥಲವಿದರು ನಿರೂಪಿಸಿದ್ದು ಹೇಗೆಂದರೆ:—"ಆಹಾರದಿಂ ನಿದ್ರೆ, ನಿದ್ರೆಯಿಂದ ಇಂದ್ರಿಯಗಳು, ಇಂದ್ರಿ ಯಗಳಿಂದ ವಿಷಯಂಗಳು ಘನವಾಗುತ್ತಿಹವು ನೋಡಾ. ಆ ವಿಷಯ ದಿಂದ ದುಷ್ಕರ್ಮಂಗಳು ಮಿಗೆ ಮಾಡಿ ಜೀವಂಗೆ ಭವಬಂಧನ ಒಡ

ಗೂಡಿ ಆಯಾಸಂಬಿಡುತಿರ್ಪಗಜ್ಞಾನಕರ್ಮಗಳು. ಈ ಅವಸ್ಥೆಯು ಹೋಗ ದಿಹರು ಸುಜ್ಞಾನಿ ಧರ್ಮಗಳು. ಅದರಿಂದ ಆಹಾರಮಂ ಕ್ರಮ ಕ್ರಮ ದಿಂದ ಸರ್ವೇಂದ್ರಿಯಂಗಳನು ಲಿಂಗಮುಖದಿಂದ ಸಾವಧಾನವ ಮಾಡಿ ಕೊಂಡಿಪ್ಪದೀಗ ಪ್ರತ್ಯಾಹಾರಯೋಗ" ಎಂದು ವ್ಯಾಖ್ಯೆಯನ್ನು ಮಾಡಿ ದ್ದಾರೆ. ಅವರ ಅಭಿಪ್ರಾಯದ ಪ್ರಕಾರ ಬಹಿರಂಗದ ಒಲವುಗಳಿಗೆ ಇಂದ್ರಿಯಗಳನ್ನು ಗುರಿಮಾಡದೆ ಅವುಗಳನ್ನು ತನ್ನ ಅಂಕಿತದಲ್ಲಿಟ್ಟು ಕೊಂಡು ವರ್ತಿಸುವದು ಪ್ರತ್ಯಾಹಾರದ ಗುರಿಯಾಗಿದೆ. ಇದನ್ನಾದರೂ ಷಟ್‌ಸ್ಥಲ ಶಾಸ್ತ್ರಜ್ಞರು ಪ್ರಸಾದಿ ಪ್ರಾಣಲಿಂಗಿ ಈ ಸ್ಥಲಗಳಲ್ಲಿ ಸಮಾ ವೇಶ ಮಾಡಿದ್ದಾರೆ.

ಧ್ಯಾನಧಾರಣ ಇವುಗಳು ಶರಣಸ್ಥಲದ ಲಕ್ಷಣಗಳಾಗಿರುತ್ತವೆ. ಶರಣನು ತನ್ನ ಕರಸ್ಥಲದಲ್ಲಿರುವ ಶಿವಲಿಂಗಮೂರ್ತಿಯನ್ನು ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ, ಆಜ್ಞೆ, ಬ್ರಹ್ಮ ರಂಧ್ರ ಈ ಸ್ಥಾನಗಳಲ್ಲಿ ಧ್ಯಾನಿಸಿ ಅಲ್ಲಿ ಷಟ್‌ಲಿಂಗಗಳನ್ನು ನೆಲೆಗೊ ಳಿಸುತ್ತಾನೆ. ಇದು ಧ್ಯಾನದ ಪರಿಣಾಮವಾಗಿದೆ. ಹೀಗೆ ಅವುಗಳನ್ನು ನೆಲೆಗೊಳಿಸಿ ಅವು ತನ್ನ ಭಾವ, ಕರಣ, ಮನ ಮುಖ್ಯವಾದ ಸರ್ವಾಂ ಗದಲ್ಲಿ ಪಸರಿಸುವಂತೆ ಮಾಡುತ್ತಾನೆ. ಇದು ಧಾರಣವು. ಆಗ ಅವನು ಸರ್ವಾಂಗಲಿಂಗಿ ಎಂದೆನಿಸಿಕೊಳ್ಳುತ್ತಾನೆ. ಇದು ಶಿವಯೋಗಿಯು ಧ್ಯಾನಿ ಸುವ ಕ್ರಮವಾಗಿದೆ. ಆದರೆ ಇತರ ಯೋಗಿಗಳು ಹೀಗೆ ಲಿಂಗ ಮುಂತಾಗಿ ಆಚರಿಸುವದಿಲ್ಲ. ಅವರು ತಮ್ಮ ದೇಹಶಕ್ತಿಯನ್ನು ಬೆಳಿಸಿಕೊಂಡು ಒಂದು ಅಲೌಕಿಕ ಸಾಮರ್ಥ್ಯವನ್ನು ಪಡೆಯಲು ಹವಣಿಸುವದುಂಟು. ಅವರು ವೀರಶೈವರಂತೆ ಲಿಂಗವೆಂಬುದನ್ನು ಲಕ್ಷಿಸದೆ, ತ್ರಿಕೂಟಮಧ್ಯ, ಅಥವಾ ಇತರ ಆವುದೋ ಒಂದು ಪದಾರ್ಥ, ಅಥವಾ ಕೆಲವೊಂದು ಇಷ್ಟದೇವತೆ ಯನ್ನು ಇದಿರಿನಲ್ಲಿ ಇಟ್ಟುಕೊಂಡು ಧ್ಯಾನಿಸುತ್ತಾರೆ. ಇವರು ಹಠ ಯೋಗಿಗಳಾಗಬಹುದು. ಆದರೆ ಅವರು ಲಿಂಗವಿರಹಿತವಾಗಿ ಧ್ಯಾನಿ ಸುವದರಿಂದ ಶಿವಯೋಗಿಗಳೆಂದು ಕರೆಯಲ್ಪಡಲಾರರು.

ಹೀಗೆ ಶಿವಯೋಗವನ್ನು ಸಾಧಿಸಿದ ವೀರಶೈವರು ತಮ್ಮ ನಿತ್ಯದ ಕಾಯಕಗಳನ್ನು ಹಗುರಾಗಿ ಮಾಡಬಲ್ಲರು. ಅವರಲ್ಲಿ ಮನಸ್ಸಿನ ಏಕಾಗ್ರತೆಯು ಶಕ್ತಿಯು ಬಹು ಹೆಚ್ಚಾಗಿರುವದರಿಂದ ತಮ್ಮೆದುರಿಗೆ

ಬಂದ ಸಮಸ್ಯೆಗಳನ್ನು ಕೂಡಲೆ ಗ್ರಹಿಸಿ ಅವುಗಳನ್ನು ಸಿದ್ಧಿಗೆ ಒಯ್ದು ಬಿಡುತ್ತಾರೆ. ಅವರಲ್ಲಿ ಲಿಂಗಚೈತನ್ಯವಿರುವದರಿಂದ ಅವರು ಹೀಗೆ ಮಾಡುವುದೆಲ್ಲ ಅವರನ್ನು ಅಂತಿಮಸ್ಥಿತಿಗೆ ಬಹು ತೀವ್ರವಾಗಿ ತಂದು ಮುಟ್ಟಿಸಿಬಿಡುತ್ತದೆ. ಅವರು ಬಾಹ್ಯದಲ್ಲಿ ಜಗತ್ತಿನ ವ್ಯಾಪಾರಗಳಲ್ಲಿ ರುವುದಾಗಿ ಕಂಡುಬಂದರೂ ಅವುಗಳಿಂದ ಅವರು ಅಲಿಪ್ತರಾಗಿದ್ದು ಅವುಗಳಲ್ಲಿ ಇದ್ದೂ ಇಲ್ಲದಂತೆ ತಮ್ಮ ಕಾರ್ಯಗಳನ್ನು ನಿರ್ವಹಿಸು ತ್ತಾರೆ.

ಸಮಾಧಿ ಇದು ಅಷ್ಟಾಂಗಗಳಲ್ಲಿ ಕಡೆಯದಾಗಿದೆ. ಅದು ಮನು ಷ್ಯನ ಅಂತಿಮಸ್ಥಿತಿಯು. ಅದು ಮನುಷ್ಯನಲ್ಲಿರುವ ಶಕ್ತಿಗಳ ಪರ ಮಾವಧಿ ಸ್ಥಿತಿಯಾಗಿರುತ್ತದೆ. ಶಿವಾನುಭವ ಶಾಸ್ತ್ರದಲ್ಲಿ ಈ ಸ್ಥಿತಿಯ ವಿವರಣೆ ಇರುವದು ಹೇಗೆಂದರೆ— "ಸತ್ಕ್ರಿಯಾಜ್ಞಾನ ಯೋಗದಿಂದ ಇಷ್ಟಪ್ರಾಣಂಗೆ ಶಿವಕಳೆಯ ಸಂಬಂಧಿಸಿ ಇಷ್ಟ ಪ್ರಾಣಭಾವವೆಂಬ ಲಿಂಗ ತ್ರಯವನು ಏಕಾಕಾರ ಮಾಡಿ ಅಖಂಡ ಪರಿಪೂರ್ಣ ಕೇವಲ ಪರಂ ಜ್ಯೋತಿ ಸ್ವರೂಪವಪ್ಪ ಮಹಾಲಿಂಗದೊಳಗೆ ಸಂಯೋಗವಾಗಿ ಭಿನ್ನ ವಿಲ್ಲದೆ ಏಕಾರ್ಥವಾಗಿಹುದು ಸಮಾಧಿಯೋಗ." ಇಂಥ ಸಮಾಧಿಯಲ್ಲಿ ಶಿವಯೋಗಿಯು ಬಾಹ್ಯಕ್ರಿಯೆಗಳನ್ನು ಮಾಡುವದು ಕಂಡುಬಂದರೂ ಅದು ನಿಮಿತ್ತ ಮಾತ್ರಕ್ಕೆ. ಅವನಲ್ಲಿ ಕ್ರಿಯೆ, ಜ್ಞಾನ ಅವುಗಳ ಬಗ್ಗೆ ಭೇದಭಾವವಿರುವದಿಲ್ಲ. ಅವೆರಡೂ ಅವನಲ್ಲಿ ಸಮರಸವಾಗಿ ಸರಳವಾಗಿ ಪ್ರವಹಿಸುತ್ತವೆ. ಇದು ವೀರಶೈವನ ಅಂತಿಮಸ್ಥಿತಿಯಾಗಿ ರುತ್ತದೆ.

ಈ ಪ್ರಕಾರ ಯೋಗಶಾಸ್ತ್ರದ ತತ್ವಗಳನ್ನು ವೀರಶೈವ ತತ್ವವೇ ತ್ತಿಗಳು ತಮ್ಮ ಷಟ್‌ಸ್ಥಲಗಳಲ್ಲಿ ಸಮಾವೇಶ ಮಾಡಿ ಅದರಂತೆ ಆಚರಿ ಸುವವರಾಗಿದ್ದಾರೆ.

ಈ ಪ್ರಕಾರ ಅವರು ಆಯಾ ಮತಗಳಲ್ಲಿರುವ ಉತ್ಕೃಷ್ಟವಾದ ತತ್ವಗಳನ್ನು ಆಯ್ದು ಅವುಗಳನ್ನು ತಮ್ಮ ಷಟ್‌ಸ್ಥಲಾಚರಣೆಯ ಪ್ರತಿ ಯೊಂದು ಭಾಗದಲ್ಲಿ ಸಂಬಂಧಿಸಿರುವದು ಕಂಡುಬರುತ್ತದೆ. ಇದರಿಂದ ಬಸವೇಶ್ವರನ ಕಾಲದಲ್ಲಿ ವೀರಶೈವ ಮತವು ಬೇರೆ ಅನೇಕ ಮತದ ವರನ್ನು ತನ್ನಲ್ಲಿ ಬರಮಾಡಿಕೊಳ್ಳಲು ಅದಕ್ಕೆ ಸಾಧ್ಯವಾಗಿರುತ್ತದೆ.

# ಅಂತಃಕರಣ ಚತುಷ್ಟಯಗಳು.

ಮನ ಬುದ್ಧಿ ಚಿತ್ತ ಅಹಂಕಾರ ಇವು ಅಂತಃಕರಣ ಚತುಷ್ಟಯಗಳು. ಇವುಗಳೊಡನೆ ಮೂಲಾತ್ಮನೆಂಬುದನ್ನೂ ವಚನಕಾರರು ಸೇರಿಸುವದುಂಟು. ಇವುಗಳಲ್ಲಿ ಮನ, ಬುದ್ಧಿ ಇವು ಸೂಕ್ಷ್ಮ ಶರೀರಕ್ಕೆ ಸಂಬಂಧಿಸಿದವು. ಅಹಂಕಾರ, ಚಿತ್ತ, ಮೂಲಾತ್ಮ ಇವು ಕಾರಣ ಶರೀರಕ್ಕೆ ಸಂಬಂಧಿಸಿದವಿರುತ್ತವೆ.

ಒಮ್ಮೊಮ್ಮೆ ಮೂಲಾತ್ಮ ಇದರ ಸ್ಥಳದಲ್ಲಿ ಜ್ಞಾನ ಎಂತಲೂ ಹೇಳುವದುಂಟು. ಮೂಲಾತ್ಮ ಮತ್ತು ಜ್ಞಾನ ಕೆಲಕೆಲವು ಸಂದರ್ಭಗಳಲ್ಲಿ ಪರ್ಯಾಯ ಶಬ್ದಗಳಾಗಿ ಉಪಯೋಗಿಸಲ್ಪಡುವದುಂಟು. ಆದರೆ ಮೂಲಾತ್ಮ ಎಂಬುದರ ಉಪಯೋಗದಿಂದ ಮನುಷ್ಯನ ಕಾರ್ಯಗಳ ರೀತಿಯನ್ನು ಹೆಚ್ಚಿಗೆ ಸ್ಪಷ್ಟವಾಗಿ ತಿಳಿಯಲು ಶಕ್ಯವಾಗುತ್ತದೆ.

ಮನುಷ್ಯನಲ್ಲಿ ಸ್ಥೂಲ, ಸೂಕ್ಷ್ಮ, ಕಾರಣ ಎಂಬ ಮೂರು ಶರೀರಗಳಿದ್ದು ಇವುಗಳ ಮೂಲಕ ಮನುಷ್ಯನ ವ್ಯಾಪಾರಗಳು ನಡಿಯುತ್ತವೆ. ಇವುಗಳ ಸಹಾಯದಿಂದಲೇ ಮನುಷ್ಯನು ಜೀವಿಸುತ್ತಾನೆ, ವಿಚಾರ ಮಾಡುತ್ತಾನೆ ಮತ್ತು ಕ್ರಿಯೆಗಳನ್ನು ಮಾಡುತ್ತಾನೆ. ಇವುಗಳು ಸುವ್ಯವಸ್ಥೆಯ ಮೇಲೆ ಮನುಷ್ಯನ ಪ್ರಗತಿಯು ಅವಲಂಬಿಸಿರುತ್ತದೆ. ಆದ್ದರಿಂದ ಷಟ್‌ಸ್ಥಲಶಾಸ್ತ್ರಜ್ಞರು ಇವುಗಳ ವಿವೇಚನೆಗೆ ಮಹತ್ವದ ಸ್ಥಾನವನ್ನು ಕೊಟ್ಟಿರುತ್ತಾರೆ.

ಸ್ಥೂಲಶರೀರವು ಕಣ್ಣಿಗೆ ಕಾಣುವ ಬಾಹ್ಯಾಂಗವು. ಅದರ ಕಾರ್ಯಗಳು ದೃಷ್ಟಿಗೆ ಗೋಚರವಾಗುತ್ತವೆ. ಸೂಕ್ಷ್ಮ ಶರೀರವು ಅಂತರಂಗದಲ್ಲಿದ್ದುಕೊಂಡು ಬಾಹ್ಯ ಶರೀರದ ಮೂಲಕ ಕ್ರಿಯೆಗಳನ್ನು ಮಾಡಿಸುತ್ತದೆ. ಮನುಷ್ಯನ ಶರೀರದಲ್ಲಿ ಹರಿದಾಡುವ ಪಂಚವಾಯುಗಳು, ಮೂಗು, ಕಣ್ಣು, ಕಿವಿ ಮೊದಲಾದ ಐದು ಜ್ಞಾನೇಂದ್ರಿಯಗಳು ಗಂಧ, ರುಚಿ ಮೊದಲಾದ ಪಂಚ ವಿಷಯಗಳು ಮನ ಬುದ್ಧಿ ಹೀಗೆ ಹದಿನೇಳು ಇದ್ದು ಇವೆಲ್ಲವೂ ಸೂಕ್ಷ್ಮ ತನುವಿನಲ್ಲಿ ವ್ಯವಹರಿಸುತ್ತವೆ. ಈ ಬಾಹ್ಯ ಮತ್ತು ಅಂತರಂಗ ಶರೀರಗಳನ್ನವಲಂಬಿಸಿ

ಮನುಷ್ಯನಿಂದ ಕ್ರಿಯೆಗಳಾಗುತ್ತವೆ. ಈ ಕ್ರಿಯೆಗಳ ಪರಿಣಾಮಗಳು ಕಾರಣಶರೀರದಲ್ಲಿ ಸಂಗ್ರಹಿಸಲ್ಪಡುತ್ತವೆ. ಈ ಪರಿಣಾಮಗಳು ಜ್ಞಾನ ರೂಪಾಗಿ ಇಲ್ಲಿ ವಾಸಮಾಡುತ್ತವೆ. ಅಲ್ಲಿ ಆತ್ಮನು ಇದ್ದು ಅವನ ಲ್ಲಿಯೇ ಅವು ಸಂಗ್ರಹಿಸಲ್ಪಡುತ್ತವೆಂದು ತಿಳಿಯಲ್ಪಡುತ್ತದೆ.

ಮನ, ಬುದ್ಧಿ, ಚಿತ್ತ, ಅಹಂಕಾರ ಇವುಗಳ ವ್ಯಾಪಾರಗಳ ಮೇಲೆ ಮನುಷ್ಯನ ವೃತ್ತಿಗಳು ಅಥವಾ ಒಲವುಗಳು ಅವಲಂಬಿಸಿರು ತ್ತವೆ. ಇವು ಉಚ್ಚತರಗತಿಯವಾಗಿದ್ದರೆ ಮಾತ್ರ ಮನುಷ್ಯನಲ್ಲಿ ಪ್ರಗತಿ ಯುಂಟಾಗುತ್ತದೆ.

ಇವುಗಳಲ್ಲಿ ಮನಸ್ಸಿಗೆ ತತ್ವಜ್ಞಾನಿಗಳೂ ಯೋಗಿಗಳೂ ಮಹತ್ವದ ಸ್ಥಾನವನ್ನು ಕೊಟ್ಟಿದ್ದಾರೆ. ಈ ಮನಸ್ಸು ಪ್ರಗತಿಯ ತಳಹದಿಯಾ ಗಿದೆ. ಅದರಲ್ಲಿ ಚಾಂಚಲ್ಯತೆಯು ಇರುವದರಿಂದ ಅದನ್ನು ಹೋಗ ಲಾಡಿಸದ ಹೊರ್ತು ಪ್ರಗತಿಯಾಗಲಾರದು. ಯಾಕಂದರೆ ಮನಸ್ಸಿನ ಹೊಯ್ದಾಟದಿಂದ ಮನುಷ್ಯನಲ್ಲಿಯ ಶಕ್ತಿಗಳು ಕ್ಷೀಣವಾಗುತ್ತವೆ. ಈ ಹೊಯ್ದಾಟವು ನಿಂತು ಸ್ಥಿರಸ್ಥಿತಿಯು ಉಂಟಾದಲ್ಲಿ ಮನುಷ್ಯನಲ್ಲಿ ಹುದುಗಿರುವ ಅಪರಿಮಿತ ಶಕ್ತಿಯು ಪ್ರಕಟವಾಗಹತ್ತುತ್ತದೆ. ಮನ ಸ್ಸಿನಲ್ಲಿ ಸಂಕಲ್ಪ ವಿಕಲ್ಪಗಳು ಯಾವಾಗಲೂ ಉಂಟಾಗುತ್ತವೆ. ಹೀಗಾ ಗುವದು ಅದರ ಸ್ವಭಾವವಾಗಿದೆ. ಅಂದರೆ ಮನುಷ್ಯನು ಕಾರ್ಯ ಮಾಡುವಲ್ಲಿ ಸಂದೇಹಪಡುತ್ತಾನೆ, ನಾನಾ ಭೀತಿಗಳಿಗೆ ಒಳಗಾಗು ತ್ತಾನೆ, ಹಿಂಜರಿಯುತ್ತಾನೆ, ಅಧೈರ್ಯಪಡುತ್ತಾನೆ. ಈ ಸ್ಥಿತಿಯು ಮನಸ್ಸಿನ ಮೂಲಕವೇ ಆಗುತ್ತದೆ. ಮನಸ್ಸಿನ ಈ ಸ್ಥಿತಿಯನ್ನು ಹೋಗ ಲಾಡಿಸಿ ಅದನ್ನು ತನ್ನ ಅಧೀನದಲ್ಲಿಡುವದರಿಂದ ಮನುಷ್ಯನಿಂದ ಮಹ ತ್ತಾದ ಕಾರ್ಯಗಳಾಗುತ್ತವೆ.

ಮನಸ್ಸಿನ ತರುವಾಯ ಬುದ್ಧಿಯ ಕಾರ್ಯಗಳು ಮಹತ್ವದವು. ಬುದ್ಧಿಯು ವಿಚಾರ ಮಾಡುತ್ತದೆ. ಅದು ತನ್ನ ಇದಿರಿಗೆ ಬಂದ ಕಾರ್ಯಗಳು ಯೋಗ್ಯವೋ ಅಯೋಗ್ಯವೋ ಎಂಬುದನ್ನು ಅದು ಪರೀ ಕ್ಷಿಸಿ ನೋಡುತ್ತದೆ. ಹೀಗೆ ಅದು ಪರೀಕ್ಷಿಸಿ ಕೆಲವೊಂದು ನಿಶ್ಚಯಕ್ಕೆ ಬರುತ್ತದೆ. ಹೀಗೆ ನಿಶ್ಚಯವಾದ ಹೊರ್ತು ಮನುಷ್ಯನಿಂದ ಕೃತಿಗಳು ಘಟಿಸಲಾರವು.

ಈ ಮನ, ಬುದ್ಧಿ ಇವುಗಳು ಸೂಕ್ಷ್ಮ ಶರೀರಕ್ಕೆ ಸಂಬಂಧಿಸಿರುತ್ತವೆ. ಇವೆರಡೂ ಸ್ಥೂಲಶರೀರ ಮತ್ತು ಕಾರಣಶರೀರ ಇವುಗಳಲ್ಲಿ ಪರಸ್ಪರತೆಯುನ್ನುಂಟು ಮಾಡಲು ಒಂದು ಸೇತುವೆಯುಂತಿವೆ. ಇವುಗಳ ಕಾರ್ಯಗಳು ನಿಂತಲ್ಲಿ ಮನುಷ್ಯನ ಪ್ರಗತಿಯು ಕೂಡಲೆ ನಿಂತುಹೋಗುತ್ತದೆ. ಆದ್ದರಿಂದ ಇವುಗಳನ್ನು ಅಂಕಿತದಲ್ಲಿಟ್ಟುಕೊಂಡು ಅವುಗಳ ವ್ಯಾಪಾರಗಳನ್ನು ಬಲಪಡಿಸುವದು ಪ್ರತಿಯೊಬ್ಬನು ಮಾಡತಕ್ಕ ಆವಶ್ಯಕ ಕಾರ್ಯವಾಗಿರುತ್ತದೆ.

ಚಿತ್ತ, ಅಹಂಕಾರ ಮತ್ತು ಮೂಲಾತ್ಮ ಇವು ಕಾರಣ ಶರೀರಕ್ಕೆ ಸಂಬಂಧಪಟ್ಟಿರುತ್ತವೆ.

ಇವುಗಳಲ್ಲಿ ಚಿತ್ತದ ಮೂಲಕ ಧಾರಣ ಮತ್ತು ಅನುಸಂಧಾನ ಕಾರ್ಯಗಳು ನಡಿಯುತ್ತವೆ. ಸ್ಥೂಲ, ಸೂಕ್ಷ್ಮ ಶರೀರಗಳಲ್ಲಿ ಉಂಟಾಗುವ ಕಾರ್ಯಗಳ ಪರಿಣಾಮಗಳು ಚಿತ್ತದ ಮೂಲಕ ಈ ಶರೀರದಲ್ಲಿ ಗಟ್ಟಿಯಾಗಿ ಹಿಡಿಯಲ್ಪಡುವದುಂಟು. ಕಾರಣ ಶರೀರವು ಮನುಷ್ಯನಿಗೆ ಒಂದು ದೊಡ್ಡ ಸಂಗ್ರಹಾಲಯದಂತೆ ಇದೆ. ಕೆಳಗಿನ ಶರೀರಗಳಲ್ಲಿ ಮನುಷ್ಯನಿಗೆ ಆಗುವ ಅನುಭವಗಳು ಚಿತ್ತಿನ ಕಾರ್ಯದ ಮೂಲಕ ಈ ಕಾರಣ ಶರೀರದಲ್ಲಿ ಸಂಗ್ರಹಿಸಲ್ಪಡುವದುಂಟು. ಈ ಸಂಗ್ರಹವು ಯಾವ ರೀತಿಯದು ಇರುತ್ತದೆಯೋ ಅದರ ಮೇಲೆ ಮನುಷ್ಯನ ವ್ಯಕ್ತಿತ್ವವು ಅವಲಂಬಿಸಿರುತ್ತದೆ. ಈ ಸಂಗ್ರಹದಲ್ಲಿ ಉತ್ತಮ ತೆರದ ಅನುಭವಗಳಿದ್ದರೆ ಅವಿದ್ದ ವ್ಯಕ್ತಿಯು ಲೋಕಕ್ಕೆ ಕಲ್ಯಾಣವನ್ನು ಮಾಡುವಂಥವನಾಗುತ್ತಾನೆ. ಅವನಿಂದ ಜಗತ್ತಿಗೆ ಹಿತವಾಗುತ್ತದೆ. ಒಂದು ವೇಳೆ ಅದರಲ್ಲಿ ಕೆಡಕು ವಾಸನೆಗಳು ಅಥವಾ ಪ್ರವೃತ್ತಿಗಳು ತುಂಬಿಕೊಂಡಿದ್ದರೆ ಅಂಥವನಿಂದ ಅಹಿತವಾಗುತ್ತದೆ. ಈ ವ್ಯಕ್ತಿತ್ವವೇ ಅಹಂಕಾರವೆಂದೆನಿಸಿಕೊಳ್ಳುತ್ತದೆ. ಅಹಂಕಾರ ಇದರ ಅರ್ಥವು ಸೊಕ್ಕು ಅಥವಾ ಗರ್ವ ಎಂದಿರದೆ ಮನುಷ್ಯನ ವ್ಯಕ್ತಿತ್ವಕ್ಕೆ ಕಾರಣವಾಗುವಂತಹಸ್ಥಿತಿಯು ಎಂಬ ಭಾವವು ಅದರಲ್ಲಿ ಇದೆ.

ಈ ಯಾವತ್ತು ಶರೀರಗಳಿಗೆಲ್ಲ ಪ್ರೇರಣೆ ಮಾಡುವಂಥವನು ಮೂಲಾತ್ಮನಿದ್ದಾನೆ. ಈ ಮೂಲಾತ್ಮನಿಂದಲೇ ಈ ಎಲ್ಲ ಶರೀರಗಳಲ್ಲಿ ಚೈತನ್ಯವು ಉಂಟಾಗುತ್ತದೆ. ಈ ಚೈತನ್ಯದ ಮೂಲಕ ಈ ಶರೀರಗಳಲ್ಲಿ

ಅನೇಕ ರೀತಿಯ ಕಾರ್ಯಗಳು ಯಾವ ರೀತಿಯವಾಗಿರುತ್ತವೆಯೋ ಅದಕ್ಕನುಗುಣವಾಗಿಯೇ ಪ್ರಗತಿಯು ಉಂಟಾಗುತ್ತದೆ. ಆದ್ದರಿಂದ ಮನುಷ್ಯನು ತನ್ನ ಕರ್ಮೇಂದ್ರಿಯ ಜ್ಞಾನೇಂದ್ರಿಯಗಳನ್ನೂ ಮನಸ್ಸು ಮತ್ತು ಬುದ್ಧಿ ಇವುಗಳನ್ನೂ ಸರಿಪಡಿಸಿಕೊಳ್ಳಬೇಕು. ಇವು ಸರಿಯಾದ ಮಾರ್ಗದಿಂದ ನಡೆದುಬಂದರೆ ಮನುಷ್ಯನ ಪ್ರಗತಿಯು ಬಹು ತೀವ್ರ ವಾಗಿ ಆಗುತ್ತದೆ.

---

## ಕಂಪನಿ ಸರಕಾರದ ದಂಡಕ.

(ರಾ॥ ಬ॥ ಪಿ. ಜಿ. ಹಳಕಟ್ಟಿ ಬಿ. ಏ ಎಲ್. ಎಲ್. ಬಿ. ವಿಜಾಪುರ)

ನಮ್ಮ ಗ್ರಂಥ ಸಂಶೋಧನೆಯ ಕಾಲದಲ್ಲಿ 'ಕಂಪನಿ ಸರಕಾರದ ದಂಡಕ' ಎಂಬ ಹಸ್ತಲಿಖಿತ ಲಾವಣಿಯು ದೊರೆತಿದ್ದು ಅದನ್ನು ನಾವು ಇಲ್ಲಿ ಪ್ರಸಿದ್ಧಿಸಿದ್ದೇವೆ. [ಪೇಶ್ವೆಗಳ ರಾಜ್ಯವು ೧೮೧೮ ರಲ್ಲಿ ಮುಗಿತಾಯ ಹೊಂದಿ ಅದೆಲ್ಲವೂ ಬ್ರಿಟಿಶರ ಕೈವಶವಾಯಿತು. ಬ್ರಿಟಿಶರ ರಾಜ್ಯವು ಸ್ಥಾಪಿತವಾದ ಬಳಿಕ ಕೆಲವು ವರ್ಷಗಳಲ್ಲಿಯೇ ಈ ಲಾವಣಿಯನ್ನು ಮಾಡಿದ್ದು ಅದರಲ್ಲಿ ಪೇಶ್ವೆಯವರ ಅವ್ಯವಸ್ಥಿತ ಆಳಿಕೆ ಮತ್ತು ಬ್ರಿಟಿಶರ ಸುವ್ಯವಸ್ಥೆಯ ರಾಜ್ಯಭಾರ ಇವುಗಳು ಬಹು ಚನ್ನಾಗಿ ವರ್ಣಿಸಲ್ಪಟ್ಟಿವೆ.]

ಮರಾಠರ ಕೂಡ ಆದ ಅಂತ್ಯ ಯುದ್ಧದಲ್ಲಿ ಬ್ರಿಟಿಶ್ ದಂಡಾಳುಗಳು ಪುಣೆ ಪಟ್ಟಣದ ಮೇಲೇರಿಬರಲು ಅವರ ಮತ್ತು ಮರಾಠರ ನಡುವೆ ಕಾಳಗವು ಸಂಭವಿಸಿತು. ಇದು ಪುಣೆ ಪಟ್ಟಣದಿಂದ ೪ ಮೈಲು ದೂರವಿರುವ ಖಡಕಿ ಎಂಬಲ್ಲಿ ಆದದ್ದರಿಂದ ಇದು ಖಡಕಿ ಕಾಳಗವೆಂದು ಇತಿಹಾಸದಲ್ಲಿ ಪ್ರಸಿದ್ಧವಾಗಿದೆ. ಇದರಲ್ಲಿ ಪೇಶ್ವೆಯ ಸೈನ್ಯವು ಪರಾಜಿತವಾದ್ದರಿಂದ ಬಾಜಿರಾವ ಪೇಶ್ವೆಯು (ಇಲ್ಲಿ ಬಾಜಿರಾವ ರಘುನಾಥ ಎಂದು ಕರೆಯಲ್ಪಟ್ಟಿದ್ದಾನೆ.) ಪುಣೆ ಪಟ್ಟಣದಿಂದ ಓಡಿಹೋದನು. ಮುಂದೆ ಅವನನ್ನು ಬ್ರಿಟಿಶ ದಂಡಾಳುಗಳು ಬೆನ್ನಟ್ಟಲು ಅವನು ಮುಂದೆ ಅವರ ಕೈವಶವಾದನು. ಆಗ ಅವರು ಅವನ ರಾಜ್ಯ

ವನ್ನು ಕಸೆದುಕೊಂಡು ಅವನನ್ನು ಕಾಶೀ ಪಟ್ಟಣಕ್ಕೆ ಸಮೀಪವಿರುವ ಬ್ರಹ್ಮಾವರ್ತದಲ್ಲಿರಲು ಅಪ್ಪಣೆ ಕೊಟ್ಟರು. ಹಾಗೆಯೇ ಅವನು ಅಲ್ಲಿಯೇ ತನ್ನ ಜೀವಾವಧಿ ವರೆಗೆ ವಾಸ ಮಾಡಿದನು.

ಈ ಲಾವಣಿಯಲ್ಲಿ ಬ್ರಿಟಿಶರ ದಂಡಾಳುಗಳು ಪುಣೇ ಪಟ್ಟಣ ವನ್ನು ಮುತ್ತಿದ್ದೂ, ಬಾಜೀರಾಯನನ್ನು ಹಿಡಿದು ಬ್ರಹ್ಮಾವರ್ತಕ್ಕೆ ಕಳಿಸಿದ್ದೂ ಉಲ್ಲೇಖವಾಗಿವೆ. ಆಗ ಉತ್ತರ ಕರ್ನಾಟಕ ಭಾಗವು ಪೇಶ್ವೆಯವರ ಆಡಳಿತೆಯಲ್ಲಿದ್ದು ಥಾಮಸ ಮನ್ರೋ ಈತನು ಇದನ್ನು ಕೈವಶ ಮಾಡಿಕೊಂಡು ಧಾರವಾಡವನ್ನು ತನ್ನ ಆಡಳಿತೆಯ ಮುಖ್ಯ ಸ್ಥಾನ ವನ್ನಾಗಿ ಮಾಡಿದನು. ಈ ಕಾಲದಲ್ಲಿ ಜನರು ಪೇಶ್ವೆಯ ಆಡಳಿತೆಯ ಅವ್ಯವಸ್ಥೆಗೆ ಬಹಳ ಬೇಸರುಪಟ್ಟವರಾದ್ದರಿಂದ ಈ ಭಾಗವನ್ನು ಕೈವಶ ಮಾಡಿಕೊಳ್ಳುವದು ಅವನಿಗೆ ದುಸ್ತರವಾಗಲಿಲ್ಲ. ಜನರೇ ಅವನಿಗೆ ಸಹಾಯಕರಾಗಿ, ಮರಾಠಾ ಸೈನಿಕರನ್ನು ತಮ್ಮಲ್ಲಿಯ ಠಾಣ್ಯಗಳಿಂದ ಓಡಿಸುತ್ತ ಬರುತ್ತಿದ್ದರು. ಲಾವಣಿಕಾರನು ಬ್ರಿಟಿಶ್ ಸೈನ್ಯಗಳು ಹೇಗೆ ವ್ಯವಸ್ಥೆಯಿಂದ ಯುದ್ಧ ಮಾಡುತ್ತಿದ್ದವೆಂಬುದನ್ನು ಬಹು ಚನ್ನಾಗಿ ವಿವರಿಸಿದ್ದಾನೆ.

ಬ್ರಿಟಿಶರ ಸೈನ್ಯದಲ್ಲಿ ಕೆಲವು ದಂಡಿನ ಅಧಿಕಾರಿಗಳ ಹೆಸರುಗಳು ಈ ಲಾವಣಿಯಲ್ಲಿ ಬಂದಿರುತ್ತವೆ. ಅವರು ಚಾಪ್ಲಿನ, ನೆಸ್ಬಿಟ್, ಥ್ಯಾಕರೆ ಮೊದಲಾದವರು ಇದ್ದಾರೆ. ಇವರೆಲ್ಲರೂ ಮುಂದೆ ಧಾರವಾಡದ ಕಲೆಕ್ಟರರಾದರು. ಕಿತ್ತೂರಿನಲ್ಲಿ ಚನ್ನಮ್ಮನು ದಂಗೆಯನ್ನು ಎಬ್ಬಿಸಿದಾಗ ಧಾರವಾಡ ಕಲೆಕ್ಟರನಾಗಿದ್ದ ಥ್ಯಾಕರೆಯು ಇಲ್ಲಿ ಉಲ್ಲೇಖಿಸಲ್ಪಟ್ಟಿದ್ದಾನೆ. ಮೊದಲನೆಯ ಕಲೆಕ್ಟರನಾದ ಥಾಮಸ ಮನ್ರೋ ಈತನ ಹೆಸರೂ ಇದರಲ್ಲಿ ಬಂದಿದೆ. ಮಲಕಣ ಎಂದರೆ ಜಾನ ಮಾಲ್ಕಮನು. ಈತನೇ ಬಾಜೀರಾಯನನ್ನು ಬೆನ್ನಟ್ಟಿ ಸೆರೆ ಹಿಡಿದನು.

ಬ್ರಿಟಿಶರು ಉತ್ತರ ಕರ್ನಾಟಕವನ್ನು ಕೈವಶಮಾಡಿಕೊಂಡ ಬಳಿಕ ಅಲ್ಲಿ ಹೇಗೆ ಕಚೇರಿಯ ಕೆಲಸಗಳು ನಡಿಯುತ್ತಿದ್ದವೆಂಬುದನ್ನು ಲಾವಣೀಕಾರನು ಬಹು ಸ್ವಾರಸ್ಯವಾಗಿ ವರ್ಣಿಸಿದ್ದಾನೆ.

ಈ ಲಾವಣಿಯಲ್ಲಿ ಪೇಶ್ವೆ ಮತ್ತು ಬ್ರಿಟಿಶರ ಆಡಳಿತೆಗಳ ವಿಷಯವಾಗಿ ಆಗಿನ ಜನರಲ್ಲಿದ್ದ ಅಭಿಪ್ರಾಯಗಳು ಬಹಳ ಸ್ಪಷ್ಟ ರೀತಿಯಿಂದ ವ್ಯಕ್ತಮಾಡಲ್ಪಟ್ಟಿವೆ. ಈ ಲಾವಣಿಯ ಮಹತ್ವವು ಇದರಲ್ಲಿಯೇ ಇದೆ.

## ದಂಡಕ.

ದೊರೆತಾನ ಒಳ್ಳಿತು । ಸರಕಾರ ಕಂಪಣಿಯು ಇರಬೇಕು ಸರಿ। ಇಂಥ ಧರ್ಮದ ದರಬಾರ ।

ಕರ್ಮಾಧಿಕಾರಿಗಳ ಗರ್ವವನು ತಾ ಮುರಿದು । ಉರ್ವಿಯೊಳು ವೈಕುಂಠನ ತೆರನಂತೆ ಅದು ತೊರ್ಪುದೆಂದೊರೆಯಲ್ಕೆ ಅಸಾಧ್ಯ !

ಕಿರಿಯರಿಗೆ ಕಿಂಕರನು ಗುರುಗಳಿಗೆರಗಿ । ನಾ ಹಿರಿಯರಿಗೆ ನಮಿಸಿ ವಿರಚಿಸಿದೆ ವಿಸ್ತರಿಸಿ । ತಪ್ಪಿದ್ದರೆ ಕ್ಷಮಿಸಿ । ತುಪ್ಪದೊಳಗಿನ ಕಪ್ಪ ಒಪ್ಪದಿಂ ತೆಗೆವಂತೆ ತಪ್ಪನಾರಿಸಿ ತಿದ್ದಿ ।

ದೇಶದೊಳು ಪ್ರಖ್ಯಾತ । ದೋಷಮಾಡಿದ ವಿಪರೀತ । ಬಾಜಿರಾಯ ರಘುನಾಥ । ರಾಜ್ಯದಪ್ಪಿದನಾತ । ರಾಜಧಾನಿಯ ಬಿಟ್ಟು । ಪ್ರಜೆಗಳಿಗೆ ಭಯವಿಟ್ಟು । ಪರಸತಿಗೆ ಮನಗೊಟ್ಟು । ಚೆಲುವ ಸತಿಯರನು । ಜುಲುಮೆಯಿಂದ ಹಿಡತರಿಸಿ । ಬಲು ಭಂಗವಂ ಬಡಿಸಿ । ಮರಿಯಾದೆಯು ಳ್ಳಂಥ ಮಾನಿನಿಯರಾಕ್ಷಣದಿ । ಪ್ರಾಣತ್ಯಾಗವ ಮಾಡಲಿನಿತಲ್ಲದವನಿಯೊಳು ಬಲು ದ್ರೋಹವಂ ಮಾಡೆ ॥

ಭೂದೇವಿ ಬೇಸತ್ತು ಭುಜಗಶಯನಿಗೆ ಪೇಳಲಜಪಿತನು। ಆ ಕ್ಷಣದಿ ಆಲೋಚನೆಯ ಮಾಡಿ ತ್ಯಜಿಸಬೇಕಿವನಮಲ ಪುಣ್ಯ ತೀರಿತು । ಮುಂದೆ ಉಣ್ಣಲಿವ ಕರಕಷ್ಟ । ಹುಣ್ಣಿಮೆಯ ಕಳೆದುಳಿದ ಶಶಿಯಂತೆ ಇರಲಿ । ಎಂದೊಸುಧೆಯೊಳು ವಿಷ್ಣು ತಾನುದಸಿದನೋ । ಬಹು ಧನ್ಯನಾಗಿವರಲ್ಲಿ ಇಂಗ್ರಜರೆಂದೆನಿಸಿ । ಮಾರಜನಕನು ಕ್ಷೀರವಾರುಧಿಯ ತಾ ಬಿಟ್ಟು ॥

ಪುಣೆಯಕ್ಕೆ ಫೇರಿಸಿತು ಮುತ್ತಿಗೆಯು । ನೂರಾರು ಲಕ್ಷ ಸಾವಿರ ಸಂಖ್ಯೆಯಾಗಿ ಒಂದೇ ರೂಪು ಬೇರೆ ಹೆಸರನು ಮತ್ತೆ ಸಾರುವೆನು । ಆ ಜಾನ ಮಂಡ್ರೋ, ಅಂಡ್ರೆಸ ಚಾಪ್ಲಿನ, ಕ್ಯಾಪೆಟ ಹ್ಯಾರಿಸನ್ನ,

ಕ್ಯಾಪೆಟ ಪಿಲಿಸನ್ನ, ನೆಸಬಿಟ್ಟ, ಮಲಕಣ, ಯುಲಿಯಾಟ, ಯುಂಗ, ಬೆಬ್ಬರ, ಬುರಿನ, ಟಾಕರೀನ ಸಾಹೇಬರಿಂತಾನೇಕ ಸರದಾರರೇಕಾಗಿ ಪುಣೆಯುಕ್ಕೆ ಹಾಕಿದರು ಮುತ್ತಿಗೆಯು. ॥

ಹತ್ತಿ ಬತ್ತಲ ಹಯುವ । ಎತ್ತಿ ಹಿಡಿದಾಯುಧವ । ಒತ್ತಿ ಬಹ ತೋಫುಗಳ । ಸುತ್ತಲೆ ಚಟಿದಾರ । ಹತ್ತೊಂದು ಮಂದಿಯೊಳು ಮತ್ತೊಬ್ಬ ದಫೇದಾರ । ಬಿತ್ತರದಿ ಲೈನಗಟ್ಟಿ । ಗೊತ್ತಿಲಿ ಬಾರಿಸುವ । ತಂಬೂದ ಲಯುದೊಳಗೆ । ಒತ್ತಿ ಊದುವ ಕೊಳಲು ಕಹಳೆ । ಹಂಚಿನ ಹಲಗಿ । ಸ್ವರದಿಂದ ಪಾಡುತ್ತ । ಸರಸರದು ಕೂಡುತ್ತ । ಬುರುಜುಗಳ ಹೂಡುತ್ತ । ಕವಾತಗಳ ಮಾಡಿ । ತೋಫುಗಳ ತಂದ್ಹೂಡಿ । ಮದ್ದಿನಾ ಕೊಲೆಮಾಡಿ । ಬದ್ಧ ಅರಿಭಟ ಬಲವ । ಸದ್ದಿಲ್ಲದೋಡಿಸುತ । ಏಣಿ ಗಳ ಹೂಡಿಸುತ । ಹಲ್ಲಾಯು ಮಾಡಿಸುತ । ಸಲ್ಲಾಯುದಿಂದಿಳಿಸಿ । ಕಿಲ್ಲೆ ಗಳ ತಕ್ಕೊಂಡು । ಬಲ್ಲಿದರೆನಿಸಿ । ಬಯುಲ ಭಂಜನೆ ತೋರಿ । ಕೌಲು ಕರಾರು ಮಾಡಿ । ನಡಿಸುವದ ಜನ ನೋಡಿ ॥

ತಮ್ಮೊಳಗೆ ಮಾತಾಡಿ । ಭಡಭಡನೆ ಠಾಣೆಗಳ ಗಡಗಡಂಗಳ ಬಿಟ್ಟು । ನಡೆನಡೆದು ತಾವು ಬಂದು । ಕೊಡುವೆವು ಕೌಲೆಂದು । ಕರೆದೊಯ್ಯಲಾಕ್ಷಣದಿ । ಖಾಸಸ್ವಾರಿಯು ಬಿಡಿಸಿ । ನಿಶಾನಿಗಳ ನಿಲಿಸಿ । ಭಾಷೆ ಭರವಸೆ ಕೊಡಿಸಿ । ದೇಶ ದೇಶಗಳೆಲ್ಲ ಕೈವಶವಾದ ಬಳಿಕ ॥

ಬಾಜಿರಾವಜಿಯು ಕರಿಸಿ ಫೌಜುಪಹರಿವ ಕೊಡಿಸಿ । ಧರ್ಮ ಸರಿದುದು ನಿನ್ನ ಕರ್ಮ ಹೆಚ್ಚಿರುವದು । ನಿರ್ಮಳ ಮನಸಿನಲ್ಲಿ ಬ್ರಹ್ಮಾವರ್ತದಿ ಕುಳಿತು । ಬೊಮ್ಮನ ಪಿತ ಹರಿಯು ಸುಮ್ಮನೆ ಧ್ಯಾನಿಸುತ। ಕರ್ಮಜಪವ ಮಾಡೆಂದು । ಕಾಶೀಯಾತ್ರೆಗೆ ಕಳಿಸಿ । ಶಾಸನವ ನೆಲೆಗೊಳಿಸಲೇಸೇಸು ಸುಭೆಗಳನು ಸ್ಥಾಪಿಸಿದರೆಂತೆನಲು ॥

ಸುಭೆಗಧಿಕ ಸುಭೆದಾರ ಸಮುನಿಸ ಸಿರಸ್ತಾರ । ತರ್ವಾಯು ಪೇಷ್ಕಾರ ಬರಿವಂತ ಗುಮಾಸ್ತರು ಬೇರ್ಮತ್ತೆ ಮುನಿಶಿ ರಿಪೂಟ ಸಾರಾಫ ಸಮತ್ತಿಂಗೆ ಜಿಲ್ಲೆದಾರ । ಕ್ರಮದಿಂದ ಪೆಸರಿಟ್ಟೆ ತಾಲೂಕ ಹತ್ತೆಂಟು ಮಾಡಿಯಾಳ್ವ ಸರ್ಲಾಟ । ಸಬ್ಬತುಕಡಿಯೊಳಗೊಬ್ಬ ಸರದಾರನೇ ಇದ್ದು । ಕಾರ್ಭಾರ ನಿರ್ವಹಿಪ ವಿಸ್ತಾರ ಮಾಡಿ ಪೇಳ್ವೆ ಬಂಗಲೆಯ ಶೃಂಗಾರ ।

ತಂಗಾಳಿ ಬರುವಂತೆ ತೆಗಿದಿದ್ದ ಖಿಡಿಕಿಗಳು। ಬಿಗಿದಿದ್ದ ಮಡಿಕೆಗಳು। ಕನ್ನಡಿಯು ಬೆಳಕಿನೊಳು ಥಳಥಳನೆ ಹೊಳೆವಂಥ ಅಚ್ಚಗಚ್ಚಿನ ಭಿತ್ತಿ। ಹೊಚ್ಚಿರುವ ಹಂಚಿನ। ಕಚ್ಚೇರಿಯು ಮಧ್ಯದಲಿ। ಅಚ್ಯುತನ ತೆರನಾಗ ಕುಳಿತಿರುವ ಸಮಯದಲಿ।

ಬರಲೊಬ್ಬ ವಕೀಲ್ ಪರಾಕು ಹೇಳುವರು। ಸಾಹೇಬ ಮೆಹರ್ಬಾನ ಗರೀಬ ಪರವರ ಸಲ್ಲಾ ... ಸಲ್ಲಾಮು। ಇಂತೆಂದು ಹೊತ್ತಿರುವ ಚಿತ್ತದವರಾರ್ಜುವಿಯು ಚಿತ್ತೈಸುವನಿತರೊಳ್

ಭರದಿಂದ ಮುನಿಸಿಗಳು। ಕರದೊಳಗೆ ಕಾಗದವ ಥರಥರದಿ ಹಿಡಕೊಂಡು ಅರ್ಜ ಮಾಡುವರಿಂತು ಖಾವಂದ್ಕಿ ಅರ್ಜಿ। ತಾಲೂಕ ಮಿರ್ಜಿ। ಕೃಷ್ಣಾ ಬನಾಜಿ। ದೇಶಮುಖ ವೃತ್ತಿ। ವತನ ಹೈ ಸುಜಪ್ತಿ। ಕರ್ನಾ ದರ್ಯಾಪ್ತಿ। ಖತ್ತ ... ಕರ ದೀಯ। ಕೂಚ ದಿಖತ ನೈ। ಆಯೆ ಬಹುತ ರೋಜಸಿ। ಹೋಯ್ ಮರ್ಘೋ ಬಾಪ ಮಾಯೆ। ಐಸಾ ಅರ್ಜ ಪೂಚ್ಛೆ ಕರ ಅಚ್ಛಾ ಕೆಂ ನೈ ಹೋತೀ।...... ಹಮೆ ಖುದ್ದ ಆತಾ ಕಹತ ಕರ ದೇತಿ। ಎಂದ್ಹೇಳಿ ಕಳುಹಲು॥

ಕಳವು ಖೂನಿಯು ಜನರ ನೇಣ್ಗಳಿಂ ತೊಳ್ಗಟ್ಟಿ ಆಳ್ಗಳು ತರೆ। ನೋಡಿ ಹೇಳ್ ಖರೆಯು ಮಾಡಿದ್ದ। ಖೂಳ್ ಮುಂಡೆ ಮಗನೆನಲು ಗದ್ಗದನೆ ನಡುಗುತ್ತ। ಹೃದಯ ತಲ್ಲಣಿಸುತ್ತ ಹೆದರಿ ಹೌದೆಂದೆನಲು। ಬುಕ್ಕದೊಳಗಿನ ನೀತಿ ಮಿಕ್ಕ ಪಂಡಿತ ಶಾಸ್ತ್ರ ತಕ್ಕಷ್ಟು ಪೇಳುವೆನು॥

ಕೊಂದವಗೆ ಗಲ್ಲು ಕಳವ ತಂದವಗೆ ಕಾಲ್‌ಬೇಡಿ। ಎಂದು ಬರೆದಿಹ ನೀತಿಶಾಸ್ತ್ರಗಳನೋದಿಸುತ। ದೋಷರುಜು ಮಾಡಿಸುತ ಬೇಡಿಗಳ ಜೋಡಿಸುತ। ಪೇಟಿಗವನೆಳೆದೊಯ್ದು। ತಿವಟಣಿಯೊಳು ಪೊಗಿಸಿ। ನೀಟು ಸುಣ್ಣವ ಬರೆದು। ಕೊಂಟಿ ಮಹಸೂಲ ಮಾಡಿ। ಪಾಪಿಸರ ಪಾಪವನು ಪರಿಹರಿಸುತ ಲಿತ್ತ

ಈರ್ವರು ದಿವಾನರು ಸಾರ್ವಭೌಮಿಕರಾಗಿ ಸೂರ್ಯ ಚಂದ್ರಮನಂತೆ ತೋರ್ಪರಾ। ಜನದೊಳಗೆ ಧನಿಗೈದು ಮಾತಾಡಿ। ಘನರಭಸಮಂ ಮಾಡಿ। ಕರಣಿಕರ ಕರೆದಾಗ ಬರಿಯರ್ಕೈ ಲೆಕ್ಕವನು। ದೊರೆ ಕೋಪ ಹೆಚ್ಚಾಯಿತು। ಬರಲಿ ಇರಸಾಲ್ ಬೇಗ ಸಾಗುವಳಿ ಚಿಠ್ಠಾ। ಹಾಗು

ಕುಳವಾರ ತಖ್ತೆ + + ಅಜಮಾಸಿ ತರಮು ಸರತರಮು ದೀವನ ಲೆಖ್ಖ। ನೀಟಾಗಿ ಗೆರೆಕೊಯ್ದು ಕಾಸಿಪಟದಂದದಲಿ ಹಾಸಿ। ಸದರಿನ ತಂಬೆಕ ಸುರುವಿ। ಬಿಡದೆ ಬೇರೀಜು ಮಾಡಿದ ಬಳಿಕ। ಬಂದಿರೌ ಜಮಾಬಂದಿ ಗೆಂದು ಸರ್ವರ ಕರಸಿ ಬರೆಪ ತಾರೀಫವಿದು.

ನಾದಾರ ಕಮ್ಮಿ ನಾಪೀಕ ಕಮ್ಮಿ ದಿನಕಷ್ಟ ಕಮ್ಮಿ ಜನಲಯ ಕಮ್ಮಿ ಪಡಬಾಬ ಕಮ್ಮಿ ಫಸಲ್ ನೋಡಿ ಕಮ್ಮಿ ಕುಳವರ್ಗ ಕಮ್ಮಿ ತರಮು ಹೆಚ್ಚು ಕಮ್ಮಿ ತಕರಾರು ಕಮ್ಮಿ ತರತರದಿ ಕಮ್ಮಿಗಳ ಬರೆ ವೃತ್ತ ಸೂಟೆಂದು ಹತ್ತುಕೆರಡರ ತೆರಿಗೆ ಸತ್ಯದಿಂದಲಿ ಮಾಡಿ ಒತ್ತಿ ಕೂಗು ವರಾಗ ಪಟಗಳ ತಕ್ಕೊಳ್ಳಿ ಪಾಚ್ಛಾ ರೈತರು ನೀವು ಇಷ್ಟು ತೆರಿಗಿಯ ಹೊತರ್ಜ ಕೊಟ್ಟೀರೊಂದು ದವ್ಮಡಿಯ .

ಪಟ್ಟೆ ಬಿಟ್ಟೆಗಳಿಲ್ಲ ತಳ್ಳಿ ತಗಾದಿಲ್ಲ। ಗುಲ್ಲು ಗೂಳೆಗಳಿಲ್ಲ ಬೆಳ್ಳಿ ಬಂಗಾರವೆಲ್ಲ। ಬಯಲಿಗ್ಗರವಿದರೇನೂ + + + ಇಳೆಯೊಳುದ್ದಂಡ। ಪುಂಡ ಪ್ರಚಂಡರು ಬಂಡಾಯುಗಳ ಮಾಡೆ। ದಂಡು ಕೂಡಿಸಿ ಬೇಗ ದಂಡಣೆಗಳ ಕೊಂಡು। ಬಂಡಾಯುಗಳ ನಿಲಿಸಿ ಮಂಡಲವ ಪಾಲಿಸುವ ಸರಕಾರ ಭಂದಾ । ವೈಭವದಿ ಇಂದ್ರಾ । ಸತ್ಯಹ್ಹರಿಶ್ಚಂದ್ರಾ । ನಂತಿರುವರಹು ದೆಂದು ಪೃಥ್ವಿಯೊಳು ಕುತರ್ಜಕೋಟಿಯ ಕತರ್ಜ। ಕಲ್ಮೇಶ್ವರನ ಅರ್ಥಿ ಕುವರನು ಕೃಷ್ಣ ವಿವರಿಸಿದ ದಂಡಕವು ಜಯ ಜಯಾಸ್ತು ಜಯಃ.

# ಸಂಗೀತ.

(ಸಂಗೀತ ನಿರ್ದೇಶಕಃ — ಗಾಯನಕಲಾ ಕೋವಿದ ಶ್ರೀ. ಜಿ. ಎಸ್. ಜ್ಯುಕ್ತಿಮಠ.)

—:೦:—

ಜಗತ್ತಿನಲ್ಲಿ ಪ್ರತಿಯೊಂದು ಪ್ರಾಣಿಗೆ ಆನಂದವು ಬೇಕೇಬೇಕು. ಅನೇಕ ಕಷ್ಟಗಳನ್ನು ಜಯಿಸಿ ಅಪರಿಮಿತ ಆನಂದದಲ್ಲಿ ವ್ಯೈಮರೆತು ದುಃಖದ ಅಂಶವೂ ಕೂಡ ಸುಳಿಯದಿರುವ ಸ್ಥಿತಿಯು ಒದಗಬೇಕಾದರೆ ಗಾಯನಹೊರ್ತಾಗಿ ಬೇರೆ ಯಾವದರಿಂದಲೂ ಒದಗುವದಿಲ್ಲ. ಅದಕ್ಕಾಗಿ ಆರ್ಯರು "ಸದ್ಯಃ ಫಲಾನಿ ಗೀತಃ" ಎಂಬಂತೆ ಸಂಗೀತವನ್ನು ಕೇಳಿದ ಮಾತ್ರಕ್ಕೆ ಫಲಪ್ರಾಪ್ತಿಯಾಗುತ್ತದೆಂದು ಹೇಳಿರುವರು. ಸಂಗೀತವೆಂದರೇನು? "ಗೀತಂವಾದ್ಯಂ ನರ್ತನಂ ಚಿತ್ರಂ ಸಂಗೀತಮುಚ್ಯತೆ". ಗೀತ ಎಂದರೆ ಹಾಡುವದು, ವಾದ್ಯ ಅಂದರೆ ವಾದ್ಯಗಳನ್ನು ಬಾರಿಸುವದು, ನರ್ತನವೆಂದರೆ ಕುಣಿಯುವದು, ಇವುಗಳಿಂದ ಕೂಡಿದ ಕಲೆಗೆ ಸಂಗೀತಕಲೆಯೆಂದು ಹೆಸರು. ಇಂಥ ಸಂಗೀತವನ್ನು ಕಲಿಯಬೇಕಾದರೆ ಅದರಲ್ಲಿರತಕ್ಕ ಮುಖ್ಯವಾದ ಸಂಗತಿಗಳನ್ನು ತಿಳಿಯಬೇಕು. ಸಂಗೀತದಲ್ಲಿ 'ಶೃತಿ ಮಾತಾ, ಲಯ ಪಿತಾ' ಸ್ವರವೇ ತಾಯಿಯು. ತಾಳವೇ ತಂದೆಯು. ಕಾರಣ ಇವೇ ಮುಖ್ಯವಾದವುಗಳು. ಇವುಗಳ ಜ್ಞಾನವು ಮೊದಲು ಬೇಕೇ ಬೇಕು. ತಾಳವನ್ನು ಕಲಿಯಬೇಕಾದರೆ ಒಂದೇ ಸಮನಾಗಿ ಪೆಟ್ಟುಗಳನ್ನು ಹಾಕಲಿಕ್ಕೆ ಅದರ ಕೂಡ ಸ. ರಿ. ಗ. ಮ. ಪ. ಧ. ನಿ. ಸ. ಹೀಗೆ ಸ್ವರ ಕೂಡಿಸಿ ಅನ್ನುವದು ಸ್ವಲ್ಪ ಕಠಿಣವಾದ ಪಕ್ಷದಲ್ಲಿ ೧. ೨. ೩. ೪. ೫. ೬. ೭. ೮. ಹೀಗೆ ಲೇಝೀಮ ಮಾಡುವ ಕಾಲಕ್ಕೆ ಹೇಗೆ ಅಂಕಿಗಳನ್ನು ಎಣಿಸುವರೋ ಹಾಗೆಯೇ ಎಣಿಸುತ್ತ ೧ ಪೆಟ್ಟಿನಿಂದ ೨ ನೇ ಪೆಟ್ಟಿನ ವರೆಗೆ ಎಷ್ಟು ವೇಳೆಯು ಹತ್ತುವದೋ ಅಷ್ಟೇ ವೇಳೆಯನ್ನು ಮುಂದಿನ ಪೆಟ್ಟಿಗೆ ಉಪಯೋಗಿಸತಕ್ಕದ್ದು.

### ಆರೋಹಣ ಅವರೋಹಣವೆಂದರೇನು?

ಆರೋಹಣದ ಮುಖ್ಯ ಅರ್ಥವು ಹತ್ತುವದು. ಅವರೋಹಣವೆಂದರೆ ಇಳಿಯುವದು. ಹಾರ್ಮೋನಿಯಮ್‌ದಲ್ಲಿ ಎಡದಿಂದ ಬಲಕ್ಕೆ

ಹೋಗುವದು ಆರೋಹ. ಬಲದಿಂದ ಎಡಕ್ಕೆ ಬರುವದು ಅವರೋಹ. ಸಪ್ತಸ್ವರ (ನಾದ) ಗಳೆಂದರೆ ಷಡ್ಜ (ಸ) ಋಷಭ (ರಿ) ಗಂಧಾರ (ಗ) ಮಧ್ಯಮ (ಮ) ಪಂಚಮ (ಪ) ಧೈವತ (ಧ) ನಿಷಾಧ (ನಿ) ಹೀಗೆ ಏಳು ಸ್ವರಗಳಿವೆ. ಅನುಕ್ರಮವಾಗಿ ಸರಿಗಮಪಧನಿ ಎಂದು ಸಂಜ್ಞೆಯುಂಟು.

ಇವುಗಳಲ್ಲಿ ಚಲಸ್ವರ ಅಚಲ ಸ್ವರಗಳುಂಟು. ಚಲಸ್ವರವೆಂದರೆ ಚಲಿಸುವದು. ಭೇದವನ್ನು ಹೊಂದುವದು ಅರ್ಥಾತ್ ಕೋಮಲ ತೀವ್ರವನ್ನು ಅನ್ವಯಿಸುವ ಸ್ವರಕ್ಕೆ ಚಲಸ್ವರವೆನ್ನುತ್ತಾರೆ. ಇನ್ನು ಅಚಲಸ್ವರ ಚಲಿಸದೆ ಇರುವದು ಅಚಲಸ್ವರ. ಉದಾಹರಣೆಃ—ಕಣ ದೊಳಗೆ ಹಂತಿಯನ್ನು ಹೂಡಬೇಕಾದರೆ ಮಧ್ಯದಲ್ಲಿರುವ ಮೇಟಿಯು ಅವಶ್ಯವು ಹೇಗೋ ಮತ್ತು ಎತ್ತುಗಳಿಂದ ತಿರುಗಿದರೂ ಕೂಡ ಆ ಮೇಟಿಯು ಮಾತ್ರ ತಿರುಗುವದಿಲ್ಲ ಹೇಗೋ, ಹಾಗೆಯೇ ಅಚಲಸ್ವರವು ಪ್ರತಿಯೊಂದು ರಾಗದ ತಳಹದಿ ಮತ್ತು ಕೋಮಲ ತೀವ್ರ ಹೊಂದುವದಿಲ್ಲ.

ಷಡ್ಜ (ಸ) ಮತ್ತು ಪಂಚಮ (ಪ) ಇವು ೨ ಸ್ವರಗಳು ಅಚಲಸ್ವರ ಗಳು. ಇನ್ನುಳಿದ ಐದು ಸ್ವರಗಳು ರಿ. ಗ. ಮ. ಧ. ನಿ. ಇವು ಚಲಸ್ವರ ಗಳು. ಅಂದರೆ ೫ ಸ್ವರಗಳಲ್ಲಿ ೫ ಕೋಮಲ ಸ್ವರಗಳು ೫ ತೀವ್ರ ಸ್ವರ ೨ ಅಚಲ ಸ್ವರಗಳು ಕೂಡಿ ಒಟ್ಟು ೧೨ ಸ್ವರಗಳಾಗುವವು. ಇವೇ ಸ್ವರ ಗಳಿಂದ ಬೇರೆ ಬೇರೆ ಜಾತಿ (ವರ್ಗ) ಗಳ ರಾಗಗಳಾಗಿವೆ. ಕನ್ನಡದಲ್ಲಿ ಎಷ್ಟೋ ಕಥೆ ಕಾದಂಬರಿ ಗದ್ಯ ಪದ್ಯಗಳನ್ನು ರಚಿಸಿದರೂ ಕೂಡಾ ೫೩ ವರ್ಣಗಳಲ್ಲಿಯೇ ಹೇಗೆ ರಚಿಸುವರೋ ಹಾಗೆಯೇ ಸಂಗೀತದಲ್ಲಿಯೂ ಕೂಡ ಅವೇ ೧೨ ಸ್ವರಗಳಲ್ಲಿಯೇ.

ರಾಗಗಳಲ್ಲಿ ಏಳು ವರ್ಗ(ಜಾತಿ)ಗಳುಂಟು. ೧ ಔಢವ. ೨ ಷಾಢವ ೩ ಸಂಪೂರ್ಣ ೪ ಔಢವ ಸಂಪೂರ್ಣ. ೫ ಷಾಢವ ಸಂಪೂರ್ಣ. ೬ ವಕ್ರ. ೭ ಮಿಶ್ರ ಹೀಗೆ ೭ ವರ್ಗಗಳುಂಟು. ರಾಗದ ಆರೋಹ ಅವರೋಹದಲ್ಲಿ ಐದು ಸ್ವರಗಳು ಇದ್ದರೆ ಔಢವ. ೬ ಸ್ವರಗಳಿದ್ದರೆ. ಷಾಢವ. ೭ ಸ್ವರಗಳು ಇದ್ದರೆ ಸಂಪೂರ್ಣ. ಆರೋಹದಲ್ಲಿ ಐದು ಸ್ವರಗಳು. ಅವರೋಹದಲ್ಲಿ ಸಪ್ತಸ್ವರಗಳಿದ್ದರೆ, ಔಢವ ಸಂಪೂರ್ಣ. ಆರೋಹದಲ್ಲಿ ೬ ಸ್ವರಗಳು, ಅವರೋಹದಲ್ಲಿ ೭ ಸ್ವರಗಳು ಇದ್ದರೆ ಷಾಢವ ಸಂಪೂರ್ಣ. ಆರೋಹ ಅವರೋಹದಲ್ಲಿ ಹಿಂದುಮುಂದಾಗಿ

ಅನ್ನುವದರಿಂದ ವಕ್ರ. ಒಂದು ರಾಗದಲ್ಲಿ ಮತ್ತೊಂದು ರಾಗ ಕೂಡಿಸಿದರೆ ಮಿಶ್ರರಾಗವಾಗುತ್ತದೆ.

ಹಾರ್ಮೋನಿಯಮ್ ಸಂಬಂಧ ಕೋಮಲ. ತೀವ್ರ ಯಾವತ್ತೂ ಚಿನ್ಹಗಳು.

ಸ ರಿ (ಕೆಳಗೆ ಚುಕ್ಕೆ) ಈ ರೀತಿ ಯಾವದೇ ಸ್ವರದ ಕೆಳಭಾಗದಲ್ಲಿ ಸಣ್ಣ ಚಿಕ್ಕೆಯಿದ್ದರೆ ಆ ಸ್ವರವು ಮಂದ್ರಸಪ್ತಕದೊಳಗಿನದೆಂದು ತಿಳಿಯುತಕ್ಕದ್ದು.

ಸ ರಿ (ಮೇಲೆ ಚುಕ್ಕೆ) ಈ ರೀತಿ ಯಾವದೇ ಸ್ವರಗಳಿಗಾಗಲೀ ಚಿಕ್ಕೆಯಿದ್ದರೆ ತಾರ ಸಪ್ತಕದೊಳಗಿನದೆಂದು ತಿಳಿಯುತಕ್ಕದ್ದು.

ऽ ಈ ರೀತಿ ಯಾವದೇ ಸ್ವರದ ಮುಂದಾಗಲೀ ಹಿಂದಾಗಲೀ ಅವಗ್ರಹ ಅಥವಾ ಎಸ್ ಚಿನ್ಹವಿದ್ದರೆ ಸ್ವಲ್ಪ ಎಳೆಯುಬೇಕು.

ಗರಿ ಗಮಗ ಈ ಪ್ರಕಾರ ನೋಟೇಶನ್ನಿನಲ್ಲಿ ಸ್ವರಗಳ ಕೆಳಗೆ ಗೀಟು ಇದ್ದರೆ ಎಷ್ಟು ಸ್ವರ ಕೂಡಿಸಿದ್ದರೂ ಒಂದು ಸ್ವರ ನುಡಿಯುವ ವೇಳೆಯಲ್ಲಿಯೇ ೨ ಸ್ವರದ ಕೆಳಗಿದ್ದರೂ ಅಥವಾ ಮೂರು ಸ್ವರಗಳ ಕೆಳಗೆ ಗೀಟು ಇದ್ದರೂ ಒಂದೇ ಸ್ವರದ ವೇಳೆಯಲ್ಲಿ ಗಣಿಸಬೇಕು.

ಸ.೧ ರಿ.೨ ಗ.೩ ಮ೪ ಹೀಗೆ ಸ್ವರಗಳ ಮೇಲ್ಭಾಗದಲ್ಲಿ ಅಂಕೆಗಳಿದ್ದರೆ ತಾಳದ ಮಾತ್ರೆ ಎಂದು ತಿಳಿಯುಬೇಕು.

o ಈ ರೀತಿ ಚಿನ್ಹವಿದ್ದರೆ ಹುಸಿ ಎಂದು ತಿಳಿಯುಬೇಕು.

— ೧ ಇದು ಪೆಟ್ಟು ಎಂದು ತಿಳಿಯುಬೇಕು.

* ೨ ಇದು ಸಮ್ಮು ಎಂದು ತಿಳಿಯುಬೇಕು.

— ೩ ಇದು ಪೆಟ್ಟು ಎಂದು ತಿಳಿಯುಬೇಕು.

ಈ ಮೇಲಿನ ಮೂರು ಚಿನ್ಹಗಳಲ್ಲಿ — ಈ ಚಿನ್ಹವೂ ಇದ್ದರೂ ಅಥವಾ ೧ ಈ ಅಂಕಿ ಇದ್ದರೂ ಮೊದಲಿನ ಪೆಟ್ಟು ಎಂದು ತಿಳಿಯುಬೇಕು. * ಈ ಚಿನ್ಹ ಮತ್ತು ೨ ಅಂಕಿ ಇದ್ದಲ್ಲಿ ಯಾವದಾದರೂ ಒಂದು ಇದ್ದರೆ ಸಮ್ಮು ಎಂದು ತಿಳಿಯುಬೇಕು.

## ಸಂಗೀತ ವಚನ.

(ರಾಗ ಭೂಪ)

ತಾಳ ತ್ರಿತಾಳ — ಮಾತ್ರಾ ೧೬.

ಈ ರಾಗವು ಕಲ್ಯಾಣ ಥಾಟಿಯೊಳಗಿಂದ ಹುಟ್ಟಿದೆ. ಆರೋಹಣ ದಲ್ಲಿ ಮ. ನಿ. ವರ್ಜ್ಯ. ಎಲ್ಲ ಸ್ವರಗಳು ತೀವ್ರವಿರುತ್ತವೆ.

ಜಾತಿ (ವರ್ಗ) ಔಢವ

ವಾದಿ ಗಂಧಾರ — ಸಂವಾದಿ ಧೈವತ

ಸಮಯ— ರಾತ್ರಿ ೯ ವರೆಗೆ.

ರಾಗದ ಮುಖ್ಯ ಅಂಗ — ಗಪಧಪಗರಿಸ.

ಆರೋಹಣ — ಸರಿಗಪಧಸ̇.

ಅವರೋಹಣ — ಸ̇ಧಪಗರಿಸ.

ಶಾಂತ — ಪ್ರಕೃತಿ ಗಂಭೀರ

೦ ೧ ೨ ೩

೧ ೨ ೩ ೪ | ೧ ೨ ೩ ೪ | ೧ ೨ ೩ ೪ | ೧ ೨ ೩ ೪ |

—ಸ ರಿ ಗರಿ | ಸ ದ ಸ ರಿ | ಗ — ಗ ಪ | ರಿ — ಸ ಸ |

ಽ ನೆ ಲ ವಂ | ದೇ ಽ ಹೊಲ | ಗೇ ಽ ರಿ ಶಿ | ವಾ ಽ ಲ ಯಕೆ |

—ಗ ಗ ಗ ರಿ | ಗ ಪ ಧ ಪ | ಸ̇ — ಧ ಪ | ಗ ರಿ ಸ — |

ಽ ಜ ಲ ವಂ | ದೇ ಽ ಶೌ ಽ | ಚಾ ಽ ಚ ಮ | ನ ಽ ಕೆ ಽ ||ಪ||

ಅಂತರ

—ಗ ಗ ಗ ರಿ | ಗ ಪ ದ ಪ | ಸ̇ — ಸ̇ ಸ̇ | ರಿ̇ ದ ಸ̇ ಸ̇ |

ಽ ಫ ಲ ವಂ | ದೇ ಽ ಷ ಡು | ದ ಽ ರ್ಶ ನ | ಮು ಽ ಕ್ತಿ ಗೆ |

—ದ ದ ದ | ಸ̇ — ರಿ̇ ರಿ̇ | ಸ̇ ರಿ̇ ಗ̇ ರಿ̇ | ಸ̇ — ಧ ಪ |

ಽ ಕು ಲ ವಂ | ದೇ ಽ ತ ನ್ನ | ತಾ ಽ ನ ರಿ | ದಂ ಽ ಗೆ ಽ |

ಗ̇ ರಿ̇ ಸ̇ ದ | ರಿ̇ — ಸ̇ ದ | ಸ̇ — ದ ಪ | ಗ ರಿ ಸ ಸ |

ನಿ ಲ ವಂ ಽ | ದೇ ನ ಽ ಮ್ಮ | ಕೂ ಽ ಡ ಲ | ಸಂ ಗ ನ ಲ್ಲಿ ||೧||

# ಬಸವಣ್ಣ

ಹೊಲೆ ಹೊಲೆಯೆನ್ನುತಲೀ ಭಾರತವ,
ಹೊಲೆತನಕಿಳಿಸಿದರೀ ಜನರು !!
ಹೊಲೆತನ ತುಂಬಿದೆ ಜನಮನವೆಲ್ಲ.
ಹೊಲಸು ನಾರುತಿದೆ ಜೀವನವು !! ॥೧॥

ಧರ್ಮದ ಬಾವುಟ ಕೈಯೊಳು ಹಿಡಿದು,
ಧರ್ಮದ ಕೊಲೆ ಮಾಡುತಲಿಹರು !!
ಜಾತಿ ಭೇದ ಕಿಡಿ ಹೊತ್ತಿಸಿ ಭಾರತ–
–ಸಿರಿಮನೆ ಸುಡುತಲಿ ನಡೆದಿಹರು !! ॥೨॥

ಧನವೇ ಜೀವನ ಗುರಿಯೆಂದರಿದು,
ಧನಿಕರು ಧನಕೆ ದಾಸಾಗಿಹರು.
ಧನಲಕ್ಷ್ಮಿಯ ತಾವೊಲಿಸಲು ಕಟುಕರು
ದೀನ ಜನರ ಬಲಿ ಕೊಡುತಿಹರು !! ॥೩॥

ಕಾಯಕವೆಂಬುದು ಕೀಳಾಯ್ತೆಂದು,
ಸೂಸಿದ ಸಿರಿಹೊಳೆ ಬತ್ತಿಹುದು !!
ಬಡತನ ನರಕದಿ ಬಳಲುವ ಜನರು,
ಬಸವ ನಿನ್ನನೇ ಕೂಗುವರು !! ॥೪॥

— ಬಬಲೇಶ್ವರ ಸಿ. ಸಿದ್ಧವೀರ
ವಿಜಯಪುರ.




ಸಂಪುಟ ೨೦ ]   ಸಪ್ಟಂಬರ ೧೯೪೬.   [ ಸಂಚಿಕೆ ೧೨

## ಕೆಳಗೆ ಕಾಣಿಸಿದ ಗ್ರಂಥಗಳು ಹಿತಚಿಂತಕ ಪ್ರಿಂಟಿಂಗ ಪ್ರೆಸ್ ವಿಜಾಪುರ, ಇಲ್ಲಿ ದೊರೆಯುತ್ತವೆ.

| | | ಬೆಲೆ. |
|---|---|---|
| ೧. | ಹೊಸ ಪದ್ಧತಿಯ ಬಸವೇಶ್ವರ ವಚನಗಳು. | ೨—೦—೦ |
| ೨. | ಮಹಾದೇವಿಯಕ್ಕನ ವಚನಗಳು. | ೦-೧೨—೦ |
| ೩. | ಘನಲಿಂಗನ ವಚನಗಳು. | ೦-೧೨—೦ |
| ೪. | ಭಕ್ತಿಯ ವಚನಗಳು. | ೦-೧೦—೦ |
| ೫. | ಶಿವಶರಣರ ಚರಿತ್ರೆ. ಭಾಗ ೧ | ೧-೧೨—೦ |
| ೬. | ಆದಯ್ಯನ ವಚನಗಳು. | ೦—೮—೦ |
| ೭. | ಮಡಿವಾಳ ಮಾಚಿದೇವನ ವಚನಗಳು. | ೦-೧೨—೦ |

ಗ್ರಂಥಗಳ ಲಿಷ್ಟಿಗೆ ಬರೆಯಿರಿ.—

# ವಿಷಯಾನುಕ್ರಮಣಿಕೆ.

## ಸಪ್ಟಂಬರ.

# ಶಿವಾನುಭವ

| ವರ್ಷ ೨೦ | ಸೆಪ್ಟಂಬರ ೧೯೪೬ | ಸಂಚಿಕೆ ೧೨ |
|---|---|---|

## ಆತ್ಮತತ್ವವೂ ಮತ್ತು ಪ್ರಾಚೀನ ಸಂಸ್ಕೃತಿಯೂ.

(ಲೇಃ- ಶ್ರೀ ಸುಬ್ರಹ್ಮಣ್ಯಂ, ದಾವಣಗೆರೆ.)

ಜಗತ್ತು ಪರಿವರ್ತನಶೀಲವು. ನೂತನ ವಿಚಾರಗಳು, ನೂತನ ಕಲಾಕೌಶಲ್ಯ, ನೂತನ ಆವಿಷ್ಕಾರಗಳು, ಮತ್ತು ನೂತನ ವಿಜ್ಞಾನದ ವಿಕಾಸ, ಇವುಗಳು ಪ್ರತಿದಿನವೂ ನಡೆಯುತ್ತಲೇ ಇವೆ. ಒಂದು ನೂರು ವರ್ಷಗಳ ಕೆಳಗೆ ಇಂದಿನ ವಿಜ್ಞಾನದ ಕಲ್ಪನೆಯೂ ಕೂಡ ಇರಲಿಲ್ಲ. ಇದೇ ರೀತಿ ಭವಿಷ್ಯದಲ್ಲಿ ಉಂಟಾಗಬಹುದಾದ ವಿಜ್ಞಾನದ ಕಲ್ಪನೆಯೂ ಕೂಡ ಈಗ ಸಾಧ್ಯವಿಲ್ಲ. ಇದೇ ರೀತಿಯಲ್ಲಿ ಪ್ರಾಚೀನ ಕಾಲದಲ್ಲಿ ಆಗಿ ಹೋಗಿರುವ ಆಧ್ಯಾತ್ಮಿಕ ವಿಜ್ಞಾನದ ಕಲ್ಪನೆಯನ್ನು ಆಧುನಿಕ ಕಾಲದ ಮನುಷ್ಯರು ಮಾಡಲಸಮರ್ಥರಾಗಿರುವರು. ಆದುದರಿಂದಲೇ ಆಧ್ಯಾತ್ಮಿಕ ವಿಜ್ಞಾನದ ವಿನಹ "ಸತ್ಯವಾವುದು? ಅಸತ್ಯವಾವುದು?" ಇದರ ವಾಸ್ತವಿಕ ಸಂಶೋಧನೆಯು ಅಸಂಭವವೆಂದೇ ತೋರುತ್ತಿದೆ. ಪ್ರಾಚೀನ ಕಾಲದ ವಿಜ್ಞಾನವೇತ್ತರು ಪ್ರಕೃತಿಯ ಪರಮಾಣು—ಪರಮಾಣುವನ್ನು ಸಹ ಶೋಧಿಸಿಬಿಟ್ಟರು. ಆದರೆ ವಿಜ್ಞಾನದ ಪೂರ್ತಿಯಾಗಲಿಲ್ಲ. ಕೊನೆಗೆ ಅವರು ಬಾಹ್ಯ ಶೋಧನೆಯನ್ನು ತ್ಯಜಿಸಿ ಅಂತರಂಗಶೋಧನೆಯನ್ನು ಮಾಡಿ ಆತ್ಮತತ್ವವನ್ನು ಹುಡುಕಿ ತೆಗೆದರು. ಆ ಆತ್ಮತತ್ವವು ಸರ್ವ ಶ್ರೇಷ್ಠವಾದ ತತ್ವ. ಅವರು ಆ ತತ್ವದ ವ್ಯಾಖ್ಯೆ ಮಾಡುತ್ತ ಈ ರೀತಿ ಹೇಳಿದ್ದಾರೆಃ—

ನ ತತ್ರಸೂರ್ಯೋ ಭಾತಿ ನ ಚಂದ್ರ ತಾರಕಂ ।
ನೇಮಾ ವಿದ್ಯುತೇ ಭಾಂತಿ ಕುತೋಽಯಮಗ್ನಿಃ ॥

ತಮೇವ ಭಾಂತಿ ಮನು ಭಾತಿ ಸರ್ವಂ
ತಸ್ಯಭಾಸಾ ಸರ್ವಮಿದಂ ವಿಭಾತಿ ॥
(ಕಠೋ ೨-೨-೧೫)

ನಿತ್ಯೋಽನಿತ್ಯಾನಾಂ ಚೇತನಶ್ಚೇತನಾನಾ-
ಮೇಕೋ ಬಹೂನಾಂಯೋ ವಿದಧಾತಿ ಕಾಮಾನ್ ।
ತಮಾತ್ಮಸ್ಥಂ ಯೇಽನು ಪಶ್ಯಂತಿ ಧೀರಾ-
ಸ್ತೇಷಾಂ ಶಾಂತಿಃ ಶಾಶ್ವತೀ ನೇತರೇಷಾಂ॥
(ಕಠೋ ೨-೨-೧೩)

ಪ್ರಪಂಚದ ಪರಿವರ್ತನಶೀಲವಾದ ಸಮಸ್ತ ಪದಾರ್ಥಗಳಿಗಿಂತಲೂ ಅಪರಿವರ್ತನಶೀಲವೂ, ಜ್ಞಾನಿಗಳಲ್ಲಿ ಸರ್ವಶ್ರೇಷ್ಠವಾದ ಜ್ಞಾನಿಯೂ ಮತ್ತು ಒಂದೇ ಆಗಿದ್ದರೂ ಕೂಡ ಸಮಸ್ತವಿಶ್ವದ ಕಾಮನೆಗಳನ್ನು ಪೂರ್ಣ ಮಾಡತಕ್ಕದ್ದೂ ಆದ ತಮ್ಮಲ್ಲೇ ಇರುವ ಆತ್ಮತತ್ವವನ್ನು ಅವರು ಹುಡುಕಿ ತೆಗೆದರು.

ಈ ಆತ್ಮವೇ ಈಶ್ವರ, ಬ್ರಹ್ಮ ಎಂಬ ಹೆಸರಿನಿಂದ ಪ್ರಖ್ಯಾತ ವಾಗಿದ್ದು, ಪ್ರತಿ ಪ್ರಾಣಿಯ ಹೃದಯದಲ್ಲಿಯೂ ಇದರ ನಿವಾಸವಿದೆ. ಅದನ್ನರಸಲು ಬೇರೆ ಎಲ್ಲಿಯೂ ಹೋಗಬೇಕಾಗಿಲ್ಲ. ವಾಸನಾರಹಿತ ರಾದೆವೆಂದರೆ, ನಮ್ಮ ಹೃದಯಮಂದಿರದಲ್ಲಿಯೇ ಇದರ ದರ್ಶನವಾ ಗುತ್ತದೆ.

ಸಮಸ್ತ ವಾಸನೆಗಳೂ ನಾಶಹೊಂದಿದ ನಂತರ ಜಗತ್ತಿನ ಎಲ್ಲ ಭೌತಿಕ ಪದಾರ್ಥಗಳೂ ಹೇಯವಾಗಿ ಬಿಡುತ್ತವೆ. ಆದುದರಿಂದಲೇ ಭಾರತದ ಋಷಿಮುನಿಗಳು ಬಾಹ್ಯ ವಸ್ತುಗಳನ್ನು ತ್ಯಾಗಮಾಡಿ, ಅರಣ್ಯ ದಲ್ಲಿ ನಿವಾಸಮಾಡುತ್ತ, ಕಂದಮೂಲಗಳನ್ನು ತಿಂದು ಉದರ ಪೋಷಣೆ ಮಾಡಿಕೊಂಡು, ಆತ್ಮದರ್ಶನದ ಮೂಲಕ ಪೂರ್ಣ ಶಾಂತಿಯನ್ನು ಪಡೆ ದಿದ್ದರು. ಪ್ರಾಚೀನ ಕಾಲದಲ್ಲಿ ಈ ಶಾಂತಿನಿಕೇತನ ಆತ್ಮತತ್ವನ್ನು ಹುಡುಕಿ ನಿತ್ಯವೂ ಪೂರ್ಣವೂ ಆದ ಶಾಂತಿಯನ್ನು ಪಡೆಯಬೇಕು ಎಂಬುದೇ ಆದರ್ಶವಾಗಿದ್ದಿತು. ಆದುದರಿಂದಲೇ ಭಾರತದ ಸಾಮ್ರಾ ಟರೂ ಸಹ ಋಷಿಮುನಿಗಳಿಗಾಗಿ ಗದ್ದುಗೆಯನ್ನು ಬಿಟ್ಟು ಕೊಟ್ಟು ಕೆಳಗೆ ನಿಂತು ಅವರ ಚರಣ ಸ್ಪರ್ಶಮಾಡಿ ತಾವು ಕೃತಕೃತ್ಯರಾಗುತ್ತಿದ್ದರು.

ಪ್ರಾಚೀನ ಕಾಲದಲ್ಲಿ ಲೌಕಿಕ ಸಂಪತ್ತಿಗೆ ಯಾವ ಬೆಲೆಯೂ ಇರಲಿಲ್ಲ. ಎಲ್ಲರೂ ಆತ್ಮಶಕ್ತಿಯ ಹಸಿವಿನಿಂದ ಕೂಡಿರುತ್ತಿದ್ದರು. ಆತ್ಮ ತತ್ತ್ವಕ್ಕಾಗಿ ರಾಜ್ಯವನ್ನು ಸಹ ತ್ಯಜಿಸಿ ಭಿಕ್ಷುಕರಾಗಿ ಹೋಗುವುದು ತಮ್ಮ ಸೌಭಾಗ್ಯವೆಂದು ಭಾವಿಸಿದ್ದರು.

ಆಧ್ಯಾತ್ಮಿಕ ಜೀವನವು ಧನ ಸತ್ತೆಯನ್ನವಲಂಬಿಸಿರಲಿಲ್ಲ. ಆದುದ ರಿಂದಲೇ ಕಂದ, ಮೂಲಫಲಗಳನ್ನೇ ಸರ್ವಶ್ರೇಷ್ಠವೆಂದು ಭಾವಿಸಿದ್ದರು. ಇತರ ತೋಟಗಳ ಹಣ್ಣು ಹಂಪಲು, ಸೊಪ್ಪು ಸಹ ತ್ಯಾಜ್ಯವಾಗಿತ್ತು. ಅಥವಾ ತಮ್ಮ ಸರ್ವಸಂಪತ್ತನ್ನೂ ದಾನಮಾಡಿ ಬಡವರು ನೀಡಿದ ಭಿಕ್ಷೆಯಿಂದ ಆತ್ಮತತ್ತ್ವವನ್ನು ಶೋಧಿಸಿ ತೆಗೆಯುತ್ತಿದ್ದರು.

ಭಾರತೀಯ ಸಭ್ಯತೆಯಲ್ಲಿ ಪಶುಪಕ್ಷಿಗಳನ್ನು ಸಹ ತಮ್ಮ ಆತ್ಮ ವೆಂದು ತಿಳಿಯುತ್ತಿದ್ದರು. ಈಗಿನ ಕಾಲದಲ್ಲಾದರೋ ನಾವು ಮನು ಷ್ಯರನ್ನು ಸಹ ನಾವು ನಮ್ಮ ಆತ್ಮವೆಂದು ತಿಳಿಯುತ್ತಿಲ್ಲ. ಮನೆಯಲ್ಲಿ ಐಶ್ವರ್ಯದ ಪ್ರವಾಹವೇ ಬರುತ್ತಿದೆ. ಆದರೆ ನೆರೆಹೊರೆಯವರು ಹಸಿ ವಿನಿಂದ ಸಾಯುತ್ತಿರುವರು. ನೆರೆಹೊರೆಯವರ ಮಾತಿರಲಿ, ಸ್ವಂತ ಸಹೋದರನು ಸತ್ತರೂ ಅವನಿಗೆ ಒಂದು ಹಿಡಿ ಕಾಳನ್ನು ಕೊಡುವಂ ತಿಲ್ಲ. ಧರ್ಮ, ಈಶ್ವರ ಇವೆಲ್ಲವೂ ನಿಮಿತ್ತ ಮಾತ್ರಗಳಾಗಿ ಉಳಿದು ಹೋಗಿವೆ. ಇದೇ ಕಾರಣದಿಂದಲೇ ನಾವು ನಿಂದೆಗೆ ಪಾತ್ರರಾಗಿ, ಎಂದಿಗೂ ಮುರಿಯಲಾಗದಂತಹ ದಾಸ್ಯವೆಂಬ ಸರಪಣಿಯಿಂದ ಬಿಗಿ ಯಲ್ಪಟ್ಟಿದ್ದೇವೆ.

ತಾವು ಹಸಿದಿದ್ದು ಇತರರಿಗೆ ಆಹಾರವನ್ನು ಕೊಡುವುದೇ ಶ್ರೇಷ್ಠ ಕರ್ತವ್ಯ ಎಂದು ಉಪದೇಶ ಮಾಡುತ್ತಿದ್ದ ಆ ಪ್ರಾಚೀನ ಸಂಸ್ಕೃತಿಯು ಎಂತಹ ಶೋಚನೀಯ ಸ್ಥಿತಿಗೆ ಇಳಿದಿದೆ ಎಂದರೆ, ನಿಜವಾದ ಭಗ ವದ್ಭಕ್ತ ಭಿಕ್ಷುವಿಗೂ ರೊಟ್ಟಿಯನ್ನು ಕೊಡುವುದು ಪಾಪವೆಂಬ ಭಾವನೆ ಯುಂಟಾಗಿದೆ.

> ಯಾವದಿಭ್ರಿಯೇತ್ ಜಠರಂ ತಾವತ್ ಸತ್ವಂ ಹಿ ದೇಹಿನಾಂ ।
> ಅಧಿಕಂ ಯೋಽಭಿ ಮನ್ಯೇತ ಸಸ್ತೇನೋ ದಂಡಮರ್ಹತಿ ।
> ಮೃಗೋಷ್ಟ್ರಖರ ಮರ್ಕಾಖು ಸರೀ ಸೃಪ್ಖಗಮಕ್ಷಕಾಃ ।
> ಆತ್ಮನಃ ಪುತ್ರವತ್ ಪಶ್ಯೇತ್ ತೈರೇಷಾಮಂತರಂಕಿಯತ್ ॥
>
> (ಶ್ರೀಮದ್ಭಾಗವತ ೭.೧೪ ೮-೯)

"ಮನುಷ್ಯನ ಸಂಪತ್ತಿಗೆ ಹೊಟ್ಟೆತುಂಬಿಸಿಕೊಳ್ಳುವಷ್ಟು ಮಾತ್ರ ಅಧಿಕಾರ ವಿದೆ. ಅದಕ್ಕಿಂತ ಅಧಿಕವಾದ ಅಧಿಕಾರವನ್ನು ನಡೆಯಿಸುವವನು ಕಳ್ಳ, ಶಿಕ್ಷಾರ್ಹನು. ಮೃಗ, ಒಂಟೆ, ಕತ್ತೆ, ವಾನರ, ಇಲಿ, ಸರ್ಪ ಮುಂತಾದವು, ಪಕ್ಷಿ ಮತ್ತು ನೊಣಗಳನ್ನು ಸಹ ತಮ್ಮ ಮಕ್ಕಳಂತೆ ಕಾಣಬೇಕು. ಏಕೆಂದರೆ ತತ್ವದೃಷ್ಟಿಯಿಂದ ಇವುಗಳಿಗೂ ಈ ಪ್ರಾಣಿಗಳಿಗೂ ಯಾವ ಅಂತರವೂ ಇಲ್ಲ.

ಈ ರೀತಿ ಇತ್ತು ನಮ್ಮ ಆಶ್ಚರ್ಯಜನಕವಾದ ಸಂಸ್ಕೃತಿ! ಈಗಿನ ಕಾಲದಂತೆ ಪಶುಪಕ್ಷಿಗಳನ್ನು ಕೊಂದು ತಿನ್ನುವಂತ ಸಂಸ್ಕೃತಿಯಾಗಿರಲಿಲ್ಲ. ಪಶು-ಪಕ್ಷಿಗಳ ಮಾತಿರಲಿ, ತನ್ನ ಸ್ವಾರ್ಥಕ್ಕಾಗಿ ನಾನಾರೀತಿಯಿಂದ ಮನುಷ್ಯರನ್ನೇ ತಿಂದು ಬಿಡಲು ಹಿಂದೆ ಮುಂದೆ ನೋಡದಂತಹ ಸಂಸ್ಕೃತಿಯಾಗಿರಲಿಲ್ಲ. ಆದರೆ ಕೇವಲ ಪ್ರಾಚೀನ ಸಂಸ್ಕೃತಿಯ ಗುಣಗಾಯನ ಮಾಡಿದ ಮಾತ್ರದಿಂದಲೇ ನಮ್ಮ ಕಲ್ಯಾಣವಾಗುವಂತಿಲ್ಲ. ಪ್ರಾಚೀನ ಸಂಸ್ಕೃತಿಯನ್ನು ಆಚರಣೆಗೆ ತರುವುದರಿಂದ ಮಾತ್ರವೇ ನಮ್ಮ ಕಲ್ಯಾಣವಾಗುವುದು!

---

## ಕವಿ ಚಾಮರಸ.

(ಶ್ರೀ ವ್ಹಿ. ಎಸ್. ಗುಂಡಾರಾಧ್ಯ ಮು. ಗುಲಬುರ್ಗಾ.)

---

ಭಾರತಕೆ ಬಗೆಗೊಟ್ಟು ಇತಿಹಾಸಕೆಡೆಗೊಟ್ಟು ಕನ್ನಡದಿ ಹೆಣೆದಿಟ್ಟು।
ಸೋದರಂಗೆ ಸುಡಗೊಟ್ಟು ಆಶೆ-ಆಕಾಂಕ್ಷೆಗಳ ಬಿಟ್ಟು ಬಿಟ್ಟು

ಮೌನ ಹಟವನು ತೊಟ್ಟು ಮುಂಕಾಗಿ ಮುಂದೆ ನೀಂ ಕಾವ್ಯದೇವಿಯು
ಸ್ನೇಹವಿರಹಿಯಾಗೆ। ರಸದೊರೆಯು ಬತ್ತಿತ್ತು. ನಾದನುಡಿಯುಡಗಿತ್ತು.
ಕವಿಯ "ಬಾವುಟ" ನೆಲಕೆ ಬಳುಕಿ-ಬಗ್ಗಿತ್ತು

ಛಂದಸ್ಸಿಗೆಡೆಯಿಲ್ಲ. ಷಟ್ಪದಿಗೆ ಕಾಲಿಲ್ಲ. ಲಕ್ಷಣಕೆ ರೂಪಿಲ್ಲ। ಭಾವಕ್ಕೆ
ಬೆಳಗಿಲ್ಲ. ಕಾವ್ಯಕ್ಕೆ ಕಳೆಯಿಲ್ಲ. ಕವಿತೆಕನ್ನೆಗೆ ಮೊರೆಯು ಬೇರೆಯಿಲ್ಲ

ಕಲಿಯು ಕತ್ತಲೆಯಿಂದ ಹೊರಡಲಿಲ್ಲ. ಇತಿಹಾಸ ಮುನ್ನಡೆಯ ಕಾಲು ಇಲ್ಲ. ಕವಿಗೋಷ್ಠಿ ಪೀಠಕ್ಕೆ ಅರಸನಿಲ್ಲ. ನಿನ್ನ ಮೌನದ ಅರ್ಥ ತಿಳಿಯಲಿಲ್ಲ.

ಗಗನ ತಾರೆಗಳಂತೆ ನಿನ್ನನರಸಲು ನಡೆದು, ಅಲ್ಲೊಬ್ಬ ಇಲ್ಲೊಬ್ಬ ಎಲ್ಲ ಕಡೆಗೊಬ್ಬೊಬ್ಬ। ಮಿನಗು ಮಿಣುಕಿನ ಬೆಳಗಿನಲಿ ರಸಿಕನುಂ ಚಾಣಾಕ್ಷ ಮತ್ತುಂ ವಿಮರ್ಶಕಂ.

ನಿನ್ನ ಸೊಲ್ಲನು ಕೇಳಿ ನಿನ್ನನ್ನು ಕರೆತರುವ "ಪಂತಗಾರ"! ಸಂಶೋಧನಸ್ಕವನೆ ಬಹಳ ಚತುರ। ಆದರೇಂ! ಸಿಕ್ಕಲಿಲ್ಲೈ ನೀನು. ಪೇಚುಗಾರ ನಿನ್ನನಾಳಲು ನೀನೆ ಮನದ ವೀರ.

ನಿನ್ನ ಕವಿತಾಮಧುರಗಂಗೆಯೋದಕದಲ್ಲಿ। ಸ್ನೇಹದಿಂ ಸೇವಿಸಲು ಬಲವಿಲ್ಲದವರಲ್ಲಿ। ಕೂಪ ಮಂಡೂಕವನು ಹೂಡುವವರಲ್ಲಿ। ಪಾಪಪರಿ ಮಾರ್ಜನೆಯು ಮಾಳ್ಪುದಿನ್ನೆಲ್ಲಿ?

ಸ್ವಾರ್ಥಿಗಳ ಹೋರಾಟ, ಕುಹಕಿಗಳ ಚೀರಾಟ, ಸ್ವಪ್ರಶಂಸೆಯರಂಗ ಆಡುತಿಹ ಆಟ। ತಿಳಿದ ಮನದಿಂ ನೋಡೆ ಅದು ಹೀನ ನೋಟ. ಹೊಡಿದ್ದರ್ಕೈ ಆಗ ಚದುರಂಗದಾಟ

ಸೋದರಿಯ ಹೀನತನವನು ಕಂಡು ಮೂದಲಿಸಿ ಮೂಕಾದಿಯೇನು। ಬೂದಿಯಾಗಿಹ ನಿನ್ನ ಭಾರತವ ನೆನೆನೆನೆದು ಕಾತರಿಸಿ ಶೋಕಿಸುವಿಯೇನು?

ತಪ್ಪಿಂಗೆ ತಂಗಿಯನು ದಂಡಿಸಲು ಧರ್ಮಕ್ಕೆ ತಲೆಬಾಗಿದೇನು?। ಒಪ್ಪಯ್ಯ ಆಗ ನೀಂ ತಳೆದಿದ್ದ ಮೌನಕ್ಕೆ ಕಾರಣವದೇನು?

ಚಾಮರಸ ಬೇಡಯ್ಯ ನಿನ್ನ ಸೋದರಿಯನ್ನು ಧಿಃಕರಿಸಬೇಡ। ಅಮಿತ್ರಾಂತರಾತ್ಮಕ್ಕೆ ಮಿತಗೊಳಿಸಬೇಡ. ಕ್ಷಮೆಯ ಖಡ್ಗವ ಧರಿಸಿ ಮೊಗದೊಮ್ಮೆ ನೋಡ.

ಭಸ್ಮಭಾರತದಲ್ಲಿ ಕೈಹಾಕಬೇಡ. ಬೂದಿಯನು ಸೋದರಿಗೆ ಮೈತೊಡೆಯಬೇಡ। ನಾಡನುಡಿರಸಿಕಂಗೆ ನಿಂದಿಸಲು ಬಿಡುವು ಬೇಡ। ನೀಮತ್ತೆ ಕಾವ್ಯಹಾಡ.

ಸಣ್ಣಮನುಜರು ತಮ್ಮ ಸಂಸಾರ ಚಟಗಳಿಗೆ ಅಣ್ಣತಮ್ಮಂದಿರನು ತುಳಿಯಲ್ಕೆ ನುಗ್ಗುವರು। ನೀತಿಯನು ಮೀರುವರು, ನ್ಯಾಯಕ್ಕೆ ಚಿಂತಿಸರು, ಚಟದ ಶೆಳವಿಗೆ ತಾವು ಬಾಗ ಹೋಗುವರು.

ಮುಟವುನೆಯು ಕಳಕೊಂಡು ದಾಸವೃತ್ತಿಗೆ ಸಿಲ್ಕಿ ಸೇವೆಮಾಡುವರು। ದಿಟವದೇ ತಮಗೆಂದು ಅರಿದುಕೊಂಡಿಹರು। ಅಂತೆಯೇ ಅವರಂತು ಮಾಡುತಿರುತಿಹರು.

ಕವಿಕುಮಾರವ್ಯಾಸ ಭಾರತವ ಚಿತ್ರಿಸಲು ಕನ್ನಡದ ಭಾಂಡಾರಕೆ ಡೆಯು ಕೊಡಲು। ತವಕಿಸಲು ಮನ್ನಡೆಯುಲವನಿಂಗೆ ನಿನ್ನಿಂದ ಕಂಟ ಕವು ಸಂಭವಿಸಲು.

ಕೊರಗಿದನು ಕಂಗೆಟ್ಟು ತನ್ನ ಕರ್ತವ್ಯವನು ಮುಂದೆ ಮರೆದು। ನೆರವಿಲ್ಲ, ಅರಿವಿಲ್ಲ, ಸತಿಯು ಮಾರ್ಗವ ಬಿಟ್ಟು ಬೇರೆಯಿಲ್ಲ.

ಸತಿಯು ಪ್ರೇಮದ ಕಗ್ಗತ್ತಲೆಯು ಮಬ್ಬಿನಲಿ ಇತಿಹಾಸ ಭಾರತಕೆ ಕೊಳ್ಳಿ ಹೂಡಿ। ಕೃತಿಯಿಂದ ದಹನಸಂಸ್ಕಾರವನು ಮನಮುಟ್ಟಿ ಮಾಡಿ.

ಗಂಡನಿಗೆ ಗಮನಕ್ಕೆ ದಾರಿ ತೋರಿದಳು। ಚಂಡಿಯು ಪತಿಭಕ್ತೆ ತಾನೆಂಬ ಗಾನ ಹಾಡಿದಳು। ಬೇಡಯ್ಯ ಚಾಮರಸ ಕವಿರಾಜ ನೀಂ ಮುನಿಯಬೇಡ। ಕನ್ನಡಕೆ ಬೆಳಗುತಿಹ ನಿನ್ನ ಜ್ಯೋತಿಯನೀಗನೊಂದಿ ಸಲು ಬೇಡ। ಮೌನಜಪದಿಂ ಮತ್ತೆ ಮೂಕಾಗಬೇಡ.

ಉಸಿರು ನೀನುಸಿರು ನಿಟ್ಟುಸಿರನ್ನು ಭೋರ್ಗರಿಸು ಕವಿತೆಯನ್ನು ಕುಣಿಕುಣಿಸು। ಇತಿಹಾಸವನು ಮೆರಿಸು "ಶಿವನನ್ನು" ಕರೆತಂದು ಭೂಮಿ ಗಿಳಿಸು। ಕೈಲಾಸದೋಲಗವನಿಳೆಗೆ ನೆರೆಸು, ಪ್ರಭುಲಿಂಗಲೀಲೆಯನು ಹಾಡಿ ಹರಿಸು.

ಜೈನದಾಸರ್ಕು ಬರಲಿ, ಶಿವಶರಣರಿಳೆತರಲಿ, ಕವಿಗಳೆಲ್ಲರು ಬಂದು ಕೂಡುತಿರಲಿ। ಪ್ರಭುಲಿಂಗಲೀಲೆಯನು ಹಾಡುತಿರಲಿ, ಆ ಕುಮಾರ ವ್ಯಾಸ ಮರುಗುತಿರಲಿ। ಸತಿಯು ಪುಣ್ಯದ ಫಲವನ್ನುಣ್ಣುತಿರಲಿ, ಅರ್ಧ ಭಾಗದಭೋಗ ಮಾಡುತಿರಲಿ.

ಮೊಗದೊಮ್ಮೆ ಎಂದೆಂದು ಪರರಾದರೂ ಹೀನ ಈ ಕೃತಿಯುಗ್ಗೈ ಯ್ಯದಿರಲಿ। ಕನ್ನಡದ್ರೋಹಿಗಳು, ಕವಿಪಕ್ಷಪಾತಿಗಳು ತಮ್ಮ ತಪ್ಪಿನ ಬುತ್ತಿ ಯುಂಡು ಉಣಲಿ.

ನಿನ್ನ ಮೌನದ ಗುಟ್ಟು ರಟ್ಟಾಗಲಿ, ಚಾಮರಸ ವಚನಗಂಗೋ ದಕವು ಸೆಳವಾಗಲಿ। ಬೆಳ್ಳಗಾವಿಯು ತೊರೆದು ಗದುಗಿಂಗೆ ನಡೆತಂದು ಪ್ರೌಢದೇವನ ರಾಜ್ಯದಲಿ ನಿಂದು.

ಕರಣಿಕೆಯ ಚತುರಿಯ ಬಲದಿಂದ ರಾಜ್ಯಮನವನು ಸೆಳೆದು ಎಲ್ಲವನು ತೊರೆದು। ಬನವಾಸಿ "ಮಧುಕೇಶ್ವರನ" ಸಾಕ್ಷಿ ಪ್ರಭುಲಿಂಗೆ ಲೀಲೆಯನು ಹಾಡಿ, ಗಾನಕ್ಕೆ ಕವಿತೆಯನು ನೀಡಿ.

ಹಾಯ್ ಕವಿಯೇ, ಚಾಮರಸ ನೀನೇ ಕರಣಾಳು. ತಪ್ಪಿತರ ಮನ್ನಿಸುವಿಯೇಳು। ಮುಖಬಾಡಿನಿಂದಿರ್ದ ಕವಿಕುಮಾರವ್ಯಾಸನಂ ಕಂಡು ಕರಗಿದೆಯಾ, ಮರುಗಿದೆಯಾ?

ಭಾರತವನುಚ್ಚರಿಸಲವನಿಗರುಹಿದೆಯಾ? ನಾರಾಯಣಗೆ ಶರಣು ನಡೆಯ ಕೇಳಿದೆಯಾ। ಕನ್ನಡದ ಕವಿ "ಬಿರುದ" ಕರಕೆ ಕಟ್ಟಿದೆಯಾ? ಕವಿಗೋಷ್ಠಿ ಪೀಠಕ್ಕೆ ಪಟ್ಟಗಟ್ಟಿದೆಯಾ?

ನಿನ್ನ ನಿಜಮಾರ್ಗಕ್ಕೆ ನೀನಡೆದು ವೈರಾಗ್ಯತ್ಯಾಗದರ್ಥವ ಜಗಕೆ ಸಾರಿ ಹೇಳಿದೆಯಾ?। ಚಾಮರಸ ನಿನ್ನಿಂದ ಕನ್ನಡಾಂಬೆಯ ತೃಷೆಯು ಸಂತೈಸದಾಯ್ತು ನಿಸರ್ಗಕ್ಕೆ.

ನಿನ್ನ ಸ್ವಾಗತವನಿತು ನಿರ್ವಾಹವಲ್ತು ಮರೆಯಾಯ್ತು, ಲೀನಾಯ್ತು, ಐಕ್ಯಾಯ್ತು। ಓಂ. ಓಂ. ಓಂ.। ಇನಿತೆಲ್ಲ ಬಾಯ್ನುಡಿಯೋ? ಇತಿ ಗತಿಯೋ? ನಾನರಿಯೆ, ಸಂಶೋಧಕರು। ತಂದು ಸಂದೇಶ ಸಾರಿದರೆ ವಾಚಕರು ಬಾಗುವರು ಚಾಮರಸ ಕವಿಯೆ?...

---

## ಶಿವಯೋಗಿ ಸಂದರ್ಶನ.

### (ವ್ಯಕ್ತಿಚಿತ್ರ–ಉಪದೇಶ.)

(ಲೇಖಕರು:- ಶ್ರೀ ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯರು ಬೆಂಗಳೂರು)

---

ಶಿವಸಮುದ್ರದ ಸೋಜಿಗ ನೋಡಬಯಸಿ ಮೈಸೂರಿನಿಂದ ಬೆಳಗಿನಿಂದಲೂ ಸೈಕಲ್ಲಿನ ಮೇಲೆ ಪ್ರಯಾಣ ಮಾಡಿ ೧೨ ಗಂಟೆಯ ಹೊತ್ತಿಗೆ ಟಿ. ನರಸೀಪುರದ ನದೀ ಸೇತುವೆ ಒಂದೆರಡು ಮೈಲಿ ದೂರಕ್ಕೆ ವಿಶ್ರಮಿಸಿದೆವು. ಅಲ್ಲಿ ಲೋಕಪಾವನೆ ಕಾವೇರಿ ನಮ್ಮ ದಣಿವನಾರಿಸಲು ಹಾತೊರೆಯುವಂತೆ ತೋರುತ್ತಿದ್ದಳು. ಅಲ್ಲಿ ಒಡನಿದ್ದ ಗೆಳೆಯ

ನೊಡನೆ ನದಿಗಿಳಿದು ದಹಿವಳಿಯ ದಡಸೇರಿ ಪಕ್ಕದಲ್ಲಿದ್ದ ಅಗಸ್ತ್ಯೇಶ್ವರ
ದೇವಾಲಯ, ಗುಂಜಾನರಸಿಂಹನ ಗುಲಗಂಜಿ ಮಹತ್ವದ ಪ್ರವಾದ–ರಾಶಿ
ಗಿಂತ ಗುಲಗುಂಜಿ ತೂಕ ಮಿಗಿಲೆನಿಸಿದ ದೇವರ ಹಿರಿಮೆ, ನಮ್ಮ ದಣಿ
ವನ್ನು ಮರೆಯಿಸಿತು.

ಮುಂದೆ ಸೋಸಲೆ ಮಾರ್ಗವಾಗಿ ಮುಂಬರಿದೆವು. ಊರ ಹೊರ
ಗಿನ ಹೊಲಗಳ ರಮ್ಯ ದೃಶ್ಯ ನಮ್ಮ ಕಣ್ಮನಗಳನ್ನು ಸೆರೆಗೈದಿತು.
ಕಾವೇರಿಯು ಮುದ್ದುಮಗಳಂತೆ ಹರಿಯುತ್ತಿದ್ದ ನಾಲೆಯ ಪಕ್ಕ
ದಲ್ಲಿ ಕಾಣುವ ಬಡ ಕುಟೀರ. ಅದಕ್ಕೆ ಕೋಟೆ ಕೊತ್ತಲಗಳಿಲ್ಲ. ಬಣ್ಣ
ಬೆಡಗುಗಳಿಲ್ಲ. ಸುಣ್ಣಸಾರಣೆಯ ಸುಳಿವಿಲ್ಲ. ಹೆಣ್ಣುಮಣ್ಣಿನ ಆಸೆ,
ಹೊನ್ನು ಒಡವೆಯ ಬಯಕೆ ಇಲ್ಲದಿಹ ನಿತ್ಯನಿರುಪಮವೀರ ವೈರಾ
ಗ್ಯವೇ ಮೈವೆತ್ತು ನಿಂತಂತೆ ಅದು ತೋರುವುದು. ಅಲ್ಲಿ ಆನೆ ಕುದು
ರೆಯ ಕಟ್ಟು, ಮ್ಯಾನೆ ಪಾಲಕಿ ಮೆಟ್ಟು, ಮೆರವಣಿಗೆ ಹೊಂದುತಿಹ
ಹಿರಿದು ಸಂಸಾರ ಸಹಗೊಂಡ ಸನ್ಯಾಸಿ ಸ್ವಾಮಿಗಳ ವೈಭವದ ಬೆಡ
ಗಿಲ್ಲ. ಶಿಷ್ಯರನು ಮೆಚ್ಚಿಸಲು ಭೂತಿ—ರುದ್ರಾಕ್ಷಿಗಳ ಧರಿಸಿ, ಕೋರ
ಕೆಯ ಆಡಂಬರದ ಕಾಳ—ಮೇಳದ ಗಂಟೆ—ಜಾಗಟೆಗಳ ಗದ್ದಲದ
ನಡುನಡುವೆ ಕಪಟಪೂಜೆಯ ಮಾಡಿ, ವಂಚಿಸುವ ರಾಜಸನ್ಯಾಸಿಗಳ
ಸೋಗುಗಳ ಸುಳಿವಿಲ್ಲ. ರಾಜಪ್ರೇಮವ ಗಳಿಸಿ ಮುಖಸ್ತುತಿಯ ಮಾಡು
ವರ, ಮರುಳತೆಯನರಿಯದಿಹ, ಮುಖಮುಸುಕು ಹಾಕುತಲಿ ಜಪ
ಮಣಿಯನೆಣಿಸುತಲಿ ಹೊಲ್ಲದನು ಚಿಂತಿಸುವ, ವಂಚನೆಯ ಮಿಥ್ಯಾಚಾರ
ಕೆಡೆ ಇರದ, ಒಳಹೊರಗು ಒಂದೇ ನಡೆ ಒಂದೇ ನುಡಿ, ಮಾತು ಮಾಟ
ಗಳಲ್ಲಿ ಮನಸುಕನಸುಗಳಲ್ಲಿ ವಿಷಯಗಳನರಿಯದಿಹ, ಪರಮನೊಳು
ಮನವಿರಿಸಿ ಜನರೊಳಗೆ ಬೆರೆತಿರುತ ಹಸುಳೆಯೊಲು ಕ್ರೀಡಿಸುವ ಶಿವ
ಯೋಗಿಯೋರ್ವನು ಅಲ್ಲಿ ಮಂಡಿಸಿದ್ದಾನೆ.

ತೋಪಿನಮಠದ ಪಂಚಾಕ್ಷರಿ ಸ್ವಾಮಿಗಳ ಕರಕಂಜಾತ ನಿರಂಜನ
ಹ- ಬ್ರಂ- ಷಡಕ್ಷರ ಸ್ವಾಮಿಗಳು. ಈ ಮಠವು ಮೂಲಪುರುಷರಾದ
ಶ್ರೀ ವಿರೂಪಾಕ್ಷಸ್ವಾಮಿಗಳಿಂದ ಈಗ್ಗೆ ಸುಮಾರು ಇನ್ನೂರು ವರ್ಷ
ಗಳ ಹಿಂದೆ ಇಲ್ಲಿ ಸ್ಥಾಪಿಸಲ್ಪಟ್ಟಿತು. ಅವರ ನಂತರ ಶ್ರೀ ಚನ್ನಬಸವ
ಸ್ವಾಮಿಗಳು ಮೂರನೆಯವರೇ ಈ ಮಹಾಮೂರ್ತಿಯ ಹಿರಿಯ ಗುರು
ಗಳು. ಷಡಕ್ಷರ ಸ್ವಾಮಿಗಳ ಜನ್ಮದಾತರು ಚಿದರಹಳ್ಳಿಯ ಶ್ರೀಯುತ

